## ಈ ಮಾಲೆಯಲ್ಲಿ ಪ್ರಕಟವಾಗುವ ಕಾವ್ಯಗಳು

ಪಂಪಭಾರತ ● ಆದಿಪುರಾಣ ● ಗದಾಯುದ್ಧ
ನೇಮಿನಾಥ ಪುರಾಣ (ಕರ್ಣಪಾರ್ಯ)
ನೇಮಿನಾಥ ಪುರಾಣ (ನೇಮಿಚಂದ್ರ)
ಯಶೋಧರ ಚರಿತೆ ● ಅನಂತನಾಥ
ಪುರಾಣ ● ಧರ್ಮಾಮೃತ
ಕರ್ಣಾಟಕ ಕಾದಂಬರಿ
ಪಂಚತಂತ್ರ ● ನಳಚಂಪು
ಗಿರಿಜಾಕಲ್ಯಾಣ ಮಹಾಪ್ರಬಂಧ
ಜಗನ್ನಾಥ ವಿಜಯ ● ಕಬ್ಬಿಗರ ಕಾವ
ಶಬರಶಂಕರ ವಿಲಾಸ ● ಹರಿಹರನ ರಗಳೆಗಳು

[ಮುಂದುವರಿಸಿದೆ]



...ೂಪಾಯಿಗಳು



ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ

ಚೌಂಡರಸ ವಿರಚಿತ

# ನಳಚಂಪು

ಗದ್ಯಾನುವಾದ

ಡಾ॥ ಜಿ. ವರದರಾಜರಾವ್



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು-18

1980

# ಅನುವಾದದ ಯೋಜನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹ ಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ, ಎಂ.ಎ, ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತೂ ಮೂಲ ಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯವನ್ನು ಪಡೆದು ಆ ಪುಸ್ತಕಗಳು ಸಾಧ್ಯವಾದ ಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು; ಇವು ಆ ಯೋಜನೆಯ ಮುಖ್ಯ ಅಂಶಗಳು. ಅಲ್ಲದೆ,

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಿಂದ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

ಹಳಗನ್ನಡ : ವಿಕ್ರಮಾರ್ಜುನ ವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥ ಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರ ಚರಿತೆ,

ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾಕಲ್ಯಾಣ, ಜಗನ್ನಾಥ ವಿಜಯ, ಕಬ್ಬಿಗರ ಕಾವ, ಶಬರಶಂಕರ ವಿಳಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀ ಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರ ಚರಿತೆ, ಮಲ್ಲಿನಾಥ ಪುರಾಣ, ರಾಜಶೇಖರ ವಿಳಾಸ, ಚಿಕ್ಕ ದೇವರಾಜ ವಂಶಾವಳಿ, ದಿವ್ಯಸೂರಿ ಚರಿತೆ.

ನಡುಗನ್ನಡ : ಸಿದ್ಧರಾಮ ಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥ ಚರಿತೆ, ಭರತೇಶ ವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯ ಧರ್ಮ, ನಳಚರಿತ್ರೆ, ಅದ್ಭುತ ರಾಮಾಯಣ, ಚೆನ್ನಬಸವ ಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನ ಚರಿತೆ, ಮೋಹನ ತರಂಗಿಣಿ.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತ ಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶ ಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದುವು ಸಂಕೇತವಾಗಿ ಇರಬೇಕು, ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದುವುಗಳ ವಿವರಣೆ ಅನುಬಂಧದಲ್ಲಿ ಇರಬೇಕು ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯ ಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕ ಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗೆ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದ ಕಾರ್ಯ ಮುಗಿದ ಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

4. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತ ಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ.ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15 ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು ಮೂಲಪಾಠ ಪರಿಷ್ಕಾರ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಪಡಿಸಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

5. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದ ಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದ ಮೇಲೆ ಅನುವಾದಕರಿಗೆ ಈ ಗ್ರಂಥದ ಹತ್ತು ಪ್ರತಿಗಳನ್ನು, ಅನುವಾದಕ ಮಂಡಲಿ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ಈಚೆಗೆ ಧಾರವಾಡದಲ್ಲೂ ಅನುವಾದ

ಕಾರ್ಯ ನಡೆಯುತ್ತಿದೆ. ವಿದ್ವಾಂಸರು ಅನುವಾದ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿವಹಿಸಿ ಅನುವಾದ ಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯ ಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ.

ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಚೌಂಡರಸನ ಪ್ರೌಢಕಾವ್ಯವಾದ ನಳಚಂಪು ಎಂಬ ಕೀರ್ತಿಯುತ ಕೃತಿಯು ಜನಸಾಮಾನ್ಯರಿಗಾಗಿ ಗಣ್ಯ ಕವಿ–ವಿಮರ್ಶಕರಾದ ಡಾ॥ ಜಿ. ವರದರಾಜರಾಯರು ಸಿದ್ಧಗೊಳಿಸಿದ ಅನುವಾದದೊಡನೆ ಇಲ್ಲಿ ಪ್ರಕಟವಾಗಿದೆ.

ಅನುವಾದದ ಯೋಜನೆಯನ್ನು ಕುರಿತು ಅಧ್ಯಕ್ಷರು ಅಲ್ಲದೆ ಡಾ॥ ಜಿ. ವರದರಾಜರಾಯರ ವಿಷಯವಾಗಿ ಅನುವಾದಕ ಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ವೆಂಕಟರಾಮಪ್ಪನವರು ಬರೆದಿದ್ದಾರೆ. ಕವಿ–ಕಾವ್ಯ ವಿಚಾರವನ್ನು ಕುರಿತು ವಿದ್ವತ್ಪ್ರಚುರವಾದ ಉಪೋದ್ಘಾತವೂ ಇದೆ.

ಈ ಗ್ರಂಥವನ್ನು ಈ ಮಾಲೆಯಲ್ಲಿ ಪ್ರಕಟಿಸುತ್ತಿರುವುದು ಸಂತೋಷದ ವಿಷಯ. ಇದರಿಂದ ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ಹೆಚ್ಚಿನ ಪ್ರಯೋಜನವಾಗುವುದಲ್ಲದೆ ಈ ಕಾವ್ಯವನ್ನು ಒಟ್ಟಾರೆ ಸವಿಯುವ ಹವ್ಯಾಸವುಳ್ಳ ಜನಸಾಮಾನ್ಯರಿಗೂ ಒಂದು ರಾಜಮಾರ್ಗ ಸಿದ್ಧವಾಗಿದೆ.

ಬೆಂಗಳೂರು

ವಿ. ಕೃ. ಗೋಕಾಕ
ಪ್ರಧಾನ ಸಂಪಾದಕರು

# ಪ್ರಸ್ತಾವನೆ

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ಗ್ರಂಥಪ್ರಕಟಣೆ ಒಂದು ಪ್ರಮುಖವಾದ ಚಟುವಟಿಕೆ. ಪ್ರಾರಂಭದಲ್ಲಿ ಪರಿಷತ್ತು ತನ್ನ ಆರ್ಥಿಕಸ್ಥಿತಿಯನ್ನು ಅವಲಂಬಿಸಿ ಕೆಲವೇ ಪುಸ್ತಕಗಳನ್ನು ಪ್ರಕಟಿಸಿತು. ಆದರೆ ಆ ಪುಸ್ತಕಗಳು ಅತ್ಯಂತ ಅಮೂಲ್ಯದವೂ ಅಪೂರ್ವದವೂ ಅತ್ಯುಪಯುಕ್ತದವೂ ಆಗಿವೆ. 1969 ರಿಂದ ಈಚೆಗೆ ಪರಿಷತ್ತು ತನ್ನ ಚಟುವಟಿಕೆಗಳನ್ನು ಯೋಜನಾಬದ್ಧವಾಗಿ ರೂಪಿಸಿಕೊಂಡು ತ್ರೈವಾರ್ಷಿಕ ಯೋಜನೆಯಲ್ಲಿ 100 ಪುಸ್ತಕಗಳನ್ನೂ ಪಂಚವಾರ್ಷಿಕ ಯೋಜನೆಯಲ್ಲಿ 150 ಪುಸ್ತಕಗಳನ್ನೂ ಹೊರತರಲು ಆಲೋಚಿಸಿತು. ಅದರಂತೆ ತ್ರೈವಾರ್ಷಿಕ ಯೋಜನೆಯಲ್ಲಿನ 100 ಪುಸ್ತಕಗಳೂ, ಪಂಚವಾರ್ಷಿಕ ಯೋಜನೆಯ 141 ಪುಸ್ತಕಗಳೂ ಈಗಾಗಲೇ ಪ್ರಕಟವಾಗಿವೆ. ಉಳಿದವು ಪ್ರಕಟಣೆಯ ಬೇರೆಬೇರೆ ಹಂತದಲ್ಲಿವೆ.

ಪರಿಷತ್ತು ಈಗ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಕ್ರಮಗಳನ್ನು ಆರಂಭಿಸಿದೆ. ಈ ಯೋಜನೆಯಲ್ಲೂ ಪುಸ್ತಕ ಪ್ರಕಟಣೆಯ ಚಟುವಟಿಕೆಯನ್ನೇ ಪ್ರಧಾನ ಕಾರ್ಯವನ್ನಾಗಿ ರೂಪಿಸಿಕೊಂಡಿದೆ. ಆದರೆ ಕಾಲವನ್ನು ಅನುಸರಿಸಿ ಆಯಾ ಕಾಲದ ಕನ್ನಡ ಸಾಹಿತ್ಯದ ಎಲ್ಲಾ ಆಯಾಮಗಳನ್ನೂ ಸಾಹಿತ್ಯಧೋರಣೆಯನ್ನೂ ಗಮನದಲ್ಲಿಟ್ಟುಕೊಂಡು ಪ್ರಕಟಣೆಗೆ ಪುಸ್ತಕಗಳನ್ನು ಆಯ್ದುಕೊಳ್ಳುತ್ತಿದೆ. ಆದೆಂದರೆ ಪರಿಷತ್ತು ಪ್ರಕಟಿಸುವ ಗ್ರಂಥಗಳನ್ನು ಒಂದು ಗ್ರಂಥ ಪ್ರಕಟಣಾ ಸಲಹಾಸಮಿತಿ ಪರಿಶೀಲಿಸಿ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸುವಾಗ ಪುಸ್ತಕಗಳ ವಿಷಯವನ್ನು ಕುರಿತು ಕೆಲವೊಮ್ಮೆ ಆಯಾ ವಿಷಯದಲ್ಲಿ ತಜ್ಞರಾದವರ ಅಭಿಪ್ರಾಯವನ್ನು ಪಡೆಯುತ್ತದೆ.

24-7-78 ರಿಂದ ಹೊಸ ಪದಾಧಿಕಾರಿಗಳು ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಹೊಸ ದೃಷ್ಟಿಯಿಂದ ಗ್ರಂಥ ಪ್ರಕಟಣ ಸಲಹಾಸಮಿತಿಯನ್ನು ರಚಿಸಿದೆ. ಈ ಸಮಿತಿಯ ಸಲಹೆ ಸಹಕಾರಗಳಿಂದ ಇಂದಿನ ಪುಸ್ತಕಗಳು ಹೊರಬರುತ್ತಿವೆ. ಈ ಪುಸ್ತಕಗಳಲ್ಲಿ ಅಚ್ಚಾಗದ ಪ್ರಾಚೀನ ಗ್ರಂಥಗಳು, ಅವಶ್ಯಕವಾದ ಪ್ರಾಚೀನ ಗ್ರಂಥಗಳ ಪುನರ್ಮುದ್ರಣ, ಕವಿಕಾವ್ಯ ಪ್ರಶಸ್ತಿ ಗ್ರಂಥಗಳು, ಭಾಷಾಂತರ ಕೃತಿಗಳು, ಜನ ಸಾಮಾನ್ಯರಿಗೆ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ, ಜನಪದಸಾಹಿತ್ಯ, ನಿಘಂಟುಗಳು ಇರುತ್ತವೆ. ಈ ಸಮಿತಿಯ ಪ್ರಧಾನ ಸಂಪಾದಕತ್ವದ ಸ್ಥಾನವನ್ನು ಡಾ. ವಿ. ಕೃ. ಗೋಕಾಕರು ವಹಿಸಿಕೊಂಡಿದ್ದಾರೆ. ಆ ಸಮಿತಿಯಲ್ಲಿ ಕೆಳಕಂಡ ವಿದ್ವಾಂಸರು ಸಾಹಿತಿಗಳು ಸದಸ್ಯರಾಗಿದ್ದಾರೆ.

| | |
|---|---|
| ಡಾ. ಡಿ. ಜವರೇಗೌಡ | ಡಾ. ಜಿ. ಎಸ್. ಶಿವರುದ್ರಪ್ಪ |
| ಡಾ. ಬಿ. ಎಸ್. ಕುಲಕರ್ಣಿ | ಶ್ರೀ ಜಿ. ಎಚ್. ನಾಯಕ |
| ಶ್ರೀ ವಿ. ಸೀ. ಹಿತ್ತಲಮನಿ | ಶ್ರೀ ವೈ. ಎನ್. ಕೃಷ್ಣಮೂರ್ತಿ |
| ಶ್ರೀ ಜಿ. ನಾರಾಯಣ | ರಾಜ್ಯ ಗ್ರಂಥಾಲಯಾಧಿಕಾರಿಗಳು |
| ರಾಜ್ಯ ಪಠ್ಯಪುಸ್ತಕ ಸಮಿತಿಯ ನಿರ್ದೇಶಕರು | |

ಅಲ್ಲದೆ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಡಿ. ಲಿಂಗಯ್ಯ, ಶ್ರೀ ಲಕ್ಷ್ಮಣ ತೆಲಗಾವಿ, ಕೋಶಾಧಿಕಾರಿಗಳಾದ ಶ್ರೀ ಎಂ. ಪಿ. ದೇವರಾಜ್ ಅವರು ಅಧಿಕಾರ ನಿಮಿತ್ತ ಸದಸ್ಯರಾಗಿರುತ್ತಾರೆ.

ಕನ್ನಡ ಜನತೆಗೆ ಒಳ್ಳೆಯ ಸಾಹಿತ್ಯವನ್ನು ಸುಲಭ ಬೆಲೆಗೆ ಒದಗಿಸಬೇಕು, ಕಾಲ ಕಾಲಕ್ಕೆ ಜನತೆಯ ಆಶೋತ್ತರಗಳನ್ನು ಪೂರೈಸುವಂತೆ ವೈಚಾರಿಕ-ವೈಜ್ಞಾನಿಕ ಸಾಹಿತ್ಯ ವನ್ನು ನೀಡಬೇಕು. ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಶ್ರೇಷ್ಠ ಕೊಡುಗೆಗಳನ್ನು ಪರಿಷತ್ತು ಜನತೆಗೆ ನೀಡಬೇಕು ಎಂಬ ಪರಿಷತ್ತಿನ ಧ್ಯೇಯ ಧೋರಣೆಗಳನ್ನು ಗಮನಿಸಿ ಕರ್ನಾಟಕ ರಾಜ್ಯ ಸರ್ಕಾರದವರು ಉದಾರ ಸಹಾಯ ನೀಡಿದ್ದಾರೆ ಮತ್ತು ನೀಡುತ್ತಿದ್ದಾರೆ.

ಪರಿಷತ್ತು ಈಗ ತನ್ನ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಗಳನ್ನು ಆರಂಭಿಸಿದೆ. ಆ ಅವಧಿಯಲ್ಲಿ ಮೇಲೆ ತಿಳಿಸಿದಂತೆ ಅನೇಕ ಹೊಸ ಪುಸ್ತಕಗಳನ್ನು ಹೊಸದಾಗಿ ಹಾಕಿಕೊಂಡ ಧ್ಯೇಯಧೋರಣೆಗಳಿಗನುಸಾರವಾಗಿ ಹೊರತರಲು ಯತ್ನಿಸುತ್ತದೆ ಎಂಬ ನಂಬಿಕೆ ನನಗಿದೆ. ಈ ಕಾರ್ಯದಲ್ಲಿ ಗ್ರಂಥಪ್ರಕಟಣ ಸಲಹಾ ಸಮಿತಿ ಸದಸ್ಯರು, ಲೇಖಕರು, ಸಾಹಿತ್ಯ ವಿದ್ವಾಂಸರು ಮತ್ತು ರಾಜ್ಯ ಸರಕಾರ ಸಹಕಾರ ನೀಡುತ್ತಿದ್ದಾರೆ. ಅವರಿಗೆಲ್ಲ ಪರಿಷತ್ತು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪರಿಷತ್ತಿನ ಪ್ರಕಟಣೆಗಳು ಕನ್ನಡಿಗರಿಗೆ ಲಾಭದಾಯಕವಾಗುವುದರಲ್ಲಿ ಸಂದೇಹ ವಿಲ್ಲ. ಆ ಲಾಭವನ್ನು ಅವರು ಪಡೆದು ನಾಡುನುಡಿಯ ಸೇವೆಯಲ್ಲಿ ಪಾಲುದಾರರಾಗ ಬೇಕೆಂದು ಪ್ರಾರ್ಥಿಸುತ್ತೇನೆ. ಈ ಮಾಲೆಯಲ್ಲಿ ಡಾ. ಜಿ. ವರದರಾಜರಾವ್ ಅವರು ಚೌಂಡರಸ ಕವಿಯ ನಳಚಂಪು ಕಾವ್ಯವನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಅದಕ್ಕಾಗಿ ಅವರಿಗೆ ಪರಿಷತ್ತು ಕೃತಜ್ಞವಾಗಿದೆ.

ಹಂಪ. ನಾಗರಾಜಯ್ಯ
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಬಿನ್ನಹ

ಡಾ॥ ಜಿ. ವರದರಾಜರಾಯರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ತಮ್ಮ ವೃತ್ತಿಯನ್ನಾರಂಭಿಸಿ ಅನೇಕ ಶಿಷ್ಯರ ಗೌರವಾದರಗಳಿಗೆ ಪಾತ್ರರಾದವರು. ಕೊನೆಯಲ್ಲಿ ಇವರು ಮಂಗಳಗಂಗೋತ್ರಿಯಲ್ಲಿ ಸ್ನಾತಕೋತ್ತರ ಶಿಕ್ಷಣ ಕೇಂದ್ರದಲ್ಲಿ ಕನ್ನಡ ಪ್ರಾಧ್ಯಾಪಕರಾಗಿಯೂ ನಿರ್ದೇಶಕರಾಗಿಯೂ ಕೆಲಸ ಮಾಡಿ ಉದ್ಯೋಗದಿಂದ ವಿರಮಿಸಿದರು. ಆರಂಭದಿಂದಲೂ ಶ್ರೀಯುತರು ಕವಿತೆ, ಕಥೆ, ವಿಮರ್ಶೆ, ಪ್ರಬಂಧ ಮೊದಲಾದ ಕ್ಷೇತ್ರಗಳಲ್ಲಿ ಕೃಷಿಮಾಡಿ ಹಲವು ಕೃತಿಗಳನ್ನು ರಚಿಸಿದ್ದಾರೆ. "ಕುಮಾರರಾಮನ ಸಾಂಗತ್ಯಗಳು" ಎಂಬ ವಿಚಾರವನ್ನು ಕುರಿತು ಪ್ರೌಢವಾದ ನಿಬಂಧವನ್ನು ರಚಿಸಿ ಮೈಸೂರು ವಿಶ್ವವಿದ್ಯಾನಿಲಯದ (Ph D.) ಪಿಎಚ್.ಡಿ. ಪದವಿಯನ್ನು ಪಡೆದರು. ಅಷ್ಟೇ ಅಲ್ಲದೆ ಉದ್ಯೋಗದಿಂದ ವಿಶ್ರಾಂತರಾದ ಮೇಲೆಯೂ ಸಂಶೋಧಕರಾಗಿ ಕೆಲಸ ನಡೆಸಿ ಶ್ರೀಪಾದರಾಜರು, ಮಹೀಪತಿರಾಯರು ಮೊದಲಾದ ಪ್ರಸಿದ್ಧ ಹರಿದಾಸರ ಕೃತಿಗಳನ್ನು ಸಂಗ್ರಹಿಸಿ, ಸಂಶೋಧಿಸಿ, ಪರಿಷ್ಕರಣ ಮಾಡಿದರು. ಇವುಗಳನ್ನು ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದೆ. ಈಗಲೂ ಶ್ರೀಯುತರು ಹರಿದಾಸ ಸಾಹಿತ್ಯದ ಸಂಶೋಧನಾ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಇವರ ವಿದ್ವತ್ತು ಸಂಶೋಧದೆ, ಸೃಜನಾತ್ಮಕ ಸಾಹಿತ್ಯಕಾರ್ಯ ಮೊದಲಾದುವನ್ನು ಗಮನಿಸಿ ವಿಶ್ವವಿದ್ಯಾನಿಲಯ ಅನುದಾನ ಸಮಿತಿಯವರು ರಾಯರಿಗೆ ಸಂಶೋಧಕ ಸಂಭಾವನೆ ನೀಡಿ (ಗೌರವಿಸಿ) ದ್ದಾರೆ. ಇಂಥ ವಿದ್ಯಾಧಿಕರು ಕನ್ನಡಸಾಹಿತ್ಯ ಪರಿಷತ್ತು ಕೈಕೊಂಡ ಅನುವಾದ ಕಾರ್ಯದಲ್ಲಿ ಸಹಕರಿಸಲು ಒಪ್ಪಿದ್ದು ಅವರ ಸಾಹಿತ್ಯ ಸೇವಾಶ್ರದ್ಧೆಗೆ ಸಾಕ್ಷಿಯಾಗಿದೆ. ಶ್ರೀ ರಾಯರು ಚೌಂಡರಸನ 'ನಳಚಂಪು' ವನ್ನು ಅನುವಾದಕ್ಕೆ ಆಯ್ದುಕೊಂಡು ಅದರಲ್ಲಿನ ಹಲವು ಪಾಠಕ್ಲೇಶಗಳನ್ನು ಸರಿಪಡಿಸಲು ಶ್ರಮಿಸಿದ್ದಾರೆ. ಬೇರೊಂದು ಪ್ರಾಚೀನ ಪ್ರತಿ ಲಭಿಸುವವರೆಗೆ ಕೆಲವು ಸಮಸ್ಯೆಗಳು ಅನಿವಾರ್ಯವಾಗಿ ಉಳಿಯಲೇಬೇಕಾಗಿದೆ. ಶ್ರೀ ವರದರಾಜರಾಯರು ಅನಗತ್ಯವಾಗಿ ಸ್ವಾತಂತ್ರ್ಯವಹಿಸಿ ಮೂಲವನ್ನು ತಿದ್ದುವ ಗೋಜಿಗೆ ಹೋಗದೆ ಆದಮಟ್ಟಿಗೂ ಸರಳವಾಗಿ ಓದಬಲ್ಲ ಕನ್ನಡಿಗರಿಗೆಲ್ಲ ಅರ್ಥವಾಗುವಂತೆ ಅತ್ಯಂತ ಸುಲಭ ಭಾಷೆಯಲ್ಲಿ ಅನುವಾದವನ್ನು ಬರೆದು ಪರಿಷತ್ತಿನ ಉದ್ದೇಶ ಸಫಲಗೊಳ್ಳುವಂತೆ ಶ್ರಮಿಸಿದ್ದಾರೆ. ಕಥೆಯ ಹಿನ್ನೆಲೆ, ಕವಿ

ವಿಚಾರ ಮೊದಲಾದುವುಗಳನ್ನು ತಿಳಿಸುವ ಉಪಯುಕ್ತವಾದ ಮುನ್ನುಡಿಯನ್ನೂ ಸಮೃದ್ಧವಾದ ಶಬ್ದಕೋಶವನ್ನೂ ಜೋಡಿಸಿ ವಾಚಕರ ಕ್ಲೇಶವನ್ನು ಬಹಳಮಟ್ಟಿಗೆ ತಗ್ಗಿಸಿದ್ದಾರೆ. ಈ ಕೃತಿ ಸಾಮಾನ್ಯವಾಚಕರಿಗೂ ಸಾಹಿತ್ಯಾಭ್ಯಾಸಿಗಳಿಗೂ ಬಹಳ ಉಪಯುಕ್ತವಾಗಿದ್ದು ಕನ್ನಡಿಗರ ಪ್ರೀತ್ಯಾದರಗಳನ್ನು ಪಡೆಯಲೆಂದು ಹಾರೈಸುತ್ತೇನೆ.

ಕೆ. ವೆಂಕಟರಾಮಪ್ಪ
ಮೈಸೂರು ಸಮಿತಿ ಅಧ್ಯಕ್ಷ

# ವಿಷಯ ಸೂಚಿಕೆ

# ಕವಿ ಕಾವ್ಯ ವಿಚಾರ

ಚೌಡರಸನು 'ನಳಚಂಪು'ವಿನಲ್ಲಿ ಆತ್ಮವೃತ್ತಾಂತವನ್ನೇನನ್ನೂ ಹೇಳಿಕೊಳ್ಳದೆ, ಗ್ರಂಥಾಂತ್ಯದಲ್ಲಿ ತಾನು ವಿರಚಿಸಿದ ಕೃತಿಗಳನ್ನು ಕುರಿತು ಹೀಗೆ ಹೇಳಿರುವನು.

> ಬಾಣಾಸುರ ವಿಜಯಂ ಕ
> ಲ್ಯಾಣ ನಳಖ್ಯಾತಿ ದಶಕುಮಾರ ಚರಿತ್ರಂ
> ಕ್ಷೋಣೀಜನ ಕರ್ಣಮನಃ
> ಪ್ರೀಣನಮಿವು ಚೌಂಡರಾಜ ವಿರಚಿತ ಕೃತಿಗಳ್ (ಪ. ೭೭೬)

ಆದ್ದರಿಂದ, ಈತನು ಬಾಣಾಸುರ ವಿಜಯ, ಕಲ್ಯಾಣ ನಳಖ್ಯಾತಿ (ನಳಚಂಪು), ದಶಕುಮಾರ ಚರಿತ್ರ ಎಂಬ ಲೋಕಪ್ರಿಯವಾದ ಕೃತಿಗಳನ್ನು ಬರೆದಿರುವನೆಂಬುದು ಸ್ಪಷ್ಟವಾಗುತ್ತದೆ. ಈತನ ಅಭಿನವ ದಶಕುಮಾರ ಚರಿತೆಯಲ್ಲಿ ಬೇರಾವ ಕಾವ್ಯಗಳ ಹೆಸರೂ ಉಲ್ಲೇಖವಾಗಿಲ್ಲದಿರುವುದರಿಂದ, ಅದೇ ಅವನ ಪ್ರಥಮ ಕೃತಿಯಾಗಿರಬಹುದು. ಆ ತರುವಾಯ 'ಬಾಣಾಸುರ ವಿಜಯ'ವನ್ನು ಬರೆದಿರಬೇಕು. ಈ ಕೃತಿ ಈವರೆಗೂ ನಮಗೆ ದೊರೆತಿಲ್ಲ. ಸದ್ಯಕ್ಕೆ ಈತನ 'ನಳಚಂಪು'ವೇ ಕಡೆಯ ಕೃತಿಯಾಗಿರಬಹುದೆಂದು ಭಾವಿಸಬಹುದು. ಈವರೆಗೆ ಉಪಲಬ್ಧವಾಗಿರುವ ಎರಡು ಕೃತಿಗಳೂ ಚಂಪೂ ಕಾವ್ಯವಾಗಿರುವುದರಿಂದ 'ಬಾಣಾಸುರ ವಿಜಯ'ವೂ ಒಂದು ಚಂಪೂ ಕಾವ್ಯವಾಗಿದ್ದು, ಶಿವ ಭಕ್ತನಾದ ಬಾಣಾಸುರನನ್ನು ಮನ್ಮಥನ ಮೊಮ್ಮಗನಾದ ಅನಿರುದ್ಧನ ನಿಮಿತ್ತದಿಂದ ಶ್ರೀಕೃಷ್ಣನು ಗೆದ್ದ ಸುಪ್ರಸಿದ್ಧ ಪೌರಾಣಿಕ ಕಥಾವಸ್ತುವನ್ನು ಕುರಿತುದಾಗಿರಬಹುದು.

'ಅಭಿನವ ದಶಕುಮಾರ ಚರಿತೆ'ಯಲ್ಲಿ ಕವಿ ಸ್ವಂತ ವಿಷಯವನ್ನು ಬಹುಮಟ್ಟಿಗೆ ಹೇಳಿಕೊಂಡಿದ್ದಾನೆ. ಈತನ ತಂದೆ ಮಧುಸೂದನ ; ತಾಯಿ ಮಲ್ಲವೆ ; ಅಣ್ಣ ಸರಸ ಕವೀಶ್ವರ, ಹೆಂಡತಿ ಲಕ್ಷ್ಮಿ. ತಾನು ಬ್ರಾಹ್ಮಣನೆಂದೂ, ತನ್ನ ಗೋತ್ರ ಭಾರದ್ವಾಜವೆಂದೂ, ಉದ್ದಂಡ ಮನೋಹರನ ಶಿಷ್ಯನೆಂದೂ, ವಿಟ್ಠಲನ ಪಾದಪದ್ಮಭೃಂಗನೆಂದೂ, ಗುಣವಂತನಾಗಿ ಕವಿತಾವಿಳಾಸನೆಂಬ ಬಿರುದನ್ನು ಪಡೆದವನೆಂದೂ ನಿವೇದಿಸಿಕೊಂಡಿರುವನು. 'ನಳಚಂಪು'ವಿನಲ್ಲಿ 'ಕರ್ನಾಟವಂಶ ಶೃಂಗಾರರಸಂ' ಎಂದು ಹೇಳಿಕೊಂಡಿರುವನು.

ಈತನು ಪೂರ್ವಕವಿಗಳನ್ನು ಸ್ಮರಿಸುವಲ್ಲಿ ಜೈನರಾದ ಪಂಪ, ಪೊನ್ನ, ಬ್ರಾಹ್ಮಣರಾದ ಚಂದ್ರರಾಜ, ರುದ್ರಭಟ್ಟರನ್ನು ಹೊಗಳಿರುವನು. ಇವರಲ್ಲಿ ರುದ್ರಭಟ್ಟನೇ ಇತ್ತೀಚಿನವನಾಗಿರುವುದರಿಂದ, ಶ್ರೀ ರಾ. ನರಸಿಂಹಾಚಾರ್ಯರು ಅಭಿಪ್ರಾಯಪಡುವಂತೆ (ಕರ್ಣಾಟಕ ಕವಿಚರಿತೆ, ೧೯೬೧, ಸಂಪುಟ I, ಪು. ೪೫೭) ಅವನ ಕಾಲದಿಂದ ಈಚೆಗೆ, ಎಂದರೆ ಕ್ರಿ. ಶ. ಸು. ೧೧೮೫ ರಿಂದ ಈಚೆಗೆ ಇದ್ದಿರಬೇಕೆಂದು ದೃಢವಾಗುತ್ತದೆ. ಇವನನ್ನು ಬೇರಾವ ಕವಿಗಳೂ ಸ್ತುತಿಸಿರುವುದು ಈವರೆಗೆ ಕಂಡುಬಾರದಿರುವುದರಿಂದ,

ಈತನ ಕಾಲದ ಪರಮಾವಧಿಯನ್ನು ನಿರ್ಧರಿಸಲು ಬೇರೆ ಆಧಾರಗಳನ್ನು ಅವಲಂಬಿಸ ಬೇಕಾಗುತ್ತದೆ.

ಶ್ರೀ ಶ್ರೀನಿವಾಸ ರಾಜಪುರೋಹಿತರು ಈ ಉತ್ತರಾವಧಿಯನ್ನು ನಿರ್ಧರಿಸಲು ಕೊಟ್ಟಿರುವ ಕಾರಣಗಳಲ್ಲಿ ಈ ಎರಡು ಪ್ರಮುಖಾಂಶಗಳು ಪರಿಶೀಲನಾರ್ಹವಾದುವು :

(i) ಚೌಂಡರಸನು ಅಪಹಾರವರ್ಮನ ಕಥೆಯಲ್ಲಿ ಉಕ್ತವಾಗಿರುವ ಚಂಪಾ ನಗರದ ರಾಜನ ಒಡ್ಡೋಲಗವನ್ನು ವರ್ಣಿಸುವಾಗ, ಸಂಸ್ಕೃತದಲ್ಲಿರುವ ದಂಡಿಯ ಕೃತಿಯಲ್ಲಿ ಕಂಡುಬಾರದ ಕೆಲವು ರಾಜರ ಹೆಸರುಗಳನ್ನು ಹೇಳಿರುವನು. ಇಲ್ಲಿ 'ಸಿಂಘಣಂ ಪದ್ಮಿನೀ ನಾರೀಸಂತತಿಯುಂ ಕಳಿಪಿದಂ' ಎಂದು ಹೇಳಿರುವಲ್ಲಿ ಅದು ಕ್ರಿ. ಶ. ೧೨೧೦ ರಿಂದ ೧೨೪೭ರವರೆಗೆ ರಾಜ್ಯವಾಳಿದ ದೇವಗಿರಿ ಯಾದವ ಸಿಂಘಣರಾಜನಿಗೆ ಅನ್ವಯಿ ಸುತ್ತದೆ. ಆದ್ದರಿಂದ, ಈ ದೇವಗಿರಿ ಯಾದವ ಸಿಂಘಣರಾಜನ ಆಳಿಕೆಯಲ್ಲಿ ಚೌಂಡ ರಸನು ತನ್ನ ಅಭಿನವ ದಶಕುಮಾರ ಚರಿತವನ್ನು ಬರೆದವನೆಂದು ದೃಢವಾಗುತ್ತದೆ.

(ii) 'ಅಭಿನವ ದಶಕುಮಾರ ಚರಿತೆ'ಯ ೧೪ನೆಯ ಆಶ್ವಾಸದಲ್ಲಿ ವರ್ಣಿತ ವಾಗಿರುವ ಪಂಡರಪುರ ಕ್ಷೇತ್ರವನ್ನು ಪ್ರಸ್ತಾಪಿಸುವಲ್ಲಿ, ಅದನ್ನು 'ಪಾಂಡುರಂಗ' ಎಂದು ಮೇಲಿಂದ ಮೇಲೆ ಹೇಳಿರುತ್ತಾನೆ. ಇಂದಿನ ಪಂಡರಾಪುರಕ್ಕೆ ಈ ಕ್ಷೇತ್ರನಾಮವು ಕ್ರಿ. ಶ. ಸುಮಾರು ಹದಿಮೂರನೆಯ ಶತಮಾನದವರೆಗೆ ಪ್ರಚಲಿತವಾಗಿತ್ತು. ಆ ಶತಮಾನದ ಉತ್ತರಾರ್ಧಕ್ಕೆ ಸೇರಿದವರಾದ ಜ್ಞಾನದೇವ, ನಾಮದೇವ ಮೊದಲಾದ ಮಹಾರಾಷ್ಟ್ರದ ಸಂತರು ವಿಟ್ಠಲನನ್ನು ಮಾತ್ರ ಪಾಂಡುರಂಗನೆಂದು ಕರೆದಿರುವರಲ್ಲದೆ, ಆ ಕ್ಷೇತ್ರವನ್ನು 'ಪಂಡರೀಪುರ' ಎಂದು ನಿರ್ದೇಶಿಸಿರುತ್ತಾರೆ. ಚೌಂಡರಸನಲ್ಲಿ ವಿಟ್ಠಲನನ್ನು ಕೊಂಡಾಡು ವಾಗ 'ಜಯ ಪಂಡರೀಪುರ ಪ್ರಮೋದ' ಎಂಬ ಪ್ರಯೋಗವೂ ತೋರಿಬರುವುದರಿಂದ, ಈ ಕ್ಷೇತ್ರನಾಮವು ಮೊದಲು 'ಪಾಂಡುರಂಗ' ಎಂಬುದಾಗಿದ್ದು, 'ಪಂಡರೀಪುರ' ಎಂದು ಮಾರ್ಪಡುವ ಕಾಲದಲ್ಲಿ ಚೌಂಡರಸನು ಜೀವಿಸಿದ್ದು ಆಗ ಪ್ರಕೃತ ಕಾವ್ಯವನ್ನು ರಚಿಸಿರಬಹುದು.

(iii) ಕವಿಯು ಪಂಡರಾಪುರವನ್ನೂ, ಪಾಂಡುರಂಗ ವಿಟ್ಠಲನನ್ನೂ ಮುಕ್ತ ಕಂಠದಿಂದ ಸ್ತುತಿಸಿರುವುದರಿಂದ ಆ ಸ್ಥಳದವನೇ ಆಗಿದ್ದಿರಬೇಕು. ವಿಟ್ಠಲನನ್ನು ವರ್ಣಿಸುವಾಗ 'ಸನ್ಮೂರ್ತಿಸಾಕಾರದ ಚೆಲ್ವಿಂದಂ ನಿರಾಕಾರಿಗಳ ಬಗೆಯುನೀಡಾಡಿ ಸಂದೇಹಮಂ ಪೊರ್ದದೆ ತೋರ್ಪಂ ದಿವ್ಯರೂಪಂ ಮನುಜತತಿಗೆ' ಎಂದು ಹೇಳಿರುವುದ ರಿಂದ ಈತನು ನಿರಾಕಾರವಾದಿಗಳಾದ ಅದ್ವೈತಮತಸ್ಥನಲ್ಲವೆಂದೂ, ಆತನ ಕಾಲಕ್ಕೆ ವಿಶೇಷ ಪ್ರಾಶಸ್ತ್ಯವನ್ನು ಗಳಿಸಿದ್ದ ವಿಶಿಷ್ಟಾದ್ವೈತಮತದವನಿರಬಹುದೆಂದೂ ಹೇಳು ವುದು ಅತಿಶಯುಕ್ತಿಕವಾಗಿದೆ ಎಂಬುದಾಗಿ ನಿರ್ಣಯಿಸಿರುವರು.[1]

---

1 ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೯೨೪, ಸಂ. IX, ಸಂ. ೧, ಪು. ೧೯-೨೫.

ಮೈಸೂರು ವಿಶ್ವವಿದ್ಯಾನಿಲಯದವರಿಂದ ಪ್ರಕಟಿತವಾಗಿರುವ 'ನಳಚಂಪು'[೩] ಎಂಬ ಗ್ರಂಥಕ್ಕೆ 'ಉಪೋದ್ಘಾತ'ವನ್ನು ಬರೆದಿರುವ ಶ್ರೀ ಹೆಚ್. ಆರ್. ರಂಗಸ್ವಾಮಿ ಯ್ಯಂಗಾರ್ಯ ಅವರು ಮೇಲ್ಕಂಡ ಅಭಿಪ್ರಾಯಗಳನ್ನು ಪುನರ್ವಿಮರ್ಶಿಸಿ ಹೀಗೆ ಹೇಳಿರುವರು :

(i) ಅಪಹಾರವರ್ಮನ ಕಥೆಯಲ್ಲಿ ಪ್ರಾಸಂಗಿಕವಾಗಿ ಉಕ್ತವಾಗಿರುವ ಹೆಸರುಗಳು ದೇಶವಾಚಕವೇ ವಿನಾ, ಆಯಾ ರಾಜರ ಹೆಸರನ್ನು ಸೂಚಿಸುವುದಿಲ್ಲ. 'ನಳಚಂಪು'ವಿನಲ್ಲಿ ಭೀಮರಾಜನು ದಮಯಂತೀ ಸ್ವಯಂವರಕ್ಕೆ ಆಹ್ವಾನವನ್ನು ಕಳುಹಿಸುವಲ್ಲಿ ಸೌರಾಷ್ಟ್ರ, ಪಾಂಡ್ಯ, ಚೋಳ, ಸಿಂಹಣಾದಿ ರಾಜರಿಗೆ ಕಳುಹಿಸಿದನು ಎಂದಿದೆ. ಸ್ವಯಂವರ ಮಂಟಪ ದಲ್ಲಿ ಬೇರೆ ಬೇರೆ ರಾಜರನ್ನು ದಮಯಂತಿಗೆ ಪರಿಚಯ ಮಾಡಿಕೊಡುವಲ್ಲಿ ಸಖಿಯು 'ನೋಡೆಲೇ ಸತಿ ಕರ್ಣಾಟಕನೃಪಾಲನಂ' 'ಈತಂ ಸಿಂಹಪತಿ' ಎಂದು ಸ್ಪಷ್ಟವಾಗಿ ಬೇರೆ ಬೇರೆ ದೇಶಗಳ ರಾಜರುಗಳನ್ನು ನಿರ್ದೇಶಿಸಿರುವುದರಿಂದ, ಈ ಹೇಳಿಕೆಯ ಆಧಾರದ ಮೇಲೆ ಕವಿಯ ಕಾಲದ ಉತ್ತರಾವಧಿಯನ್ನು ನಿರ್ಣಯಿಸಲು ಸಾಧ್ಯವಿಲ್ಲ.

(ii) ಪಂಡರಾಪುರವನ್ನು ಪಾಂಡುರಂಗವೆಂದು ಕರೆದಿರುವುದು, ಅಲ್ಲಿನ ದೇವತೆ ಯನ್ನು ಸ್ತುತಿಸುವಲ್ಲಿ ಅಭಂಗ ವಿಟ್ಠಲನೆಂದು ಸಂಬೋಧಿಸಿರುವುದು ಮೊದಲಾದುವು ಗಳನ್ನು ಗಮನಿಸಿದರೆ, ಆ ಕ್ಷೇತ್ರಕ್ಕೆ ಆತನ ಕಾಲಕ್ಕೆ ಇನ್ನೂ ಹಳೆಯ ಹೆಸರೇ ಇತ್ತೆಂದು ವ್ಯಕ್ತವಾಗುತ್ತದೆ. ಕ್ರಿ. ಶ. ೧೨೭೦ ರಲ್ಲಿ ರಚಿತವಾದ ಒಂದು ಶಾಸನದಲ್ಲಿ ಆ ಊರನ್ನು ಪಾಂಡುರಂಗವೆಂದೂ, ದೇವರನ್ನು ವಿಟ್ಠಲನೆಂದೂ ಕರೆದಿರುವುದನ್ನು ನೋಡಿದರೆ, ಚೌಂಡರಸನು ಕ್ರಿ. ಶ. ೧೨೭೦ಕ್ಕಿಂತ ಹಿಂದೆ ಇದ್ದಿರಬೇಕೆಂದು ಊಹಿಸಬಹುದಾಗಿದೆ. (ಹದಿಮೂರನೆಯ ಶತಮಾನದ ಕೊನೆಯಲ್ಲಿದ್ದ ಮಹಾರಾಷ್ಟ್ರ ಸಾಧುಸಂತರಾದ ಜ್ಞಾನ ದೇವ, ನಾಮದೇವ ಮೊದಲಾದವರು ಪಾಂಡುರಂಗ ಕ್ಷೇತ್ರಸ್ವಾಮಿಯಾದ ವಿಟ್ಠಲನನ್ನು ಪಾಂಡುರಂಗನೆಂದು ಸ್ತುತಿಸಿರುವರು.)

(iii) 'ಅಭಿನವ ದಶಕುಮಾರ ಚರಿತೆ' ಮತ್ತು 'ನಳಚಂಪು'ವಿನಲ್ಲಿರುವ ಕೆಲವು ಪದ್ಯಗಳು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ದಲ್ಲಿ ಸಂಕಲಿತವಾಗಿರುವುದರಿಂದ ಚೌಂಡರಸನು ಕ್ರಿ. ಶ. ಸು. ೧೨೪೦ಕ್ಕೆ ಮುಂಚೆ ಇದ್ದಿರಬೇಕೆಂದು ದೃಢವಾಗುತ್ತದೆ.[೩]

---

[೨] ಚೌಂಡರಾಜಕೃತ ನಳಚಂಪು : ಸಂ. ಹೆಚ್. ಆರ್. ರಂಗಸ್ವಾಮಿ ಐಯಂಗಾರ್ ಮತ್ತು ವಿದ್ವಾನ್ ಎಸ್. ಎನ್. ಕೃಷ್ಣಜೋಯಿಸ್, ಪ್ರಾಚ್ಯಸಂಶೋಧನಾಲಯದ ಪ್ರಕಟನೆ, ಕನ್ನಡಗ್ರಂಥ ಮಾಲಿಕೆಯ ಸಂಖ್ಯೆ 30, 1952.

[೩] ಈ ವಿಚಾರ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು ಬರೆದಿರುವ 'ಚೌಂಡರಸನ ಕಾಲವಿಚಾರ' ಎಂಬ ಲೇಖನದಲ್ಲಿ ಪ್ರಸ್ತಾಪಿಸಲಾಗಿದೆಯೆಂದು ಪ್ರಕೃತ ನಳಚಂಪುವಿನ ಉಪೋದ್ಘಾತದ ಮೂಲಕ ತಿಳಿದುಬರುತ್ತದೆ. ಈ ಲೇಖನ ಜಯಕರ್ನಾಟಕದ ಎಂಟನೆಯ ಸಂಪುಟದಲ್ಲಿ ಪ್ರಕಟಿತ ವಾಗಿದೆ. ಈ ಲೇಖನ ನನಗೆ ಲಭಿಸಲಿಲ್ಲ. ಶ್ರೀಯುತರ 'ಪೀಠಿಕೆಗಳು ಮತ್ತು ಲೇಖನಗಳು' ಎಂಬ ಬೃಹತ್‌ಸಂಕಲನದಲ್ಲಿಯೂ ಸೇರ್ಪಡೆಯಾಗಿಲ್ಲ.

(iv) ಕವಿಯು ತನ್ನ ಎರಡು ಕೃತಿಗಳನ್ನು ಪ್ರಾರಂಭಿಸುವಾಗಲೂ ಅಭಿನವ ದಶಕುಮಾರಚರಿತೆಯಲ್ಲಿ ಪ್ರತಿಯೊಂದು ಆಶ್ವಾಸದ ಪ್ರಾರಂಭ ಮತ್ತು ಸಮಾಪ್ತಿ ವಾಕ್ಯಗಳಲ್ಲಿಯೂ 'ಅಭಂಗ ವಿಟ್ಠಲ' ನನ್ನು ಮುಕ್ತಕಂಠದಿಂದ ಸ್ತುತಿಸಿರುತ್ತಾನೆ. 'ಅಭಿನವ ದಶಕುಮಾರ ಚರಿತೆ'ಯ ಹದಿನಾಲ್ಕನೆಯ ಆಶ್ವಾಸದಲ್ಲಿ ಪ್ರಾಸಂಗಿಕವಾಗಿ ಕಥಾನಾಯಕನು ಪಂಡರಾಪುರ ಕ್ಷೇತ್ರವನ್ನೂ, ದೇವಾಲಯವನ್ನೂ, ವಿಟ್ಠಲನನ್ನೂ ಕೊಂಡಾಡುವುದು ಕಂಡುಬರುತ್ತದೆ. ಈ ಮೂಲಕ ಕವಿಯು ಅಭಂಗ ವಿಟ್ಠಲನ ಭಕ್ತನೆಂದೂ, ಸೊಲ್ಲಾಪುರದ ಪ್ರಾಂತದವನಿರಬಹುದೆಂದೂ ವಿದಿತವಾಗುತ್ತದೆ. ಈತನು ನಳಚಂಪುವಿನಲ್ಲಿ 'ದ್ವಿಜ' ಎಂಬ ಶಬ್ದವನ್ನು ಮೇಲಿಂದ ಮೇಲೆ 'ಬ್ರಾಹ್ಮಣ' ಎಂಬ ಅರ್ಥದಲ್ಲಿಯೇ ಪ್ರಯೋಗಿಸಿರುವುದರಿಂದ ಈತನು ಬ್ರಾಹ್ಮಣನೆಂದು ಹೇಳುವುದು ಸಾಧುವಾಗಿದೆ. (ಪು v-ix) ಡಾ. ರಂ. ಶ್ರೀ. ಮುಗಳಿ ಅವರು ಚೌಂಡರಸನ ವಿಚಾರವನ್ನು ಪ್ರಸ್ತಾವಿಸುತ್ತ ತಮ್ಮ ಕನ್ನಡ ಸಾಹಿತ್ಯಚರಿತ್ರೆಯಲ್ಲಿ[4] "ಪಂಡರೀರಾಯನಭಂಗ ವಿಟ್ಠಲಂ" ಎಂದು ಹೇಳಿರುವುದನ್ನು ಸೂಚಿಸಿ, 'ಅಭಂಗ' ಎಂಬುದು ಮರಾಠಿಯಲ್ಲಿ ಪದ್ಯದ ಒಂದು ಧಾಟಿಗೆ ಹೆಸರು. 'ಅಭಂಗಗಳಿಂದ ಸ್ತುತನಾದ ವಿಟ್ಠಲ' ಎಂಬರ್ಥವು ಸರಿಯಾದರೆ ೧೩ನೆಯ ಶತಮಾನದಲ್ಲಿಯೇ ಚೌಂಡರಸನು ಇದ್ದಿರಬೇಕು. ೮-೭೧ (ಅಭಿನವ ದಶಕುಮಾರಚರಿತೆ) ರಲ್ಲಿಯ ಸಿಂಹಣದೊರೆಯ ಉಲ್ಲೇಖವೂ ಇದಕ್ಕೆ ಪುಷ್ಟಿಕೊಡುವಂತಿದೆ. ತಾನು 'ಮನೋಹರಪ್ರಚುರಶಿಷ್ಯ' ಎಂದೂ 'ವಿಟ್ಠಲಪದಾಂಭೋಜಾತಭೃಂಗ' ನೆಂದೂ ಹೇಳಿಕೊಂಡಿದ್ದಾನೆ. ಇವನು ಪಂಡರಾಪುರದವನಾದರೂ ಆಗಿರಬೇಕು, ಇಲ್ಲವೆ ಅಲ್ಲಿ ಕೆಲಕಾಲ ವಾಸಮಾಡಿದವನಾದರೂ ಆಗಿರಬೇಕು ಎಂದು ಅಭಿಪ್ರಾಯಪಟ್ಟಿರುತ್ತಾರೆ.

ಶ್ರೀ. ಕೆ. ವೆಂಕಟರಾಯಾಚಾರ್ಯರು ಶಿಲ್ಪಶಾಸ್ತ್ರದಲ್ಲಿ ಉಕ್ತವಾಗಿರುವ ಸಮಭಂಗಿ, ಅಭಂಗಿ, ತ್ರಿಭಂಗಿ, ಅತಿಭಂಗಿ ಎಂಬ ಪಾರಿಭಾಷಿಕಶಬ್ದಗಳಲ್ಲಿ ಪಂಡರಾಪುರದ ವಿಠಲನಿಗೆ 'ಸಮಭಂಗಿ' ಎನ್ನುವುದು ಮಾತ್ರ ಅನ್ವಯವಾಗುವುದರಿಂದ, ಅಭಂಗವೆಂದರೆ ಭಂಗ (ಭಿನ್ನ)ವಾಗದ ದೇವನೆಂದು ಇತ್ಯರ್ಥಿಸಬಹುದು ಎಂಬುದಾಗಿ ಅಭಿಪ್ರಾಯಪಡುತ್ತಾರೆ.[5]

ಮೇಲೆ ಪ್ರಸ್ತಾವಿಸಿರುವ ವಿದ್ವಾಂಸರ ಅಭಿಪ್ರಾಯಗಳಲ್ಲಿ ಚೌಂಡರಸನ ಕಾಲ, ಕೃತಿರಚನೆಯ ಅವಧಿ ಮತ್ತು ಮತಗಳಿಗೆ ಸಂಬಂಧಿಸಿದಂತೆ ಇಷ್ಟುಮಾತ್ರ ಹೇಳಬಹುದು ಎನ್ನಿಸುತ್ತದೆ.

(i) ಚೌಂಡರಸನು ರುದ್ರಭಟ್ಟನನ್ನು ಸುತ್ತಿಸಿರುವುದರಿಂದ ಅವನ ಕಾಲದಿಂದ ಈಚೆಗೂ ಹಾಗೂ ಆತನ ಅಭಿನವ ದಶಕುಮಾರ ಚರಿತ್ರೆ ಮತ್ತು ನಳಚಂಪುವಿನಲ್ಲಿರುವ ಪದ್ಯಗಳು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಉದ್ಧೃತವಾಗಿರುವುದರಿಂದ

---

[4] ಕನ್ನಡ ಸಾಹಿತ್ಯ ಚರಿತ್ರೆ, ೧೯೬೮, ಪು. ೨೧೮.

[5] ಸಾಹಿತ್ಯದ ಹಿನ್ನೆಲೆ, ಪಂಡರಪುರದ ಅಭಂಗ-ವಿಠಲ, ಪು. 93-100. 1957.

ಸೋಮರಾಜನಿಗಿಂತ ಮುಂಚೆಯೂ, ಎಂದರೆ, ಕ್ರಿ.ಶ. ೧೧೮೫ರಿಂದ ೧೨೫೦ರ ಕಾಲಾವಧಿಯಲ್ಲಿ ಈ ಕೃತಿಗಳು ರಚಿತವಾಗಿರಬಹುದೆಂದು ಭಾವಿಸಬಹುದಾಗಿದೆ.

(ii) ಚೌಂಡರಸನು 'ಅಭಿನವ ದಶಕುಮಾರ ಚರಿತೆ' ಮತ್ತು 'ನಳಚಂಪು' ವಿನಲ್ಲಿ ಪಂಡರಾಪುರದ ಅಭಂಗ ವಿಠಲನನ್ನು ಮುಕ್ತಕಂಠದಿಂದ ಹೊಗಳುವುದರಿಂದ ಆವನು ಶ್ರೀವಿಷ್ಣುವಿನ ಪರಮಭಕ್ತನೆಂದು ವಿದಿತವಾಗುತ್ತದೆ. 'ವೈಷ್ಣವಬಂಧುಸಮೂಹ ಸಂಗದಿಂ ಸದಮಳಬೋಧೆಯಂ ತಿಳಿದು' (ಆ. ೧೪-ಪ .೯) ಎಂದು ಹೇಳುವುದರಿಂದ ಆತನ ವೈಷ್ಣವಮತಾಭಿಮಾನವೆಷ್ಟೆಂಬುದು ಮನವರಿಕೆಯಾಗುತ್ತದೆ. ಆದರೆ ಪ್ರಾರ್ಥನಾಪದ್ಯಗಳಲ್ಲಿ ಮುಂದುವರಿದು, ಎರಡು ಕೃತಿಗಳಲ್ಲಿಯೂ ಈಶ್ವರನನ್ನು ಮಾತ್ರವಲ್ಲದೆ, ಒಂದರಲ್ಲಿ ಚಂಡಿಕೆಯನ್ನೂ ಇನ್ನೊಂದರಲ್ಲಿ ಬನಶಂಕರಿದೇವಿಯನ್ನೂ ಕೊಂಡಾಡಿರುವುದರಿಂದ ಶ್ರೀ ಶ್ರೀನಿವಾಸ ರಾಜಪುರೋಹಿತರು ಎಣಿಸುವಂತೆ ಈತನು ಶ್ರೀವೈಷ್ಣವ ಮತಾನುಯಾಯಿಯಾಗಿರಲಾರ. ಈತನು ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಮಾಧ್ವನೋ ಇಲ್ಲವೇ ಹರಿಹರರಲ್ಲಿ ಭೇದವನ್ನೆಣಿಸದ ಭಾಗವತಸಂಪ್ರದಾಯದವನೋ ಆಗಿರಬಹುದೆಂದು ಹೇಳಬಹುದು.

(iii) ಶ್ರೀ ರಂ. ಶ್ರೀ. ಮುಗಳಿ ಅವರು 'ಅಭಂಗವಿಠಲ' ಎಂಬ ಹೆಸರಿನಲ್ಲಿ ಸೂಚಿತವಾಗಿರುವ 'ಅಭಂಗ' ಎಂಬುದು ಮರಾಠಿಯಲ್ಲಿ ಪ್ರಚಾರದಲ್ಲಿರುವ 'ಅಭಂಗ' ಎಂಬ ಧಾಟಿಯು ಪ್ರಚಾರಕ್ಕೆ ಬಂದ ೧೩ನೆಯ ಶತಮಾನದಿಂದ ಈಚೆಗೆ ಬಂದಿರಬಹುದೆಂದು ಊಹಿಸುವರಷ್ಟೆ. ಆದರೆ ವಿಠಲನಿಗೆ ಈ ಮೊದಲು 'ಅಭಂಗ' ಎಂಬ ವಿಶೇಷಣವು ಇರಲಿಲ್ಲವೆಂದು ಸಮರ್ಥನೆಮಾಡಿದ್ದೇ ಆದರೆ ಆಗ ಇದು ಗ್ರಾಹ್ಯವಾದೀತು. ಶ್ರೀ ಕೆ. ವೆಂಕಟರಾಯಾಚಾರ್ಯರು ಶಿಲ್ಪಶಾಸ್ತ್ರದ ಉಕ್ತಿಯನ್ನು ಅವಲಂಬಿಸಿ ತಮ್ಮ ವಾದವನ್ನು ಮುಂದಿಟ್ಟಿರುವ ಕ್ರಮ ಸೂಕ್ತವಾಗಿ ತೋರುತ್ತದೆ. ಆದರೆ, 'ಸಮನ್ಯಸ್ತ ಪಾದಂ' 'ಸಮಚರಣಸರೋಜಂ' ಎಂಬ ಹೇಳಿಕೆಗಳು 'ಅಭಂಗ' ಎಂಬುದಕ್ಕೆ ಸರಿಸಮಾನವಾದವುಗಳೆಂದೂ, ಈ ಲಕ್ಷಣ ಪಂಡರಾಪುರದ ವಿಟ್ಠಲವಿಗ್ರಹಕ್ಕೆ ಮಾತ್ರ ಅನ್ವಯಿಸುವುದೆಂದೂ ನಿರ್ಧರಿಸಿದ್ದೇ ಆದರೆ ಆಗ ಉಪಾದೇಯವೆನ್ನಿಸುವುದು. ಪ್ರಕೃತದಲ್ಲಿ ಶ್ರೀಯುತರು "ಅಭಂಗವಿಠಲ" ನೆಂದರೆ ಅದೆಂದೂ, ಭಂಗ (ಭಿನ್ನ) ವಾಗದ ದೇವನೆಂದೂ ಇತ್ಯರ್ಥಿಸಬಹುದು ಎಂಬ ವ್ಯಾಖ್ಯಾನವು ತೀರ ಸಾಮಾನ್ಯ ಸ್ವರೂಪದ್ದಾಗಿದೆ. ಈ ರೀತಿ ಊಹಿಸಬಹುದಾದರೆ 'ಅಭಂಗ' ಎಂದರೆ 'ಅಚ್ಯುತ' ಎಂದು ಹೇಳಿದರೂ ಸಲ್ಲುತ್ತದೆ.

## ನಳಚಂಪುವಿನ ಕಥಾವಸ್ತು

ಕನ್ನಡದಲ್ಲಿ ನಳಮಹಾರಾಜನ ಕಥೆಯನ್ನು ಬರೆದ ಕವಿಗಳಲ್ಲಿ ಈಗ ತಿಳಿದುಬಂದಿರುವ ಮಟ್ಟಿಗೆ ಚೌಂಡರಸನೇ ಮೊದಲಿಗನು. ಈತನು ಕನ್ನಡದ ಚಂಪೂಕವಿಗಳ ಅಗ್ರಪಂಕ್ತಿಯನ್ನು ಅನುಸರಿಸಿ ತನ್ನ ಎರಡು ಕೃತಿಗಳನ್ನೂ ಚಂಪೂರೂಪದಲ್ಲಿ ಬರೆದಿರುವುದು

ಮತ್ತೊಂದು ಗಮನಾರ್ಹವಾದ ಸಂಗತಿ. ದಂಡಿಯ ದಶಕುಮಾರ ಚರಿತೆಯೆಂಬ ಗದ್ಯ ಕಾವ್ಯವನ್ನು ಚಂಪೂರೂಪಕ್ಕೆ ಅಳವಡಿಸಿರುವುದನ್ನು ಕಂಡರೆ ಈತನ ಕಾವ್ಯಸಾಮರ್ಥ್ಯ ವೆಷ್ಟೆಂಬುದು ಸ್ಪಷ್ಟವಾಗುತ್ತದೆ. ಪ್ರಕೃತದಲ್ಲಿ ಈತನ ನಳಚಂಪುವಿನ ಕಥಾವಸ್ತುವಿನ ಆಕರ ಮತ್ತು ಅನುಸರಣೆಗಳನ್ನು ಸಂಕ್ಷಿಪ್ತವಾಗಿ ಪರಿಶೀಲಿಸಬಹುದು.

ಮಹಾಭಾರತದ ಅರಣ್ಯ ಪರ್ವದಲ್ಲಿ ಉಕ್ತವಾಗಿರುವ ನಲೋಪಾಖ್ಯಾನವೇ (೫೩-೭೯ ಅಧ್ಯಾಯಗಳು) ನಳಮಹಾರಾಜನ ಕಥೆ ಜನಪ್ರಿಯವಾಗುವುದಕ್ಕೆ ಮೊತ್ತ ಮೊದಲಿನ ಮೆಟ್ಟಲು. ಪಾಶ್ಚಾತ್ಯರು ಸಂಸ್ಕೃತವನ್ನು ಕಲಿಯುವಲ್ಲಿ ನಲೋಪಾಖ್ಯಾನ ದಿಂದ ಮೊದಲುಮಾಡುವರು ಎಂಬುದಾಗಿ ಡಾ. ವಿ. ಎಸ್. ಸೂಕ್ತಂಕರ್ ಅವರು ತಿಳಿಸುತ್ತಾರೆ. ಇದಕ್ಕೆ ಈ ಕಥೆಯಲ್ಲಿ ಕಂಡುಬರುವ ರಸವತ್ತಾದ ಸನ್ನಿವೇಶಗಳು ಮತ್ತು ಸುಸ್ಪಷ್ಟತೆಗಳೇ ಕಾರಣವೆಂದು ಅಭಿಪ್ರಾಯ. ಈ ರೋಮಾಂಚಕರವಾದ ಕಥೆ ಇಂಗ್ಲಿಷ್, ಫ್ರೆಂಚ್, ಜರ್ಮನ್, ಇಟಾಲಿಯನ್, ಸ್ವೀಡಿಷ್, ಸೆಕ್, ಪೋಲಿಷ್, ರಷಿಯನ್' ಗ್ರೀಕ್ ಮತ್ತು ಹಂಗೇರಿ ಭಾಷೆಗಳಿಗೆ ಅನುವಾದವಾಗಿರುವುದನ್ನು ಕಂಡರೆ ಇದರ ಜನಾನುರಾಗದ ವ್ಯಾಪ್ತಿಯೇನೆಂಬುದು ಮನವರಿಕೆಯಾಗುತ್ತದೆ. ವಿದೇಶಗಳಲ್ಲಿ ಹೀಗೆ ಹಬ್ಬಿ ಹರಡಿರುವಂತೆಯೇ ಭರತಖಂಡದಲ್ಲಿಯೂ ಬಹುಶಃ ಎಲ್ಲ ಭಾಷೆಗಳಲ್ಲಿಯೂ ನಳನ ಕಥೆ ಒಂದಲ್ಲ ಒಂದು ರೀತಿಯಲ್ಲಿ ಪ್ರಚುರವಾಗಿರುವುದು ಸಾಧುವೇ ಸರಿ. ಸಂಸ್ಕೃತದಲ್ಲಿಯೇ ಈ ಕಥಾವಸ್ತುವನ್ನು ಅವಲಂಬಿಸಿ ರಚಿತವಾಗಿರುವ ನಲ್ವತ್ತೆರಡು ಕೃತಿಗಳನ್ನು 'ನಳಚಂಪು' ವಿನ ಸಂಪಾದಕರು ನಿರ್ದೇಶಿಸಿರುವುದನ್ನು ಗಮನಿಸಿದರೆ ಇದರ ಜನಪ್ರಿಯತೆಯೆಷ್ಟೆಂಬುದು ಸ್ವವಿದಿತವಾಗುತ್ತದೆ. ಕನ್ನಡದಲ್ಲಿಯೂ ಹದಿಮೂರು ಕೃತಿಗಳನ್ನು ಉದಾಹರಿಸಿರುವುದು ಇದರ ಸ್ವಾರಸ್ಯಕ್ಕೆ ಮತ್ತೊಂದು ಸಾಕ್ಷಿ, ಹೀಗಿದ್ದರೂ ಮಹಾಭಾರತದಲ್ಲಿ ಕಂಡುಬರುವ ಈ ಉಪಾಖ್ಯಾನವು ಪ್ರಕ್ಷಿಪ್ತವಿರಬಹುದೆಂದು ಡಾ. ವಿ. ಎಸ್. ಸೂಕ್ತಂಕರ್ ಅವರ ಅಭಿಪ್ರಾಯ. ಆದರೆ, ಮಹಾಭಾರತದಲ್ಲಿಯೇ ತೋರಿಬರುವ ಸಾವಿತ್ರಿಯ ಕಥೆಯಂತೆಯೇ ಇದೂ ತನ್ನ ನೈಜಗುಣಗಳಿಂದ ಆ ಬೃಹದ್ಗ್ರಂಥದ ಅವಿಭಾಜ್ಯ ಅಂಗವಾಗಿ ಸೇರಿಹೋಗಿದೆಯೆಂದು ಒಪ್ಪಿಕೊಳುತ್ತಾರೆ.[೬]

ಚೌಂಡರಸನ ನಳಚಂಪುವಿನ ಹೆಸರನ್ನು ಕೇಳಿದ ಕೂಡಲೆ ನಮಗೆ ಸಂಸ್ಕೃತದಲ್ಲಿ ಸುಪ್ರಸಿದ್ಧವಾಗಿರುವ ತ್ರಿವಿಕ್ರಮ ಪಂಡಿತನ 'ನಳಚಂಪು' ಮತ್ತು ಶ್ರೀಹರ್ಷನ 'ನೈಷಧೀಯ ಚರಿತ' ನೆನಪಾಗುವುದು ಸಹಜ. ಚೌಂಡರಸನು ತನ್ನ 'ಅಭಿನವ ದಶ. ಕುಮಾರ ಚರಿತೆ'ಯಲ್ಲಿ ಅದಕ್ಕೆ ಆಕರ ಗ್ರಂಥವಾದ ದಂಡಿಯ ದಶಕುಮಾರಚರಿತವನ್ನು ಸ್ಪಷ್ಟವಾಗಿ ಸೂಚಿಸಿರುವಂತೆ ನಳಚಂಪುವನ್ನು ಬರೆಯುವಲ್ಲಿ ತಾನು ಅವಲಂಬಿಸಿರುವ ಕೃತಿಗಳು ಯಾವುವೆಂಬುದನ್ನು ಹೇಳಿಲ್ಲ. ಆದ್ದರಿಂದ, ಈ ಬಗ್ಗೆ ಪರಿಶೀಲಿಸಿ ನೋಡಿದಾಗ

---

೬, Suktankar Memorial Edition, Val. No. 1, PP, 407-415

ಈತನು ಕೆಲವಡೆಗಳಲ್ಲಿ ಶ್ರೀಹರ್ಷನ ಕೃತಿಯನ್ನೂ ವಿಶೇಷವಾಗಿ ಮಹಾಭಾರತದಲ್ಲಿ ಉಕ್ತವಾಗಿರುವ ನಲೋಪಾಖ್ಯಾನವನ್ನೂ ಅನುಸರಿಸಿರುವಂತೆ ವ್ಯಕ್ತವಾಗುತ್ತದೆ. ತ್ರಿವಿಕ್ರಮಪಂಡಿತನ ಕೃತಿಯ ಹೆಸರಿಗೂ, ಚೌಂಡರಸನ ಕೃತಿಯ ಹೆಸರಿಗೂ ಸಾದೃಶ್ಯವಿದ್ದರೂ, ಕನ್ನಡಕೃತಿಗೆ ಕವಿ ಆ ಹೆಸರನ್ನು ಇಟ್ಟಿದ್ದನೋ ಇಲ್ಲವೋ ಎಂಬ ಸಂದೇಹಕ್ಕೆ ಅವಕಾಶವಿದೆ. ಏಕೆಂದರೆ, ಕೃತಿಯ ಪ್ರಾರಂಭದಲ್ಲಿ 'ನಳಚರಿತ್ರ' ಎಂಬ ಹೆಸರನ್ನೂ ಮುಕ್ತಾಯ ಮಾಡುವಲ್ಲಿ 'ಕಲ್ಯಾಣ ನಳಖ್ಯಾತಿ' ಎಂಬ ಹೆಸರನ್ನೂ ಹೇಳಿರುವನೇ ವಿನಾ 'ನಳಚಂಪು' ಎಂಬ ಹೆಸರನ್ನು ಸ್ಪಷ್ಟವಾಗಿ ಹೇಳಿಲ್ಲ. ಈ ಕೃತಿಯ ಏಕೈಕ ಹಸ್ತಪ್ರತಿ ಮಾತ್ರ ದೊರೆತಿರುವುದರಿಂದ, ಇದರಲ್ಲಿ ಸಮಾಪ್ತಿವಾಕ್ಯವೂ ಕಂಡುಬರುವುದಿಲ್ಲ.

ಸಂಸ್ಕೃತದಲ್ಲಿ ಶ್ರೀಹರ್ಷನ 'ನೈಷಧೀಯಚರಿತೆ'ಗೆ ವಿಶಿಷ್ಟವಾದ ಸ್ಥಾನವಿದೆ. ಅದು ಸಂಸ್ಕೃತ ಪಂಚಮಹಾಕಾವ್ಯಗಳಲ್ಲಿ ಒಂದೆಂಬುದಾಗಿ ಪರಿಗಣಿತವಾಗಿದೆ. ಪ್ರಸ್ತುತ ಉಪಲಬ್ಧವಾಗಿರುವ ಭಾಗದಲ್ಲಿ ದಮಯಂತೀ ಸ್ವಯಂವರಕ್ಕೇ ಅಗ್ರಸ್ಥಾನ ದೊರೆತಿದ್ದು ವರ್ಣನಾನಿಬಿಡವಾಗಿದೆ. ಶೈಲಿಯೂ ಸಹ ಸಾಕಾದಷ್ಟು ಜಟಿಲವಾಗಿದ್ದು, ಅಲ್ಲಲ್ಲಿಯೇ ಚಮತ್ಕಾರಯುಕ್ತವಾದ ಗ್ರಂಥಿಗಳೂ ಕಂಡುಬರುತ್ತವೆ. ವಿದ್ವಜ್ಜನಪ್ರಿಯವಾದ ನೈಷಧೀಯವನ್ನು "ನೈಷಧಂ ವಿದ್ವತೌಷಧಂ" ಎಂದು ಕರೆಯುವುದನ್ನು ಗಮನಿಸಿದರೆ ಆ ಕಾವ್ಯದ ಸ್ವರೂಪವೆಂತಹುದೆಂಬುದು ವಿದಿತವಾಗುತ್ತದೆ. ಈ ಕಾವ್ಯವನ್ನು ಅವಲೋಕಿಸುತ್ತ ಶ್ರೀ. ಕೆ. ಕೃಷ್ಣಮೂರ್ತಿ ಅವರು "ಶ್ರೀ ಹರ್ಷನ ಶಬ್ದಸಂಪತ್ತನ್ನು, ಪದಲಾಲಿತ್ಯವನ್ನು, ಭಾಷಾಸೌಷ್ಠವವನ್ನು, ಪ್ರತಿಭೆಯ ಜಾಜ್ವಲ್ಯವನ್ನು ಅಲ್ಲಗಳೆಯುವಂತಿಲ್ಲ. ಅವನ ವರ್ಣನಾಶಕ್ತಿಗೆ ಅಂತವಿಲ್ಲ ; ಒಂದನ್ನು ನೂರು ಪರಿಗಳಿಂದ ಪುನರುಕ್ತಿ ಕಾಣದಂತೆ ವರ್ಣಿಸಬಲ್ಲ ಧೀರ ಶ್ರೀಹರ್ಷ, ಅವನ ಶಬ್ದಸಂಗ್ರಹ ಅಪಾರ ; ಎಲ್ಲ ಪುರಾಣಗಳೂ ಅವನ ಕೈಬೆರಳುಗಳ ತುದಿಯಲ್ಲಿ ಕುಣಿಯುತ್ತವೆ. ಉಳಿದ ಕವಿಗಳ ಅಲಂಕಾರಗಳನ್ನೆಲ್ಲ ತಲೆಕೆಳಗು ಮಾಡಿ ಬೇರೆ ಅಲಂಕಾರಚ್ಛಾಯೆಯನ್ನು ಲೀಲಾಜಾಲವಾಗಿ ಶ್ರೀಹರ್ಷನು ತರಲು ಸಮರ್ಥ" "ಮಹಾಭಾರತದ ನಲೋಪಾಖ್ಯಾನದಲ್ಲಿ ನಳ ದಮಯಂತಿಯರ ಪವಿತ್ರಪ್ರೇಮದ ಸಾತ್ವಿಕರೂಪ ಚಿತ್ರಿತವಾಗಿದ್ದರೆ, ಇಲ್ಲಿ ವಿಲಾಸಮಯವೂ ವಾಸನಾಪೂರ್ಣವೂ ಆದ ಬಣ್ಣಗಳಿಂದ ರಂಜಿತವಾಗಿದೆ"[7] ಎಂದು ಹೇಳಿರುವರು.

ಈ ಹಿನ್ನೆಲೆಯಲ್ಲಿ ಚೌಂಡರಸನ 'ನಳಚಂಪು'ವನ್ನು ಪರಿಶೀಲಿಸಿದ್ದೇ ಆದರೆ, ಇಲ್ಲಿ ಚಿತ್ರಿತವಾಗಿರುವ ದಮಯಂತಿಯ ಸ್ವಯಂವರದ ವರ್ಣನೆ ವಿಸ್ತಾರವಾಗಿರುವುದರ ರಹಸ್ಯವೇನೆಂಬುದು ಸ್ಪಷ್ಟವಾಗುತ್ತದೆ. ಆಲಂಕಾರಿಕವಾದ ಗದ್ಯಪದ್ಯಗಳನ್ನೂ, ಸಾಂಪ್ರದಾಯಿಕವಾದ ವರ್ಣನೆಗಳನ್ನೂ ಕಂಡಾಗಲೂ ಇವು ನೈಷಧೀಯದ ಪ್ರಭಾವವೇ ಇರ

---

7. ಸಂಸ್ಕೃತಕಾವ್ಯ, ೧೯೫೫, ಪು. ೩೭೨-೩೮೩ ;

ಬೇಕು ಎನ್ನಿಸದೆ ಇರದು. 'ನಳಚಂಪು'ವಿನ ಸಂಪಾದಕರು ನಿರ್ದೇಶಿಸಿರುವಂತೆ ಚೌಂಡರಸನು ಶ್ರೀಹರ್ಷ ವಿರಚಿತವಾದ ಕೆಲವು ಪದ್ಯಗಳನ್ನೇ ಅನುವಾದಿಸಿರುವನು.[೪]

ಮೂಲಕಥಾವಸ್ತುವಿನಲ್ಲಿ ಶ್ರೀಹರ್ಷನು ಮಾಡಿಕೊಂಡಿರುವ ಮಾರ್ಪಾಟುಗಳಲ್ಲಿ ಒಂದೆರಡನ್ನು ತಾನೂ ಸ್ವೀಕರಿಸಿರುವನು. ನಳನಿಗೂ ಹಂಸಕ್ಕೂ ನಡೆಯುವ ಸಂವಾದದ ಸಂದರ್ಭ, ವಿರಹತಪ್ತಳಾದ ದಮಯಂತಿಯನ್ನು ಪರೀಕ್ಷಿಸಿದ ವೈದ್ಯರು ದ್ವಂದ್ವಾರ್ಥದ ಮೂಲಕ ಭೀಮರಾಜನಿಗೆ ಸಲಹೆಮಾಡುವುದು, ದೇವತೆಗಳು ದಮಯಂತಿಯ ಅಚಲ ಪ್ರೇಮವನ್ನು ಮನಗಂಡು, ಶ್ಲಾಘಿಸಿ ಆಕೆಗೆ ವರವನ್ನು ಅನುಗ್ರಹಿಸುವುದು ಇವೇ ಮೊದಲಾದುವುಗಳನ್ನು ನಿರೂಪಿಸುವಲ್ಲಿ ಚೌಂಡರಸನು ಶ್ರೀಹರ್ಷನನ್ನು ಅನುಸರಿಸಿರುವುದು ವ್ಯಕ್ತವಾಗುತ್ತದೆ.

'ನಳಚಂಪು'ವನ್ನು ಮಹಾಭಾರತದ ನಲೋಪಾಖ್ಯಾನದೊಂದಿಗೆ ಹೋಲಿಸಿ ನೋಡಿದರೆ, ಚೌಂಡರಸನು ಕಥಾಬೆಳವಣಿಗೆಯಲ್ಲಿ ಈ ಮೂಲಕೃತಿಯಿಂದ ವಿಶೇಷವಾಗಿ ಪ್ರಭಾವಿತನಾಗಿರುವುದನ್ನು ಕಾಣಬಹುದು. ಉಭಯ ರಚನೆಗಳಲ್ಲಿಯೂ ತೋರಿಬರುವ ಸೌಮ್ಯದಭಾಗವನ್ನು ಬಿಟ್ಟು, ಕವಿಯು ಕಲ್ಪಿಸಿರುವ ವ್ಯತ್ಯಾಸಗಳಲ್ಲಿ ಕೆಲವನ್ನು ಮಾತ್ರ ಸಂಕ್ಷಿಪ್ತವಾಗಿ ಹೀಗೆ ನಿರೂಪಿಸಬಹುದು.

(i) ಭಾರತದಲ್ಲಿ ದಮಯಂತಿಯ ಜನನಾದಿ ವಿಚಾರಗಳು ವಿಸ್ತಾರವಾಗಿದ್ದರೆ, 'ನಳಚಂಪು'ವಿನಲ್ಲಿ ನಳನ ಜನನ, ವಿಜಯಯಾತ್ರೆ, ಮೃಗಯಾವಿಹಾರಗಳಿಗೆ ವಿಶೇಷವಾಗಿ ಗಮನಕೊಡಲಾಗಿದೆ.

(ii) ಭಾರತದಲ್ಲಿ ನಳನು ಉಪವನದಲ್ಲಿ ಸಂಚರಿಸುತ್ತಿರುವಾಗ ಹಂಸವನ್ನು ಸಂಧಿಸುವನು. 'ನಳಚಂಪು'ವಿನಲ್ಲಿ ಆತನು ಪ್ರಜಾಸಂರಕ್ಷಣೆಯ ಸಲುವಾಗಿ ದುಷ್ಟ ಪ್ರಾಣಿಗಳನ್ನು ಸಂಹರಿಸಲು ಬೇಟೆಗೆ ಹೋಗಿದ್ದಾಗ, ದಣಿದು ಸರೋವರದ ಸಮೀಪಕ್ಕೆ ಬರಲು, ಆಗ ಹಂಸವನ್ನು ಕಂಡು, ಅದರೊಂದಿಗೆ ಏಕಾಂತದಲ್ಲಿ ಸಂಭಾಷಿಸುವನು.

(iii) ದೇವತೆಗಳ ಪರವಾಗಿ ನಳನು ಅದೃಶ್ಯವಿದ್ಯೆಯ ಮೂಲಕ ದಮಯಂತಿಯ ಅಂತಃಪುರವನ್ನು ಪ್ರವೇಶಿಸುವ ಸಂದರ್ಭದಲ್ಲಿ, ಆತನ ಮೇಲೆ ಎಚ್ಚರ ವಹಿಸಲು ಸೂಕ್ಷ್ಮಾಕೃತಿಯಿಂದ ಮಾನಿನಿಯೊಬ್ಬಳು ಹಿಂಬಾಲಿಸುವುದು ಬೇರೆಲ್ಲಿಯೂ ಉಕ್ತವಾಗಿಲ್ಲ.

(iv) ಸ್ವಯಂವರಪೂರ್ವದಲ್ಲಿ ನಳನು ಮಾಡುವ ದೀರ್ಘವಾದ ಗಣಪತಿಯ ಸ್ತುತಿ 'ನಳಚಂಪು'ವಿಗೇ ವಿಶಿಷ್ಟವಾದುದು.

---

[೪] ನೈಷಧೀಯ ಸರ್ಗ I, ಶ್ಲೋಕ ೧೩೦–೧೩೨, ೧೩೫ : ನಳಚಂಪು, ಪದ್ಯ ೧೮೫–೧೮೯ ; ನೈಷಧೀಯ ಸರ್ಗ III ಶ್ಲೋಕ ೧೩ ; ಸರ್ಗ IV, ಶ್ಲೋಕ ೧೧೬, ನಳಚಂಪು, ಪದ್ಯ ೨೧೯–೨೨೦, ಇತ್ಯಾದಿ.

(v) ಭಾರತದಲ್ಲಿ ಇಂದ್ರನ ಬಳಿಗೆ ಮತ್ತು ನಾರದ ಪರ್ವತರಿಬ್ಬರೂ ಬಂದು ಆತನಿಗೆ ದಮಯಂತಿಯ ಸೌಂದರ್ಯವನ್ನು ವರ್ಣಿಸಿ, ಆಕೆಯಲ್ಲಿ ಅನುರಕ್ತಿಯುಂಟಾಗುವಂತೆ ಮಾಡುವರು. 'ನಳಚಂಪು'ವಿನಲ್ಲಿ ಪರ್ವತನ ಸುದ್ದಿಯೇ ಇಲ್ಲ.

(vi) ಭಾರತದಲ್ಲಿ ಕಲಿಯು ದ್ವಾಪರನನ್ನು ಆಶ್ರಯಿಸಿ, ಅಕ್ಷವಿದ್ಯೆಯ ರಹಸ್ಯವನ್ನು ಕೇಳಿ ತಿಳಿದನೆಂದು ನಿರೂಪಿತವಾಗಿದೆ. 'ನಳಚಂಪು'ವಿನಲ್ಲಿ ದ್ವಾಪರನ ಸೊಲ್ಲೇ ಇಲ್ಲ.

(vii) ದಮಯಂತಿಯ ಸ್ವಯಂವರಕ್ಕೆ ಬಂದಿದ್ದ ರಾಜರ ವರ್ಣನೆ, ಸ್ವಯಂವರ ವರ್ಣನೆ, ಭೋಜನ ವರ್ಣನೆ ಮತ್ತು ಓಕುಳಿಯಾಟದ ಚಿತ್ರಣ ಮೊದಲಾದುವುಗಳಲ್ಲಿ ಚೌಂಡರಸನು ವಿಶೇಷ ಸ್ವಾತಂತ್ರ್ಯವನ್ನು ವಹಿಸಿರುವಂತೆ ವ್ಯಕ್ತವಾಗುತ್ತದೆ.

(viii) ಅರಣ್ಯದಲ್ಲಿ ನಿರಾಶ್ರಿತಳಾದ ದಮಯಂತಿ ಅಜಗರನ ದವಡೆಯಿಂದ ಪಾರಾಗಿ, ವನಚರನೊಬ್ಬನ ಕೈಗೆ ಸಿಕ್ಕಿಬಿದ್ದು, ಆ ಕಾಮುಕನ ದೆಸೆಯಿಂದ ಇನ್ನೂ ಹೆಚ್ಚಾಗಿ ಭೀತಿಗ್ರಸ್ತಳಾಗುವಳು. ಕಡೆಗೆ ಋಷಿಗಳಿತ್ತ ನೆರವಿನಿಂದ ಆ ಕಷ್ಟದಿಂದ ಬಿಡುಗಡೆ ಪಡೆಯುವಳು. ನಳನ ಕಥೆಗೇ ಪ್ರಾಧಾನ್ಯ ದೊರೆತಿರುವ 'ನಳಚಂಪು'ವಿನಲ್ಲಿ ವನಚರನನ್ನು ಹೊರತು ಉಳಿದ ಕಥಾಪ್ರಸಂಗಗಳು ಲೋಪವಾಗಿವೆ.

(ix) ವಿಪ್ರನಾದ ಸುದೇವನು ದಮಯಂತಿಯನ್ನು ಆಕೆಯ ಹುಬ್ಬಿನ ನಡುವೆ ಇದ್ದ ಮಚ್ಚೆಯ ಮೂಲಕ ಗುರುತಿಸುವನು. ತರುವಾಯ ಆಕೆಗೆ ಆಶ್ರಯವಿತ್ತಿದ್ದ ಸುಬಾಹುವಿನ ಹೆಂಡತಿಗೆ ದಮಯಂತಿಯ ನಿಜವೃತ್ತಾಂತವು ತಿಳಿದುಬರಲು, ಆಕೆ ದಮಯಂತಿಯನ್ನು ಭೀಮರಾಜನ ಬಳಿಗೆ ಕಳುಹಿಸಿಕೊಟ್ಟಳೆಂದು ಭಾರತದಲ್ಲಿ ನಿರೂಪಿತವಾಗಿದೆ. 'ನಳಚಂಪು'ವಿನಲ್ಲಿ ಭೀಮರಾಜನ ಮಗಳ ಇರುವಿಕೆಯು ತಿಳಿದುಬರಲು, ಆತನು ಅನಂತನಿಧಿ ಪಟ್ಟಣಕ್ಕೆ ತನ್ನವರನ್ನು ಕೊಟ್ಟು ಕಳುಹಿಸಿ, ಆಕೆಯನ್ನು ಕುಂಡಿನ ನಗರಕ್ಕೇ ಬರಮಾಡಿಕೊಳ್ಳುವನು.

(x) ನಳನು ರೂಪುಗೆಟ್ಟು ಬಾಹುಕನೆಂಬ ಸಾರಥಿಯಾಗಿ ಋತುಪರ್ಣನಲ್ಲಿ ಕಾಲ ಕಳೆಯುತ್ತಿರಲು, ಆಗಿಂದಾಗ್ಗೆ ದಮಯಂತಿಯನ್ನು ಸ್ಮರಿಸಿಕೊಂಡು, ನಿದ್ರೆಯಲ್ಲಿ ಕನವರಿಸುತ್ತಿದ್ದನೆಂದು ಭಾರತದಲ್ಲಿ ವರ್ಣಿತವಾಗಿದೆ. ಇದು ಸಹಜ. ಚೌಂಡರಸನಾದರೋ ನಳನ ಈ ಸ್ವಾಭಾವಿಕ ಮನೋಧರ್ಮವನ್ನು ಮರೆತಂತಿದೆ.

(xi) ಋತುಪರ್ಣನ ಆಸ್ಥಾನಕ್ಕೆ ಬಂದ ಭೀಮರಾಜನ ದೂತನಿಂದ ಪರ್ಣಾದನು ದಮಯಂತಿಯ ಪುನಃ ಸ್ವಯಂವರದ ವಾರ್ತೆಯನ್ನು ಬಹಳ ಮಾರ್ಮಿಕವಾಗಿ ನಿವೇದಿಸಲು, ಆತನ ಮಾತಿಗೆ ಯಾರೂ ಉತ್ತರವೀಯದೆ ಹೋಗುವರು. ದೂತನು ಹೊರಟುಬರುತ್ತಿರುವಾಗ ವೇಷಾಂತರದಲ್ಲಿದ್ದ ನಳನು ಆವನ ಮಾತಿಗೆ ಸದುತ್ತರವೀಯುವನು. ಆ ಮೂಲಕ ನಳನ ಅಸ್ತಿತ್ವವು ಬೆಳಕಿಗೆ ಬರುವುದು. 'ನಳಚಂಪು'ವಿನಲ್ಲಿ ಈ ಪ್ರಸಂಗವೇ ಪಲ್ಲಟವಾಗಿದೆ... ಋತುಪರ್ಣನ ಅಶ್ವಶಾಲೆಯ ಒಳಿಯಲ್ಲಿ ತಂಗಿದ್ದ

ಬ್ರಾಹ್ಮಣನಿಗೂ ನಳನಿಗೂ ಪರಸ್ಪರ ಮಾತುಕತೆಗಳಾಗುತ್ತಿರುವಲ್ಲಿ, ನಳನು ಎಚ್ಚರ ತಪ್ಪಿ ಆಡಿದ ಮಾತಿನಿಂದ ಆತನ ಗುಟ್ಟು ಬಯಲಾಗುವುದು.

(xii) ದಮಯಂತಿಯ ಪುನಃ ಸ್ವಯಂವರದ ಸುದ್ದಿಯನ್ನು ತಿಳಿದ ಋತು ಪರ್ಣನು ತನ್ನ ಸಾರಥಿಯೊಂದಿಗೆ ಭೀಮರಾಜನ ಪಟ್ಟಣಕ್ಕೆ ಬರುವನು. ಅಲ್ಲಿ ಸ್ವಯಂ ವರದ ಸಡಗರ ಸಂಭ್ರಮಗಳಾವುವೂ ತೋರಿಬರದಿರಲು ಋತುಪರ್ಣನು ಖಿನ್ನನಾಗುವನು, ಆಗ ತಾನು ಅಲ್ಲಿಗೆ ಬಂದ ಕಾರಣವನ್ನೇ ಋತುಪರ್ಣನಿಗೆ ಹೇಳದೆ ಸುಮ್ಮನಾಗುವನೆಂದು ಮಹಾಭಾರತದಲ್ಲಿ ಚಿತ್ರಿತವಾಗಿದೆ. ನಳಚಂಪುವಿನಲ್ಲಿ ಭೀಮರಾಜನೇ ಮಗಳ ಸಲುವಾಗಿ ಈ ವಾರ್ತೆಯನ್ನು ಋತುಪರ್ಣನ ರಾಜಧಾನಿಯಲ್ಲಿ 'ಮಾತ್ರವೇ ಡಂಗುರ ಹಾಕಿಸಿ ದ್ದನೆಂದೂ, ರಾಜನೊಂದಿಗೆ ಬಂದಿದ್ದ ಸಾರಥಿ ಬಾಹುಕನನ್ನು ದಮಯಂತಿ ತನ್ನ ಆಪ್ತ ಸಖಿಯರ ಮೂಲಕ ಒರೆಹಚ್ಚಿ ನೋಡಿ, ಕಡೆಗೆ ಆತನ ನಿಜವೃತ್ತಾಂತವನ್ನು ಅರಿತ ಳೆಂದೂ ನಿರೂಪಿತವಾಗಿದೆ.

ಈ ರೀತಿಯಾಗಿ ಚೌಂಡರಸನು ಸಣ್ಣ ಪುಟ್ಟ ಬದಲಾವಣೆಗಳನ್ನು ಮಾಡಿಕೊಂಡಿ ದ್ದರೂ ಅವನು ಬಹುಮಟ್ಟಿಗೆ ಸಂಸ್ಕೃತ ಮಹಾಭಾರತದ ಕಥೆಯ ಹಂದರವನ್ನೇ ಅವಲಂಬಿಸಿ ತನ್ನ ಕೃತಿಯನ್ನು ರಚಿಸಿರುವನೆಂಬುದರಲ್ಲಿ ಸಂದೇಹವಿಲ್ಲ. ಮಹಾಭಾರತವು ರಚನೆಯಾದ ಬಳಿಕ ನಳನ ಕಥೆ ನಾನಾ ಬಗೆಯಾಗಿ ಪ್ರವಹಿಸಿದುತ್ತೆಲ್ಲ ಇಂಥ ಪರಿವರ್ತನೆ ಗಳಾಗುವುದು ಸಹಜ. ಇವುಗಳಿಗೆ ಕವಿಯೊಬ್ಬನೇ ಕಾರಣನೆಂದು ಭಾವಿಸುವುದಕ್ಕಿಂತ, ಜನತೆಯ ಅಭಿರುಚಿಯೂ ಕಾರಣವೆಂದು ಎಣಿಸುವುದು ಸಹಜ. ಜನಮನದಲ್ಲಿ ಮೂಡಿ ಬಂದ ಈ ಕಲ್ಪನೆಗಳು ಪ್ರತಿಭಾಶಾಲಿಯಾದ ಕವಿಯ ಕೈಗೆ ಬಂದಾಗ ಅವುಗಳಿಗೆ ಮೂರ್ತಸ್ವರೂಪವು ಪ್ರಾಪ್ತವಾಗುತ್ತದೆ.

## ನಳಚಂಪುವಿನ ಮೌಲ್ಯ

ನಳನ ವೃತ್ತಾಂತವನ್ನು ಒಳಗೊಂಡ ಕನ್ನಡ ಕಾವ್ಯಗಳಲ್ಲಿ ಸದ್ಯಕ್ಕೆ ಇದೇ ಮೊತ್ತ ಮೊದಲನೆಯದಾಗಿರುವುದರಿಂದ ಇದಕ್ಕೆ ನಮ್ಮ ಚಂಪೂ ಕಾವ್ಯಗಳಲ್ಲಿ ಒಂದು ಸ್ಥಾನ ಸಲ್ಲುತ್ತದೆ. ಇದು ಚಂಪೂ ಕಾವ್ಯವೆನ್ನಿಸಿದರೂ ಇತರ ಚಂಪೂ ಕಾವ್ಯಗಳಲ್ಲಿ ಕಂಡುಬರು ವಂತೆ ಗದ್ಯಪದ್ಯಗಳು ಹದವಾದ ಪ್ರಮಾಣದಲ್ಲಿ ಬಳಕೆಯಾಗಿಲ್ಲ. ವಾಸ್ತವಿಕವಾಗಿ ಪದ್ಯಗಳ ಸಂಖ್ಯೆಯೇ ಹೆಚ್ಚು. ಸಮಗ್ರ ಕಾವ್ಯವನ್ನು ಆಶ್ವಾಸಗಳನ್ನಾಗಿ ವಿಂಗಡಿಸಿಲ್ಲ. ಸಾಧಾರಣವಾಗಿ ಕಾವ್ಯದ ಕಡೆಯಲ್ಲಿ ಕಂಡುಬರುವ ಸಮಾಪ್ತಿವಾಕ್ಯವೂ ಇಲ್ಲ. ಈ ಕೃತಿಯ ಏಕೈಕ ಹಸ್ತಪ್ರತಿ ಮಾತ್ರ ಲಭ್ಯವಾಗಿರುವುದರಿಂದ ಇದರಲ್ಲಿ ಅನೇಕ ಪಾಠ ಕ್ಲೇಶಗಳು ಹಾಗೆಯೇ ಉಳಿದಿವೆ. ಕವಿಯು ತನ್ನನ್ನು 'ಕರ್ನಾಟಕವಂಶ ಶೃಂಗಾರರಸಂ' ಎಂದು ಕರೆದುಕೊಂಡಿರುವುದರಿಂದ ಇವನಿಗೆ ಶೃಂಗಾರರಸದಲ್ಲಿಯೇ ಹೆಚ್ಚು ಅಭಿರುಚಿ ಇರುವಂತೆ ತೋರುತ್ತದೆ. ಆದ್ದರಿಂದ, ನಳ-ದಮಯಂತಿಯರ ವಿವಾಹದ ನಿರೂಪಣೆಗೆ

ಕೃತಿಯ ಬಹುಭಾಗವನ್ನು ಮೀಸಲಿಟ್ಟು, ಈ ಕಥಾನಕದ ಉತ್ತರಾರ್ಧದಲ್ಲಿ ಹುದುಗಿರುವ ಕರುಣರಸದ ಪ್ರಸಂಗಗಳನ್ನು ಬಹಳ ಬೇಗನೆ ಹೇಳಿ ಮುಗಿಸುವನು.

ಚೌಂಡರಸನಿಗೆ ಕಥನಕ್ರಿಯೆಗಿಂತಲೂ ವರ್ಣನೆಯ ಕಡೆ ಹೆಚ್ಚು ಒಲವು. ಇದಕ್ಕೆ ಪ್ರಾಚೀನ ಕಾವ್ಯಗಳಲ್ಲಿ ಆತನಿಗಿರುವ ಪ್ರವೇಶವೂ ಕಾರಣವಿರಬಹುದು. ನಳಮಹಾರಾಜನ ಜನನ, ಬಾಲ್ಯ, ಬೆಳವಣಿಗೆ, ರೂಪು, ಪ್ರತಾಪ, ಸೌಂದರ್ಯಗಳನ್ನು ಬಿಡಿ ಬಿಡಿಯಾಗಿ ಹೊಗಳುತ್ತ ಆತನ ಕೀರ್ತಿ ಹೇಗೆ ಹಬ್ಬಿ ಹರಡಿತು ಎನ್ನುವುದನ್ನು ಬಹಳ ಹುರುಪಿನಿಂದ ವರ್ಣಿಸಿರುವನು.

ಒಡಿದೊಡೆ ಖಡ್ಗಮಂ ನಳನೃಪಂ ರಿಪುವಾಗಳೆ ಯುದ್ಧರಂಗದೊಳ್
ಮಡಿವನಿದಿರ್ಚನೇಬ ನುಡಿಗೇಳ್ದೊಡೆ ತನ್ನಯ ರಾಜ್ಯಮೆಲ್ಲಮಂ
ಬಿಡುವನಮರ್ಚಿದುಂಗುಟವಲುಂಗಿದೊಡಂಘ್ರಿಯ ಮೇಲೆ ಬೇಗದಿಂ
ಕೆಡೆವನದೇನಮಾನುಷವೊ ಬಾಹುಬಲಂ ವಿಮಳಾಧಿನಾಥನಾ

(ಪದ್ಯ ೩೫)

ಈ ಪದ್ಯದ ಸರಣಿಯನ್ನು ಕೇಳಿದ ಕೂಡಲೆ ಯಾರಿಗಾದರೂ ರನ್ನನು ಇಟ್ಟಿವ ಬೆಡಂಗ ಸತ್ಯಾಶ್ರಯನ ಸಹಜವಾದ ಬಾಹುಬಲವನ್ನು ಬಣ್ಣಿಸಿದ ಬಗೆಯ ನೆನಪಾಗದೆ ಇರುವುದಿಲ್ಲ.

ಅತ್ತ ಭೀಮರಾಜನ ಮಗಳಾದ ದಮಯಂತಿಯ ಸೌಂದರ್ಯವೂ ಇಷ್ಟೇ ಜನಜನಿತವಾಗಿ ದೇಶ ದೇಶಗಳಲ್ಲೆಲ್ಲ ಹಬ್ಬಿತ್ತು.

ರೂಪವಿಹೀನರು ಕುಟಿಲಬುದ್ಧಿಗಳಂ ಪರಪೀಡೆಯುಳ್ಳರುಂ
ಕೋಪಿಗಳುಂ ಕುಲಾಧಮರನಸ್ಥಿರರುಂ ಸತತಂ ದರಿದ್ರರುಂ
ಚಾಪಲಚಿತ್ತರುಂ ಮಱೆದು ನಿರ್ಮಿಸಿದುತ್ಕಟ ಚಿಂತೆಯಿಂದೆ ತ
ತ್ತಾಪಮಡಂಗಲೆಂದು ಪಡೆದಂ ದಮಯಂತಿಯನಬ್ಜಸಂಭವಂ (ಪದ್ಯ ೪೧)

ಈ ಪದ್ಯದ ಪದಸರಣಿ, ಭಾವಾಭಿವ್ಯಕ್ತಿಗಳಿಂದಲೇ ದಮಯಂತಿಯ ಸೃಷ್ಟಿ ಎಷ್ಟು ಅತಿಶಯವಾದುದೆನ್ನುವುದನ್ನು ಗ್ರಹಿಸಬಹುದು. ಆದರೆ, ಬ್ರಹ್ಮನ ಈ ಪ್ರಜ್ಞೆಯ ಸಮರ್ಥನೆ ರಸಿಕರಿಗೆ ಹೊಸದಾದುದೇನೂ ಅಲ್ಲ. ಕಾಳಿದಾಸ, ಪಂಪ ಮೊದಲಾದವರ ಕಾವ್ಯಗಳಲ್ಲಿ ನಿರೂಪಿತವಾಗಿರುವ ನಿರತಿಶಯವಾದ ಕ್ರಮವೇ ಇಲ್ಲಿಯೂ ತೋರಿಬರುತ್ತದೆ. ಇದು ಹೇಗಾದರಿರಲಿ, ಇಂಥ ರೂಪು ಲಾವಣ್ಯಗಳಿಂದ ತುಂಬಿ ತುಳುಕಾಡುವ ದಮಯಂತಿಯ ವೃತ್ತಾಂತವನ್ನು ಕೇಳಿದ ನಳಮಹಾಜನಿಗೆ ತಾನು ಆಕೆಯನ್ನೇ ವರಿಸಬೇಕೆಂಬ ಹಂಬಲ ಹೆಚ್ಚಾಗುತ್ತದೆ. ಆತನ ತುಮುಲ ಅಧಿಕವಾದಂತೆಲ್ಲ ವಿರಹತಾಪ ಪ್ರಬಲಿಸಿ ಅವನನ್ನೇ ಸುಡಲು ಮೊದಲಾಗುತ್ತದೆ. ಆ ಬೇಗೆಯ ಪರಮಾವಧಿಯನ್ನು ಚಿತ್ರಿಸುವ ಕವಿಯ ಮಾತಿನ ವೈಖರಿ ಹೀಗಿದೆ :

ಇನ್ನೊಮ್ಮೆ ಸುಡುವೊಡಂಗಜ
ಸಂ ನೀಲಗ್ರೀವ ನಿನಗೆ ಭಾಳಾಕ್ಷಿಯ ಕಿ
ಚ್ಚಿನ್ನೆಲ್ಲಿಯದೆನ್ನದಿರೀ
ವೆಂ ನಲವಿಂ ಕಡನನೆನ್ನ ತಾಪಾನಲನಂ ೪೭

ತನ್ನ ಹೃದಯದಲ್ಲಿನ ವಿರಹಾಗ್ನಿ, ಈಶ್ವರನ ಹಣೆಗಣ್ಣಿನ ಕಿಚ್ಚಿಗೆ ಸಮಾನವೆಂಬ ಕಲ್ಪನೆ ಎಷ್ಟು ರಮಣೀಯವೋ, ಅದನ್ನು ಈಶ್ವರನಿಗೆ ಸಾಲವಾಗಿ ಕೊಡಲೂ ಸಿದ್ಧನಿರುವನೆಂಬ ನಿರೂಪಣೆ ಅಷ್ಟೇ ಅರ್ಥವತ್ತಾಗಿದೆ. ಇಂಥ ಭಾವಗರ್ಭಿತವಾದ ಅನುಭವವುಳ್ಳ ಉಕ್ತಿಗಳನ್ನು ಕವಿ ಅನ್ಯರ ಪ್ರಭಾವದಿಂದ ಬರೆದಿರಬಹುದಾದರೂ, ಅವುಗಳು ಕವಿಯ ಟಂಕಸಾಲೆಯಲ್ಲಿ ರೂಪುಗೊಂಡು ಸಂದರ್ಭೋಚಿತವಾಗಿ ಸ್ವಕೀಯವೆನ್ನಲು ಅಡ್ಡಿಯಿಲ್ಲ. ರನ್ನಕವಿಯಲ್ಲಿನ ಎಷ್ಟೋ ಅಪಹರಣ ಭಾಗಗಳು ಅವನ ಹೃದಯಾನುಭವದ ವೈಶಿಷ್ಟ್ಯದಿಂದ ಸ್ವೀಕಾರಾರ್ಹವೆನಿಸಿ ಪಂಡಿತರ ಮಾನ್ಯತೆಯನ್ನು ಗಳಿಸಲಿಲ್ಲವೆ? ಇಂಥ ಸಂದರ್ಭಗಳಲ್ಲಿ ಸ್ವವಿದಿತವಾಗುವ ಕವಿಯ ಪ್ರಾಸಾದಿಕ ಶೈಲಿಯೂ ಇದಕ್ಕೆ ಪೋಷಕವಾಗಿ ಬರುವುದನ್ನು ಕಡೆಗಣಿಸುವಂತಿಲ್ಲ.

ನಳನ ವಿರಹತಾಪ ಒಳಗೊಳಗೇ ಹಗೇವಿನ ಬೆಂಕಿಯಂತೆ ಕುದಿಯುತ್ತಿರಲು ವಸಂತ ಋತುವಿನ ಆಗಮನವಾಗುವುದು. ಆ ಶೃಂಗಾರಮಾಸವಾದರೋ ವಿರಹಿಗಳಿಗೆ ಎದೆಯ ಶೂಲದಂತೆ! ಕುರುವಿನ ಮೇಲೆ ಬರೆ ಎಳೆದಂತೆ ಅಸಹನೀಯ. ಪ್ರೌಢಕವಿಯಾದ ಚೌಂಡರಸ ವಸಂತಋತುವನ್ನು ತನ್ನ ಕಥಾವಸ್ತುವಿನ ಹಂದರಕ್ಕೆ ತಕ್ಕಂತೆ ಚಿತ್ರಿಸಿರುತ್ತಾನೆ.

ವನದ ಸಿರಿ ವಿರಹಿಜನದುರಿ
ಮನಸಿಜನೈದಂಬಿನಲರ್ಗೆ ಹರವರಿ ಶಿಶಿರ
ಕ್ಕನುದಿನ ದರಿಯೆನಿಸಿರ್ಪಾ
ತನ ಪರಿ ಪೊಸತಾಯ್ತು ಚೈತ್ರಭೂಪಾಲಕನಾ ೫೫

ಚೈತ್ರಭೂಪಾಲಕನು ನಳನೃಪಾಲನ ಮೇಲೆ ದಂಡೆತ್ತಿಬಂದನೋ ಎಂಬಂತೆ ವಿರಹಾತುರದಿಂದ ತುಂಬ ವಿಹ್ವಲನಾದನು. ರಾಜನ ಮನಃಸ್ಥಿತಿಯನ್ನು ಕವಿ ಬಹಳ ಸಹಜವಾಗಿ ಚಿತ್ರಿಸಿರುತ್ತಾನೆ.

ಏತೆಜದಿಂ ಮೃಗಾಕ್ಷಿ ದಮಯಂತಿಯ ಸಂಗಮದಪ್ಪುದೆಂದು ನಿ
ಶ್ಚೀತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ ತನ್ನ ಬಾಟ್ಕೆಯಿ
ನ್ನೇತಜದೆಂಬ ಮಯ್ಮಱಕದಿಂ ನವಚಿತ್ರಪಟಂಬೊಲಿರ್ಪನಾ
ಭೂತಳವಲ್ಲಭಂ ವಿರಹವಿಸ್ಮೃತಿ ಕೇವಳಮೇ ಧರಿತ್ರಿಯೊಳ್ ೬೩

ಆತ್ಮಸಂತಾಪವೆಂತಿದ್ದರೂ ಕರ್ತವ್ಯಪರಾಙ್ಮುಖನಾಗದ ರಾಜನು ಓಲಗಶಾಲೆಗೆ ಬರಲು, ಕಾಡುಮೃಗಗಳ ಹಾವಳಿಯನ್ನು ತಪ್ಪಿಸಬೇಕೆಂದು ದೈನ್ಯರಾಗಿ ಬಂದು ನಿಂತಿದ್ದ

ಬೇಟೆಯ ನಾಯಕರನ್ನು ಕಂಡನು. ಅವರ ಕೋರಿಕೆಗೆ ಕಿವಿಗೊಟ್ಟು ಸಕಲ ಸನ್ನದ್ಧನಾಗಿ ಅವರೊಂದಿಗೇ ಬೇಟೆಗೆ ಹೊರಟನು.

ಆ ಬೇಟೆಯ ಮಧ್ಯದಲ್ಲಿಯೂ ಮನ್ಮಥನು ನಳನ ಹೃದಯದಲ್ಲಿ ನೆಲಸಿ ಆತನನ್ನೇ ಬೇಟೆಯಾಡಿ ಕಾಡುವುದನ್ನು ಬಿಡಲಿಲ್ಲ. ಆ ಅರಣ್ಯಮಧ್ಯದಲ್ಲಿ ಕಾಮತಪ್ತವಾಗಿದ್ದ ಗಂಡು ಜಿಂಕೆಯೊಂದು ತನ್ನ ಸಖಿಯನ್ನು ಕಂಡು ಬೆನ್ನಟ್ಟಿಹೋಗಲು, ಅದರ ಇಂಗಿತ ವನ್ನರಿತ ರಾಜನ ಹೃದಯದಲ್ಲಿ ಅದುಮಿಟ್ಟಿದ್ದ ತಾಪ ಭುಗ್ಗನೆದ್ದಿತು. ಮಹಾರಾಜನು ಅದನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿದನು. ಈ ಚಿತ್ತಸ್ಥಿತಿಯನ್ನು ಕವಿ ಹೀಗೆ ಚಿತ್ರಿಸಿರುತ್ತಾನೆ :

ಅದನೀಕ್ಷಿಸಿ ನಳನರಪತಿ
ಯಿದು ಮತ್ಸಖಿಯೆಂದೊಡಾಕ್ಷಣಂ ಕಡುಪಿಂದಂ
ಹೃದಯದ ತಾಪಂ ಪೆರ್ಚಲ್
ಪದುಳಿಸಿಕೊಂಡಂ ಮುಗುಳ್ದು ಧೀರೋದಾತ್ತಂ (ಪದ್ಯ ೭೩)

ಬೇಟೆಯ ಆರ್ಭಟವೆಲ್ಲ ಮುಗಿದು ಬಳಲಿದ ಬೇಡವಡೆ ಬಾಯಾರಿಕೆಯಿಂದ ಕಂಗೆಟ್ಟಿರಲು, ಎದುರಿನಲ್ಲಿ ಒಂದು ಹೂಗೊಳವು ಕಂಡುಬಂದಿತು. ಇತರರ ಪಾಲಿಗೆ ಅದು ನೀರಡಿಕೆಯನ್ನು ನಿವಾರಿಸಿಕೊಳ್ಳುವ ನೀರಪಾಕರವೆನ್ನಿಸಿದರೆ, ನಳನಿಗೆ ಆತನ ಹೃದಯಸಂತಾಪವನ್ನು ಹೋಗಲಾಡಿಸುವ ಹಿತಸಾಧನವೆನ್ನಿಸಿತು. ಮಹಾರಾಜನು ಆ ಸರೋವರದಲ್ಲಿ ಇಳಿದು, ತನ್ನ ಬಳಲಿಕೆಯನ್ನು ಪರಿಹರಿಸಿಕೊಂಡು ಹಾಗೆಯೇ ದೃಷ್ಟಿ ಹಾಯಿಸುತ್ತಿರಲು, ಆಗ ಆತನ ಕಣ್ಣಿಗೆ ಅತ್ಯಂತ ಅಪೂರ್ವವಾದ ಹಂಸವೊಂದು ಗೋಚರವಾಯಿತು. "ಪರಮೇಷ್ಠಿ ಮರಾಳದ ರೂಪು ತಳೆದು ತಾನಿದು ತಪ್ಪದು" ಎಂಬಂತೆ ಅದು ತನ್ನ ಹೇಮರಂಜಿತ ಗರಿಗಳಿಂದ ಕೂಡಿ ಶೋಭಿಸುತ್ತಿತ್ತು. ಅದನ್ನು ನೋಡಿದ ರಾಜನು ನಿಬ್ಬೆರಗಾದನು ! ಆ ಹಂಸವನ್ನು ಹಿಡಿಯಲೆಂದು ರಾಜನು ಕೈಚಾಚಲು ಅದು ತಾನಾಗಿಯೇ ಆತನ ಕೈಗೆ ಸಿಕ್ಕಿಬಿದ್ದಂತೆ ವಶವಾಯಿತು. ಆ ತರುವಾಯ ರಾಜನಿಗೂ ಹಂಸನಿಗೂ ಮಾತುಕತೆಗಳಾದುವು. ಆ ಹಂಸವು ನೋಡಲು ಎಷ್ಟು ಮನೋಹರವಾಗಿದ್ದಿತೋ, ಅದರ ಮಂಜುಳವಾಣಿಯನ್ನು ಆಲಿಸಲು ಅಷ್ಟೇ ಅಪ್ಯಾಯಮಾನವಾಗಿತ್ತು. ಅದು ರಾಜನನ್ನು ಕುರಿತು

ಶಿಕ್ಷಿಸುವೊಡೆ ಮುಳಿದಾಂತ ವಿ
ಪಕ್ಷಂಗಳ ಕಾದಿ ಪಿಡಿವುದಲ್ಲದೆ ಮುಳಿಸಿಂ
ಪಕ್ಷಿಗಳಂ ಪಿಡಿವುದು ನಿಜ
ಲಕ್ಷಣಮೇ ಭೂಭುಜರ್ಗೆ ನೃಪಕುಲತಿಲಕಾ (ಪದ್ಯ ೧೦೭)

ಎಂದು ಸವಾಲು ಹಾಕಿತು. ಅದರ ಉಪದೇಶವಾಣಿಯನ್ನು ಕಿವಿಗೊಟ್ಟು ಆಲಿಸಿದ ನಳಮಹಾರಾಜನಿಗೆ ಕ್ರಮಕ್ರಮವಾಗಿ ಮನಸ್ಸು ಕರಗಿತು. ಕಡೆಗೆ ಅದನ್ನು

ಬಿಟ್ಟನು. ಮಹಾರಾಜನ ಆ ಔದಾರ್ಯಕ್ಕೆ ಹಂಸವು ತಲೆದೂಗಿ, ಆತನ ಉಪಕಾರಕ್ಕೆ ಪ್ರತಿಯಾಗಿ ಕುಂಡಿನಪುರದಲ್ಲಿರುವ ದಮಯಂತಿ ಆತನನ್ನು ವರಿಸುವಂತೆ ಮಾಡುವೆನು ಎಂದು ತಾನಾಗಿಯೇ ಭರವಸೆಯಿತ್ತಿತು. ಅದರ ಸಂಸ್ಕಾರಕ್ಕೆ ಸೋಜಿಗಗೊಂಡ ರಾಜನು ತನ್ನಲ್ಲಿಯೇ "ಎತ್ತಣ ಬೇಂಟೆಯೆತ್ತಣ ಸರೋವರವೆತ್ತಣ ಹಂಸೆ ನಾಡೆ ತ (ಮ ?) ಚ್ಚಿತ್ತದ ತಾಪಮಂ ತಿಳಿವುದೆತ್ತಣದು" ಎಂದು ಭಾವಿಸುತ್ತ ವಿದರ್ಭಾಭಿಮುಖನಾದನು.

ಅತ್ತ ಕುಂಡಿನಪುರದ ಉಪವನದಲ್ಲಿದ್ದ ಸರೋವರದ ತೀರದಲ್ಲಿ ದಮಯಂತಿ ತನ್ನ ಆಪ್ತ ಸಖಿಯರೊಂದಿಗೆ ಜಲಕೇಳಿಯಲ್ಲಿ ಮಗ್ನಳಾಗಿದ್ದಳು. ಆ ಹೆಣ್ಣುಮಕ್ಕಳ ಸೊಬಗು. ಸೌಂದರ್ಯಗಳನ್ನೂ ಅವರ ಆಟ ಆನಂದಗಳನ್ನೂ ಕವಿ ಬಹಳ ಹುಮ್ಮಸ್ಸಿನಿಂದಲೇ ಚಿತ್ರಿಸಿರುತ್ತಾನೆ. ಆ ಸರೋವರದ ತಿಳಿನೀರಿನ ಸೋಂಕಿನಿಂದಲೇ ದಮಯಂತಿ ಪುಳಕಿತಳಾಗಿ ಮೈಮರೆತಂತಿರಲು, ಆ ಹೊತ್ತಿಗೆ ಸರಿಯಾಗಿ ಆ ಪೊನ್ನ ಹಂಸ ಆಕೆಯ ಕಣ್ಣೆದುರು ಸುಳಿಯಿತು, "ಇದು ಚಿತ್ರಂ" ಎಂದು ಮೇಲೆದ್ದು, ಅದನ್ನು ಹಿಡಿಯ ತೊಡಗಿದಳು. ಆಗ ಆ ನಿಪುಣ ಪಕ್ಷಿ ಸಿಕ್ಕಿಯೂ ಸಿಕ್ಕದಂತೆ ಸುಳಿದಾಡುತ್ತ "ಎನ್ನನ ದೆಂದು ನೀಂ ಪಿಡೆಯಲಾರ್ಪೆ ನಳಂ ಮನವೊಲ್ದು ಸಾಕಿದಂ ಮನ್ನಣೆಯಿಂ ಮಹಾಕರುಣಿ ಧಾರ್ಮಿಕನ್ ಅಂಗಜರೂಪಸನ್ನಿಭನ್ ನನ್ನಿಯ ಮಾತನಲ್ಲದಜಿಯನ್ ಸುಚರಿತ್ರ ಪವಿತ್ರನ್" ಎಂದು ಸಾರಿ ಹೇಳುತ್ತ ಕಡೆಗೂ ಆಕೆಯ ಕೈಗೆ ವಶವಾಯಿತು. ಹಂಸದ ಚೆಲುವಿಗೆ ಮನಸೋತಿದ್ದ ದಮಯಂತಿಗೆ ನಳನ ಗುಣಗಾನವನ್ನು ಕೇಳಿದ ಕೂಡಲೆ "ಪೂರ್ವಸ್ಮರಣದಿಂದೆ ತಳವೆಳಗಾದಳ್" "ಎಲ್ಲಿಯ ನಳನೆಲ್ಲಿಯ ನೀನೆಲ್ಲಿಯಳಾನಿಲ್ಲಿಗೇಕೆ ಬಂದೀಗಳ್ ಮದ್ವಲ್ಲಭನಂ ನೆನೆಗೊಂಡಪೆಯೆಲ್ಲವ ನೀಂ ಸಹಜವಾಗಿ ಪೇಟಿಲೆ ಹಂಸಾ" ಎಂದು ಅದನ್ನು ಮತ್ತೆ ಮತ್ತೆ ಪ್ರಶ್ನಿಸಿದಳು. ಅದು ನಳಮಹಾರಾಜನ ಗುಣಾವಳಿಯನ್ನು ಮುಕ್ತಕಂಠದಿಂದ ಹೊಗಳಿ ಆತನು ದಮಯಂತಿಗಾಗಿ ಹೇಗೆ ಹಗಲಿರುಳೂ ಹಂಬಲಿಸುತ್ತಿರುವನೆಂಬುದನ್ನು ಎಳೆಎಳೆಯಾಗಿ ಚಿತ್ರಿಸಿತು. ಪ್ರಣಯಿಗಳ ಹೃದಯಗಳನ್ನು ಕೆಣಕಿ, ಕಲಕಿ, ಅವರಿಬ್ಬರ ಸಮಾಗಮಕ್ಕೆ ಸುಗಮವಾದ ಸೇತುವೆಯನ್ನು ನಿರ್ಮಿಸಿದ ಈ ರಾಜಹಂಸಪಕ್ಷಿಯ ದೌತ್ಯವನ್ನು ಚೌಂಡರಸ ಬಹಳ ಜೀವಂತವಾಗಿಯೇ ಸೃಷ್ಟಿಸಿರುತ್ತಾನೆ. ಈ ಪ್ರಸಂಗದ ನಿರ್ಮಾಣದಲ್ಲಿ ಕವಿ ಇತರ ಕವಿಗಳಿಗೆ ಎಷ್ಟೇ ಋಣಿಯಾಗಿದ್ದರೂ, ಅದರ ಪಾಕ ಕನ್ನಡ ಕವಿಯ ಕೌಶಲವೇ ಸರಿ.

ದಮಯಂತಿಯ ವಿರಹತಾಪವನ್ನೂ ಚೌಂಡರಸ ಸಾಕಾದಷ್ಟು ಉಜ್ವಲವಾಗಿಯೇ ನಿರೂಪಿಸಿರುತ್ತಾನೆ. ಮಗಳ ದಾರುಣವ್ಯಥೆಯು ಭೀಮರಾಜನ ಗಮನಕ್ಕೆ ಬರಲು, ಆತನು ಆಯುರ್ವೇದತಜ್ಞರನ್ನು ಕರೆಸಿ ಕೇಳಿದನು. ಅವರು ಅತ್ಯಂತ ಧ್ವನಿಪೂರ್ಣವಾಗಿ "ಭೂಪಾಲಕ, ಇದು ನಳದ ಕಷಾಯದಿಂದಲ್ಲದೆ ಬೇರೆ ಯಾವುದರಿಂದಲೂ ನಿವಾರಿಸದು" ಎಂದು ಉತ್ತರಿಸಿದರು. [ದೇವಾಕರ್ಣಯ ಸುಶ್ರುತೇನ ಚರಕಸ್ಯೋಕ್ತೇನ ಜಾನೇವಖಿಲಂ ಸ್ಯಾದಸ್ಯಾ ನಲದಂ ವಿನಾ ನದಲನೇ ತಾಪಸ್ಯ

ಕೋऽಪಿ ಕ್ಷಮಃ (ನೈಷಧೀಯ ಚರಿತ, ಸರ್ಗ IV. ಶ್ಲೋಕ ೧೧೬) ಎಂಬ ಸಂಸ್ಕೃತ ವಾಕ್ಯಸರಣಿಯನ್ನೇ ಕವಿ ತಪ್ಪದೆ ಅನುಸರಿಸಿರುವುದನ್ನು ಕಾಣಬಹುದು]

ಭೀಮರಾಜನು ವೈದ್ಯರ ಇಂಗಿತವನ್ನು ಗ್ರಹಿಸಿ, ದಮಯಂತಿಯ ಸ್ವಯಂವರಕ್ಕೆ ಬಹಳ ವಿಜೃಂಭಣೆಯಿಂದ ಎಲ್ಲವನ್ನೂ ಏರ್ಪಡಿಸಿದನು. ಚೌಂಡರಸನಿಗೆ ತನ್ನ ಕಥಾ ನಾಯಕ ನಾಯಕಿಯರ ಈ ವಿವಾಹವೈಭವವನ್ನು ವರ್ಣಿಸುವುದರಲ್ಲಿ ಬೇಸರ ಬಳಲಿಕೆ ಗಳಾವುವೂ ಇಲ್ಲ. ಸರಿಸುಮಾರಾಗಿ ೨೬೫ ಪದ್ಯಗಳಲ್ಲಿ ಈ ಮಂಗಳ ಮಹೋತ್ಸವ ವನ್ನು ಸವಿಸ್ತಾರವಾಗಿ ಚಿತ್ರಿಸಿರುವನು. ಈ ಪ್ರಸಂಗದ ಕೆಲವು ಸನ್ನಿವೇಶಗಳು ತುಂಬ ಚಿತ್ತಾಕರ್ಷಕವಾಗಿರುವುವು.

ನಳಮಹಾರಾಜನು ಕಲ್ಯಾಣನಿಮಿತ್ತವಾಗಿ ಹೊರಡುವಲ್ಲಿ ವಿಘ್ನನಿವಾರಕನಾದ ವಿನಾಯಕನನ್ನು ಸ್ತುತಿಸುವುದೇನೋ ಸಮಯೋಚಿತವಾಗಿದೆ. ಆದರೆ, ಗಣಪತಿಯ ಈ ಗುಣಸ್ತವನ ಮೇರೆಮೀರಿ ಬೆಳೆದು ಕಥಾಸಕ್ರಿಯೆಗೆ ಅಡ್ಡಿಯಾಗಿದೆಯೆಂದು ಆಕ್ಷೇಪಿಸದೆ ಇರಲು ಸಾಧ್ಯವಿಲ್ಲ. ಲಲಿತರಗಳೆಯಲ್ಲಿ ನಿರರ್ಗಳವಾಗಿ ಸಾಗಿರುವ ಈ ಸ್ತೋತ್ರವಾಹಿನಿ ನಳನೃಪನಿಗಿಂತಲೂ ಹೆಚ್ಚಾಗಿ ಕವಿಯ ವಿನಾಯಕಭಕ್ತಿಯ ಪ್ರೇರಣೆಯ ಪ್ರತೀಕವೆನ್ನಬಹುದು.

ದಮಯಂತಿಯ ಸ್ವಯಂವರವಾರ್ತೆಯನ್ನು ನಾರದರಿಂದ ತಿಳಿದ ದೇವೇಂದ್ರ, ಅಗ್ನಿ, ಯಮ, ವರುಣರೇ ಮೊದಲಾದವರು ತಾವೂ ವಿವಾಹಾಕಾಂಕ್ಷೆಯಿಂದ ಭೀಮರಾಜನ ಪಟ್ಟಣಕ್ಕೆ ತೆರಳಿದರು. ನಡುದಾರಿಯಲ್ಲಿಯೇ ನಳನ ಸ್ಫುರದ್ರೂಪವನ್ನು ಕಂಡು, ಅವರು ಅದು ಭೂಲೋಕಕ್ಕೆ ಅತಿಶಯವೆಂದು ದಿಗ್ಭ್ರಾಂತರಾದರು. ಆ ದೇವತೆಗಳು ತಮ್ಮ ಸ್ವರೂಪವನ್ನು ನಳನಿಗೆ ತೋರಿಸಿಕೊಟ್ಟು, ಆತನನ್ನು ದಮಯಂತಿ ತಮಗೆ ಒಲಿಯುವಂತೆ ಮಾಡಬೇಕೆಂದು ಕೇಳಿಕೊಂಡರು. ನಳಮಹಾರಾಜನಿಗೆ ಏನು ಹೇಳಲೂ ದಿಕ್ಕು ತೋಚದೆ ನಕ್ಕು "ಅದೆನ್ನಿಚ್ಛೆಯೆ ಲೋಕರತ್ನವನದು ತಾನೀಯಲೇಂ ಬಕ್ಕುಮೇ" ಎಂದು ಉಪಾಯಾಂತರದಿಂದ ಜಾರಿಕೊಳ್ಳಲು ಯತ್ನಿಸಿದನು. ಆ ದೇವತೆಗಳಿಗಾ ದರೋ ನಳನನ್ನು ತಮ್ಮ ದೂತನನ್ನಾಗಿ ಅಟ್ಟಿ, ಆ ಮೂಲಕ ದಮಯಂತಿಗೆ ಆತನಲ್ಲಿ ಹೀನ ಭಾವನೆಯನ್ನುಂಟುಮಾಡಬೇಕೆಂದು ಸಂಚು. ಆದ್ದರಿಂದ ನಳನನ್ನು ಹುರಿದುಂಬಿಸಿ, ಆತನಿಗೆ ಅಗೋಚರವಿದ್ಯೆಯನ್ನು ಅನುಗ್ರಹಿಸುವೆನೆಂದು ತಿಳಿಯಹೇಳಿದರು. ಆಗ ನಳನು ಚೆನ್ನಾಗಿ ಪರಾಮರ್ಶಿಸಿ ಅಂಥ ದೇವಾನುದೇವತೆಗಳೆ ಬಂದು ತನ್ನನ್ನು ಬೇಡು ತ್ತಿರುವಲ್ಲಿ 'ತನ್ನ ದೇಹಸುಖಪೇತಜಿದೆಂದು ಪರೋಪಕಾರವಂ ಕೋವಿದವೃತ್ತಿಯಿಂದೆ ಸಗದಿರ್ಪನ ಜೀವನವೇನು" ಎಂಬ ಉದಾತ ದೃಷ್ಟಿಯಿಂದ ಆ ದೌತ್ಯವನ್ನು ಮಾಡಲು ಒಪ್ಪಿಕೊಂಡನು. ದೇವತೆಗಳಿಗಾದರೋ ನಳನ ಬಗ್ಗೆ ಸ್ವಲ್ಪ ಸಂಶಯ ಕಾಡದೆ ಬಿಡಲಿಲ್ಲ. ಆತನು ಅತ್ತ ತೆರಳಿದ ಕೂಡಲೆ, ಆತನನ್ನೇ ಅನುಸರಿಸಿ, ಯಾರಿಗೂ ಗೋಚರವಾಗದಂತೆ ಇದ್ದು, ಆತನು ಎಷ್ಟರಮಟ್ಟಿಗೆ ಈ ಕಾರ್ಯವನ್ನು ನಿರ್ವಹಿಸುವನೆಂಬುದನ್ನು ಗಮನಿಸು

ವಂತೆ ಒಬ್ಬ ಹೆಂಗಸನ್ನು ಅತಿ ಸೂಕ್ಷ್ಮಾಕೃತಿಯಿಂದ ಆತನನ್ನೇ ಹಿಂಬಾಲಿಸುವಂತೆ ಹೇಳಿ ಕಳುಹಿಸಿದರು.

ವಿರಹತಪ್ತಳಾಗಿ ಬೇಯುತ್ತಿದ್ದ ದಮಯಂತಿಯನ್ನು ಕಂಡ ನಳನು ತನ್ನ ಕಾರ್ಯದಿಂದ ಚ್ಯುತನಾಗದೆ, ದೇವತೆಗಳ ಮನೋಭಿಪ್ರಾಯವನ್ನು ಆಕೆಯ ಸಖಿಯರಿಗೆ ತಿಳುಹಿಸಿ, ಅಂತಹವರನ್ನು ಆಕೆ ಕೈಹಿಡಿಯುವುದು ತಕ್ಕುದೆಂದು ಬೋಧಿಸಿದನು. ಅವರಾದರೋ,

ನಗೆಯೊಡಲಾತನಾ ಹರಣಗೊಂಬವನಂ ಒಡವಾಗಿ ಪುಟ್ಟಿತಂ
ಹೊಗೆಮುಸುಡಾತನಂ ಜಡನನೊಳ್ಳಿದನೆಂಬರೆ ಭೂಪ ಕೂರ್ಮೆಯಿಂ
ಮೃಗಶಿಶುನೇತ್ರೆಗೇಂ ದೊರೆಯುವರ್ ವರಿಸಲ್ ನಳನಲ್ಲದನ್ಯರಂ
ಬಗೆವಳೆ ಚಿತ್ತದೊಳ್ ದಿವಿಜಸಂತತಿಯಂ ದಮಯಂತಿ ಸಂತತಂ (ಪದ್ಯ ೨೮೭)

ಎಂದು ತಮ್ಮ ಒಡತಿಯ ಅಚ್ಚಳಿಯದ ಒಲವನ್ನೇ ಒತ್ತಿ ಹೇಳಿದಳು.

ಈ ವೇಳೆಗೆ ದಮಯಂತಿ ದೂತನಾಗಿ ಬಂದಿರುವಾತನು ನಳನೆಂಬುದನ್ನರಿತು, "ಅವರೇಂ ಪಿರಿಯರ್ ಕಡುಕೆಯ್ವ ನಿನ್ನ ಸಂಸ್ತುತಿಗೆ ಕುಲೀನರಲ್ತುಣಲುಡಲ್ ಪಡೆಯರ್ ಸತತಂ ಸುರಾಲಯಸ್ಥಿತರ್" ಎಂದು ದೇವತೆಗಳನ್ನು ನಿಕೃಷ್ಟವಾಗಿ ನಿಂದಿಸಿ "ಉರ್ವರೇಶ ನೀಂ ಪತಿ ಸತಿಯಾನ್" ಎಂದು ಖಡಾಖಂಡಿತವಾಗಿ ಹೇಳಿ, ಆತನಿಗೆ ಕೈಮುಗಿದು ಕೂಡಲೆ ದೀರ್ಘ ನಮಸ್ಕಾರ ಮಾಡಿದಳು.

ನಳಮಹಾರಾಜನು ಮುಂದೆ ಮಾತು ಬೆಳಸದೆ, ದೇವತೆಗಳಲ್ಲಿಗೆ ಹಿಂತಿರುಗಿ ಬಂದು ದಮಯಂತಿಯ ಅಭಿಪ್ರಾಯವನ್ನು ಮುಚ್ಚುಮರೆಯಿಲ್ಲದೆ ತಿಳಿಸಿದನು. ಸೂಕ್ಷ್ಮಾಕೃತಿಯಿಂದ ಹಿಂಬಾಲಿಸಿದ್ದ ತರಳೆಯೂ ನಳನ ಮಾತುಗಳನ್ನೆಲ್ಲ ಸಮರ್ಥಿಸಿದಳು. ಈ ಸೂಕ್ಷ್ಮ ಸನ್ನಿವೇಶವನ್ನು ಕವಿ ಎಲ್ಲಿಯೂ ರಸಭಂಗವಾಗದಂತೆ ಬಹು ಸಂಯಮದಿಂದಲೇ ಚಿತ್ರಿಸಿರುವನು.

ಸ್ವಯಂವರಶಾಲೆಯ ವಿವರವೆಲ್ಲವೂ ಅನೂಚಾನವಾದ ಸರಣಿಯಲ್ಲಿಯೇ ಸಾಗಿದೆ. ದೇವತೆಗಳು ತಾವೂ ನಳನಂತೆಯೇ ರೂಪ ಧರಿಸಿ, ತಮ್ಮ ತಮ್ಮ ಪೀಠಗಳಲ್ಲಿ ಮಂಡಿಸಿದ್ದರು. ವರಣಮಾಲೆಯನ್ನು ಹಿಡಿದ ದಮಯಂತಿಗೆ; ಪಂಚನಳರನ್ನು ಕಂಡು ಕೊಂಚ ಕಂಗೆಡುವಂತಾಯಿತು. ಆಕೆ "ಮಗುವೆನಿಸಿರ್ಪನೀಂದು ನಳನಲ್ಲದೆ ಮಿಕ್ಕವರೆನ್ನ ಸೊಗಸುವೊಡಂ ಸುಗಂಧ ಕುಸುಮೋಜ್ವಲಮಾಲಿಕೆ ದಿವ್ಯಂ" ಎಂದು ತದೇಕಧ್ಯಾನದಿಂದ ಆ ಪಂಚನಳರತ್ತ ತಿರುಗಿ ನೋಡಲು, ವಂಚಕರ ವೇಷ ಬದಲಾಯಿತು. ಆಕೆ ನಿಷಧಾಧಿಪತಿಯಾದ ನಳನಿಗೆ ಮಾಲೆ ಹಾಕಿದಳು. ದಮಯಂತಿಯ ಪಾತಿವ್ರತ್ಯವನ್ನು ಮೆಚ್ಚಿಕೊಂಡ ದೇವತೆಗಳು ತಮಗಾದ ಹತಾಶೆಯನ್ನು ಮರೆತು, ಆಕೆಯನ್ನು ಹೃತ್ಪೂರ್ವಕವಾಗಿ ಹರಸಿ. ಆಕೆಯ ಪಾತಿವ್ರತ್ಯವನ್ನು ಯಾರಾದರೂ ಭಂಗಗೊಳಿಸಲು ಪ್ರಯತ್ನಿಸಿದರೆ, ಅವರು

ಕೊಡಲೇ ಭಸ್ಮೀಭೂತರಾಗುವಂತೆ ವರವನ್ನಿತ್ತು ತಾವು ಬಂದ ದಾರಿಯನ್ನು ಹಿಡಿದರು. ದೇವತೆಗಳು ಸಮಾಧಾನಚಿತ್ತದಿಂದ ಹಿಂತಿರುಗಿದರೂ, ಇತರ ರಾಜರು ತಮಗಾದ ಅಪಮಾನದಿಂದ ಕುಪಿತರಾಗಿ ಭೀಮರಾಜನ ಮೇಲೆ ಬಿದ್ದು ಹೋರಾಡತೊಡಗಿದರು. ಪರಾಕ್ರಮಶಾಲಿಯಾದ ನಳಮಹಾರಾಜನು ಯುದ್ಧಸನ್ನದ್ಧನಾಗಿ ಅವರನ್ನು ಪ್ರತಿಭಟಿಸಿದ ಮರುಕ್ಷಣದಲ್ಲಿಯೇ 'ಘನಘಟೆ ಗಾಳಿಯಿಂ ಪರೆವವೋಲ' ವಿರೋಧಿಗಳು ಚೆದರಿದರು.

ಶೃಂಗಾರಪ್ರಿಯನಾದ ಚೌಂಡರಸನಿಗೆ ಇದೀಗ ಚೇತರಿಸಿಕೊಂಡು ನಿರಾತಂಕದಿಂದ ಉಸಿರುಬಿಡುವಂತಾಯಿತು. ಸ್ವಯಂವರಮಂಟಪಕ್ಕೆ ದಮಯಂತಿಯನ್ನು ಶೃಂಗರಿಸಿ ಕರೆತರುವುದನ್ನು ವರ್ಣಿಸಲು ಅವನಿಗೆ ತಣಿವಿಲ್ಲ ; ದಣಿವಿಲ್ಲ. ವಿಧ್ಯುಕ್ತವಾಗಿ ವಿವಾಹ ಮಹೋತ್ಸವ ನೆರವೇರುವುದು. 'ವಿವಾಹ ಹೋಮವನೆಸಗಿ ಬಟಿಕ್ಕಮರ್ದ ಸಪ್ತಪದಿಯಂ ಮೆಟ್ಟಲ್ ಪಸರಿಸಿರೆ ಮುತ್ರುತತಿ ಷಡ್ರಸಭೋಜನದೆಸೆವ ಬೂವದೆಡೆಯಾಯ್ತಾಗಳ್.' ದಂಪತಿಗಳಿಗೆ ಬೂವದ ಊಟ ಏರ್ಪಟ್ಟಂತೆಯೇ ಬಂದಿದ್ದ ಬಂಧು ಬಳಗ, ಆಪ್ತರಿಗೆಲ್ಲ ಭೂರಿಭೋಜನವಾಯಿತು. ರಸದೂಟದ ಸವಿಯನ್ನು ಬಲ್ಲ ಚೌಂಡರಸ, ಈ ಸುಸಂದರ್ಭವನ್ನು ಬಹಳ ವಿಸ್ತಾರವಾಗಿಯೇ ವರ್ಣಿಸಿರುವನು. ಇಲ್ಲಿನ ವಿವರಗಳನ್ನು ಓದುತ್ತ ಓದುತ್ತ ನಾಲಗೆ ಚಪ್ಪರಿಸುವವರಿಗೆ ತಾವು ಯಾವ ಕಥೆಯನ್ನು ಓದಲು ತೊಡಗಿರುವರೆಂಬುದನ್ನು ಮರೆತರೂ ಸೋಜಿಗವಿಲ್ಲ. ಬಡಿಸುವವರೋ ಬಣ್ಣಬಣ್ಣದ ಗೊಂಬೆಗಳಂತಿರುವ ನಾರಿಯರು. ಊಟ ಮಾಡಲು ಕುಳಿತಿರುವ ರಸಿಕರ ಕಣ್ಣುಗಳು ಅವರ ಚೆಲುವಿಗೆ ಮಾರುವೋಗಿ, ಎಲೆಯಲ್ಲಿನ ಉಣಿಸನ್ನು ಕಲಸುವ ಕೈಗಳು ತಟಸ್ಥವಾಗದಿರಲಿಲ್ಲ. ಬಗೆಬಗೆಯ ಭಕ್ಷ್ಯಭೋಜ್ಯಗಳಂತೂ ಹೇಳತೀರದು. 'ಕಟ್ಟು ಮೊಸರ್, ಸುಜಿಪ ಮೊಸರ್, ಘಟ್ಟಿಮೊಸರ್, ಕೆನೆ ಮೊಸರ್, ಕರಂ ತೊಳೆಮೊಸರಿಂಪಿಟ್ಟ ಮೊಸರ್, ಪುಳಿಮೊಸರ್' ಎಂಬುದಾಗಿ ಮೊಸರಿನಲ್ಲಿಯೇ ವಿವಿಧ ಬಗೆಗಳನ್ನು ಗುರುತಿಸಬಲ್ಲ ಕವಿಯ ಲೋಕಾನುಭವ ಮೆಚ್ಚಬೇಕಾದದ್ದು. ಮಲ್ಲಿಕಾರ್ಜುನನೂ ಸಹ ಚೌಂಡರಸನ ಈ ಅಡಿಗೆಯ ವಿವಿಧ ಪ್ರಕಾರಗಳು ಮತ್ತು ಪ್ರಭೇದಗಳನ್ನು ಮೆಚ್ಚಿಕೊಂಡು, ಇಲ್ಲಿ ಉಕ್ತವಾಗಿರುವ ಉಪ್ಪಿನಕಾಯಿಯ ವೈವಿಧ್ಯವನ್ನು ಕುರಿತ ಪದ್ಯವನ್ನೂ, ಊಟದ ಮಧ್ಯೆ ಬಡಿಸಿಕೊಳ್ಳುವ ಹಲವು ತೆರನಾದ ಕಾಯಿಗಳನ್ನು ಕುರಿತ ಪದ್ಯವನ್ನೂ ತನ್ನ "ಸೂಕ್ತಿಸುಧಾರ್ಣವ"ದಲ್ಲಿ ಉದಾಹರಿಸಿರುವನೆಂದಮೇಲೆ ಇನ್ನು .ಬೇರೆಯವರ ಹೊಗಳಿಕೆಯಾದರೂ ಏಕೆ ? ವಧೂ-ವರರ, ಬಂಧು ಬಳಗದವರಲ್ಲಿನ ಆತ್ಮೀಯತೆ ಬೆಳೆಯಲೆಂದೋ ಏನೋ, ವಿವಾಹಕಾಲದಲ್ಲಿ ಓಕುಳಿಯಾಟ ಆಡುವುದು ನಮ್ಮಲ್ಲಿನ ಒಂದು ಸಂಪ್ರದಾಯ. ಆ ಮೇರೆಗೆ ನಳ-ದಮಯಂತಿಯರ ಕಲ್ಯಾಣದ ಅಂಗವಾಗಿ ಚೌಂಡರಸನು ಓಕುಳಿಯ ಆಟದ ವಿಲಾಸ ವಿಭ್ರಮಗಳನ್ನು ಹೃದಯಂಗಮವಾಗಿ ವರ್ಣಿಸಿರುವನು. ಶೃಂಗಾರಸಾರನಾದ ಕವಿಗೆ ಹೆಣ್ಣುಮಕ್ಕಳಲ್ಲಿಯೇ ಪಕ್ಷಪಾತವಿರುವಂತೆ ತೋರುತ್ತದೆ.

ಇಲ್ಲಿನ ಓಕುಳಿ ಆಟದಲ್ಲಿ ಸ್ತ್ರೀಯರದೇ ಮೇಲುಗೈ, ನಳಮಹಾರಾಜನು ಕೇವಲ ಪ್ರೇಕ್ಷಕನಾಗಿ ಆ ಕ್ರೀಡೆಯನ್ನು ನೋಡಿ ಕೊಂಡಾಡಿದನು. ಮದುವೆಯ ವೈಭವವೆಲ್ಲ ಮುಗಿದು ನಳಮಹಾರಾಜನು ದಮಯಂತಿಯೊಡನೆ ತನ್ನ ಪಟ್ಟಣಕ್ಕೆ ತೆರಳಿದನು.

ನಲೋಪಾಖ್ಯಾನದಲ್ಲಿ, ನಳನ ಕಲ್ಯಾಣ ಪೂರ್ವಾರ್ಧವೆನ್ನಿಸಿದರೆ, ಆ ತರುವಾಯ ಈ ದಂಪತಿಗಳಿಗೆ ಒದಗುವ ದುಃಖಪರಂಪರೆಗಳು ಉತ್ತರಾರ್ಧವಾಗುತ್ತವೆ. ಈ ಅನಂತ ದುಃಖಪರಂಪರೆಗಳನ್ನು ತಮ್ಮ ಸಹನೆಯಿಂದಲೂ, ಸ್ಥೈರ್ಯದಿಂದಲೂ ಸಹಿಸಿಕೊಂಡು ಜಯಪ್ರದರಾಗುವ ಈ ದಂಪತಿಗಳ ಹಿರಿಮೆ ಯಾರನ್ನಾದರೂ ಬೆರಗುಗೊಳಿಸದೆ ಇರುವುದಿಲ್ಲ. ಕಥೆಯ ಪೂರ್ವಾರ್ಧದ ಸಂತೋಷ ಸಂಭ್ರಮಗಳಿಗೂ ಉತ್ತರಾರ್ಧದ ಸಂಕಟ ಸಂತಾಪಗಳಿಗೂ ನಡೆಯುವ ಈ ಸಂಘರ್ಷಣೆ ಹಗಲಿರುಳುಗಳಂತೆ, ಉಬ್ಬರವಿಳಿತಗಳಂತೆ ಪರಸ್ಪರ ಪೂರಕವಾದುವು. ಮೊತ್ತಮೊದಲಿನ ಘಟನೆಗಳು ಉತ್ಸಾಹದಾಯಕವೆನ್ನಿಸಿದರೆ, ಅನಂತರ ಬರುವ ಪ್ರಸಂಗಗಳು ದಾರುಣಮಯವಾಗಿ ಮನಸ್ಸನ್ನು ಕರಗಿಸುವುವು. ಚೌಂಡರಸನಿಗಾದರೋ ನಳನ ಕಲ್ಯಾಣವನ್ನು ವರ್ಣಿಸುವಷ್ಟು ಸಾವಧಾನ ಚಿತ್ತ ನಳನ ಕಷ್ಟಕೋಟಲೆಗಳನ್ನು ನಿರೂಪಿಸುವುದರಲ್ಲಿ ಕಂಡುಬರುವುದಿಲ್ಲ. ಈ ವಿಭಾಗದ ಕಥೆ ನಾಗಾಲೋಟದಿಂದ ಸಾಗುತ್ತದೆ. ನಳ-ದಮಯಂತಿಯರಿಗೆ ಇಬ್ಬರು ಮಕ್ಕಳು ಹುಟ್ಟಿ ಅವರು ಬೆಳೆಯುವಷ್ಟರಲ್ಲಿಯೇ ಕಲಿಪುರುಷನು ಅವರ ದಾಂಪತ್ಯದಲ್ಲಿ ಪ್ರವೇಶಿಸಿ ಕೋಲಾಹಲವನ್ನೆಬ್ಬಿಸುವನು. ಕಲಿಪುರುಷನಿಗಾದರೂ ಲವಲೇಶವೂ ಕರುಣೆಯೆಂಬುದಿಲ್ಲ. ದೇವಾನುದೇವತೆಗಳು ದಮಯಂತಿಯ ಕೈ ಹಿಡಿಯಲಾರದೆ ಮ್ಲಾನವದನರಾಗಿರುವುದನ್ನು ಕಂಡು, ನಿಜವೃತ್ತಾಂತವನ್ನು ಅರಿತು, ನಳನ ಮೇಲೆ ಕೋಪೋದ್ರೇಕವನ್ನು ತಾಳಿದನು. ನಳನು ಎಂದೋ ಒಂದು ದಿನ ಅಪ್ಪಿ ತಪ್ಪಿ ಒಮ್ಮೆ ತನ್ನ ಕಾಲಿನ ಹಿಮ್ಮಡಿಯನ್ನು ತೊಳೆಯಲಿಲ್ಲವೆಂಬ ಕ್ಷುದ್ರಕಾರಣದಿಂದ, ಆತನ ಮೇಲೆ ತನ್ನ ಬಲೆ ಬೀಸಿದನು. ನಳನ ಗ್ರಹಚಾರ ದಿನದಿನಕ್ಕೂ ವ್ಯಗ್ರವಾಯಿತು. ನಳನ ದಾಯಾದಿಯಾದ ಪುಷ್ಕರನೆಂಬವನ ಪಕ್ಷವನ್ನು ವಹಿಸಿದ ಕಲಿಪುರುಷನು, ಪಗಡೆಯಾಟದಲ್ಲಿ ನಳನು ರಾಜ್ಯಕೋಶಗಳನ್ನೆಲ್ಲ ಪುಷ್ಕರನಿಗೆ ಸೋತು ತನ್ನ ಪತ್ನೀ ಪುತ್ರರೊಂದಿಗೆ ಕಾಡುಪಾಲಾಗುವ ದುರ್ದೆಸೆ ಒದಗಿತು. ದಮಯಂತಿ ತನ್ನ ಮಕ್ಕಳನ್ನು ತವರುಮನೆಗೆ ಕಳುಹಿಸಿಕೊಟ್ಟು, ತಾನು ಗಂಡನೊಂದಿಗೆ ನೆರಳಿನಂತೆ ಹಿಂಬಾಲಿಸಿದಳು. ಕಾಡಿನಲ್ಲಿ ಈ ದಂಪತಿಗಳು ಪಟ್ಟಪಾಡು ಹೇಳತೀರದು. ನಳನು ಉಟ್ಟ ಬಟ್ಟೆಯನ್ನು ಹಕ್ಕಿಗಳು ಅಪಹರಿಸಿಕೊಂಡು ಹೋಗಲು, ಆತನು ಸತಿಯುಟ್ಟ ಬಟ್ಟೆಯಲ್ಲಿ ಅರ್ಧಪಾಲಿಗೆ ಅಂಗಲಾಚಬೇಕಾಯಿತು. ಹಾಳುಬಿದ್ದ ದೇವಾಲಯದಲ್ಲಿ ದಂಪತಿಗಳು ಮಲಗಿ ನಿದ್ರಿಸುತ್ತಿರಲು, ನಳನಿಗೆ ನಟ್ಟಿರುಳಿನಲ್ಲಿ ಎಚ್ಚರವಾಯಿತು. ಹೆಂಡತಿಯತ್ತ ದೃಷ್ಟಿಹಾಯಿಸಿದಾಗ ಆತನ ಮನಸ್ಸು ಕರಗುವುದರ ಬದಲಾಗಿ, ಕುರುಡಾಗಿ ಬರಡಾಯಿತೋ ಏನೋ ! ಕೂಡಲೆ, ಸದ್ದು ಮಾಡದೆ, ನಲ್ಲೆಯನ್ನು ಆ ನಟ್ಟಿರುಳಿನಲ್ಲಿಯೇ ತೊರೆದು, ಏಕಾಂಗಿಯಾಗಿ ಹೊರಟನು. ನಿದ್ರೆಯಿಂದ ಎಚ್ಚತ್ತ ದಮಯಂತಿಗೆ

ನಲ್ಲನಿಲ್ಲದಿರುವುದನ್ನು ಕಂಡು ಕಣ್ಣಿಗೆ ಕತ್ತಲೆ ಕವಿಯಿತು ; ಹೆಣ್ಣೆದೆ ಹೆದರಿ ಕುಸಿಯಿತು ; ಬಿಕ್ಕಿ ಬಿಕ್ಕಿ ಅತ್ತಳು. ನಿರಪರಾಧಿಯಾದ ತನ್ನನ್ನು ಗಂಡನು ಹಾಗೆ ಅಡವಿಪಾಲು ಮಾಡಿ ಹೋದನಲ್ಲ ಎಂದು ತನ್ನ ದುಃಸ್ಥಿತಿಗೆ ತಾನೇ ಹಳಿದುಕೊಂಡಳು. ಅಲ್ಲಿಗೇ ಆಕೆಯ ಕಷ್ಟ ಕೊನೆಗಾಣಲಿಲ್ಲ. ಕಾಮುಕನಾದ ಬೇಡನೊಬ್ಬನು ಆಕೆಯ ಕಡೆಗೆ ತನ್ನ ಕಾಮುಕದೃಷ್ಟಿಯನ್ನು ಬೀರಲು, ಆಕೆಗೆ ದೇವತೆಗಳಿತ್ತ ವರಪ್ರಸಾದದಿಂದ ಅವನು ಸುಟ್ಟು ಬೂದಿಯಾದನು. ಆ ಬಳಿಕ ಆಕೆ ವರ್ತಕರ ವೃಂದವೊಂದನ್ನು ಆಶ್ರಯಿಸಲು, ಅವರು ಆಕೆಯ ಆಗಮನದಿಂದ ಅಪಶಕುನವಾಯಿತೆಂದು ಎಣಿಸಿ ತಿರಸ್ಕರಿಸಿದರು. ಅಲ್ಲಿಂದ ಮುಂದೆ ಹಾದಿ ಸಾಗಿ, ಬ್ರಾಹ್ಮಣರ ನೆರವಿನಿಂದ ಅನಂತನಿಧಿಪಟ್ಟಣವನ್ನು ಸೇರಿದಳು. ಆ ಊರಿನ ರಾಜನಾದ ಅನಂತಶೇಖರ ಮತ್ತು ರಾಣಿಯಾದ ಗುಣನಿಧಿ ಎಂಬವರು ಆಕೆಗೆ ಆಶ್ರಯವಿತ್ತರು. ರಾಣಿಯ ಅಂತಃಪುರದಲ್ಲಿ ಸೈರಂಧ್ರಿಯೆಂಬ ಹೆಸರಿನಿಂದ ತನ್ನ ದಿನಗಳನ್ನು ಕಳೆಯುತ್ತಿರಬೇಕಾದರೆ, ಆಗ ರಾಣಿಗೆ ಆಕೆ ತನ್ನ ಅಕ್ಕನ ಮಗಳೆಂದೂ, ರಾಜ್ಯಕೋಶಗಳನ್ನು ಜೂಜಿನಲ್ಲಿ ಸೋತು ದೇಶಭ್ರಷ್ಟನಾದ ನಳನ ಹೆಂಡತಿಯೆಂದೂ ತಿಳಿದುಬಂದಿತು. ಈ ವೃತ್ತಾಂತವನ್ನು ಬ್ರಾಹ್ಮಣರ ಮೂಲಕ ಅರಿತ ಭೀಮರಾಜನು ಮಗಳನ್ನು ತನ್ನ ಮನೆಗೆ ಕರೆಸಿಕೊಂಡನು. ದಿಕ್ಕುಗಾಣದೆ ಕಂಗೆಟ್ಟಿದ್ದ ದಮಯಂತಿಗೆ ತನ್ನ ತವರುಮನೆಯ ನೆಲೆ ದೊರೆಯಿತು.

ಇತ್ತ, ನಳನು ಅನುಭವಿಸಿದ ಕೋಟಲೆಗಳಾದರೂ ಕರುಣಾಜನಕವಾದುವು; ಕಾಳ್ಗಿಚ್ಚೊಂದು ಮೇಲೆದ್ದು ಆತನ ದಾರಿಗೆ ಅಡ್ಡಲಾಯಿತು. ಆ ದಳ್ಳುರಿಯಲ್ಲಿ ಸಿಕ್ಕಿಬಿದ್ದು ಸುಟ್ಟುಹೋಗುತ್ತಿದ್ದ ಕರ್ಕೋಟಕನೆಂಬ ಹಾವಿನ ಆರ್ತನಾದವನ್ನು ಕೇಳಿ, ನಳನು ಅದನ್ನು ತನ್ನ ಕೈಯಾರ ಹೊರಕ್ಕೆ ತೆಗೆಯಲು, ಅದು ಆತನನ್ನು ಕಚ್ಚಿತು. ಆ ವಿಷದ ಫಲವಾಗಿ ಆತನ ಶರೀರವೇ ವಿಕಾರವಾಯಿತು. ಇದರಿಂದ ವ್ಯಾಕುಲಗೊಂಡಿದ್ದ ನಳನನ್ನು ಆ ಫಣಿರಾಜನು ಸಂತೈಸಿ, ಎರಡು ನಾಗವಸ್ತ್ರಗಳನ್ನು ಕೊಟ್ಟು, ಆತನಿಗೆ ಕಲಿಪುರುಷನ ಕಾಟ ಕೊನೆಗಾಣುವಂದು ಅವುಗಳನ್ನು ಹೊದ್ದರೆ ಆತನ ನೈಜಸ್ವರೂಪ ಪ್ರಾಪ್ತವಾಗುವುದೆಂದು ಭರವಸೆಯಿತ್ತು ತೆರಳಿದನು. ಅಲ್ಲಿಂದ ಮುಂದುವರಿಯಲು, ನಳನು ಆಯೋಧ್ಯಾಪುರಕ್ಕೆ ಬಂದನು. ಆ ಊರಿನ ಸೌಂದರ್ಯವನ್ನು ಕಂಡು ಆನಂದಪಡುತ್ತ, ಬಾಹುಕನೆಂಬ ಹೊಸ ಹೆಸರಿನಿಂದ ಅಲ್ಲಿಯ ರಾಜನಾದ ಋತುಪರ್ಣನ ಅಶ್ವಾಲಯದಲ್ಲಿ ಊಳಿಗಕ್ಕೆ ಸೇರಿಕೊಂಡನು. ಸ್ವಲ್ಪ ದಿನಗಳಾದ ಅನಂತರ ಅಲ್ಲಿಗೆ ಬಂದ ದೂತನೊಬ್ಬನನ್ನು ಕಂಡು ಅವನ ಆಗಮನದ ಉದ್ದೇಶವೇನೆಂದು ಪ್ರಶ್ನಿಸಲು, ಅವನು ತಾನು, ತನ್ನ ಪತಿಯಿಂದ ಪರಿತ್ಯಕ್ತಳಾದ ನಳಮಹಾರಾಜನ ಹೆಂಡತಿಯ ಕಡೆಯವನೆಂದೂ, ಆಕೆಯು ಗಂಡನನ್ನು ಹುಡುಕಿಕೊಂಡು ಹೊರಟಿರುವೆನೆಂದೂ ತಿಳಿಸಿದನು. ಆಗ ನಳನು ಅನ್ಯಮನಸ್ಕನಾಗಿ "ಸ್ತ್ರೀ ಆದವಳು ಹಾಗೆ ಸ್ವಾತಂತ್ರ್ಯವಹಿಸಿ ವರ್ತಿಸಬಹುದೆ ?" ಎಂದು ಆಕ್ಷೇಪಿಸಿದನು. ಆ ದೂತನಿಗೆ ಆ ಮಾತಿನಲ್ಲಿ ಏಕೋ

ಸಂದೇಹವುಂಟಾಗಲು, ಕೂಡಲೆ ಕುಂಡಿನಪುರಕ್ಕೆ ಹಿಂತಿರುಗಿ ಆ ಸುದ್ದಿಯನ್ನು ತಿಳಿಸಿದನು. ಸೂಕ್ಷ್ಮಮತಿಯಾದ ದಮಯಂತಿ ಪುನಃ ಸ್ವಲ್ಪ ದಿನಗಳು ಕಳೆದ ಬಳಿಕ, ಒಬ್ಬ ಬ್ರಾಹ್ಮಣನನ್ನು ಋತುಪರ್ಣನ ರಾಜಧಾನಿಗೆ ಕಳುಹಿಸಿಕೊಟ್ಟು, ದಮಯಂತಿಗೆ ಮರಳಿ ಸ್ವಯಂವರವೆಂದು ಡಂಗುರ ಸಾರಿಸಿದಳು. ಆ ವಾರ್ತೆಯನ್ನು ಕೇಳಿದ ರಾಜನು, ಬಾಹುಕನೊಂದಿಗೆ ಕುಂಡಿನಪುರಕ್ಕೆ ಬಂದು ಬೀಡುಬಿಟ್ಟನು. ಬಾಹುಕನ ಸಾರಥ್ಯ ಸಾಮರ್ಥ್ಯವನ್ನು ಕಂಡ ಋತುಪರ್ಣನು ಅವನಿಗೆ ಅಕ್ಷವಿದ್ಯೆಯ ರಹಸ್ಯವನ್ನು ತಿಳಿಸಿ, ಅವನಿಂದ ತಾನು ಅಶ್ವಹೃದಯದ ಗುಟ್ಟನ್ನು ತಿಳಿದುಕೊಂಡನು. ಋತುಪರ್ಣನೊಂದಿಗೆ ಬಂದಿದ್ದ ವಿಕಾರಸ್ವರೂಪವುಳ್ಳ ಬಾಹುಕನನ್ನು ಗುರುತಿಸಲಾರದ ದಮಯಂತಿ ಒಂದು ಉಪಾಯವನ್ನು ಹೂಡಿದಳು. ಆ ಅತಿಥಿಗಳಿಗೆ ಅಡುಗೆ ಮಾಡಿಕೊಳ್ಳಲೆಂದು ತನ್ನ ಸಖಿಯರಿಂದ ಬೆಂಕಿ, ನೀರುಗಳನ್ನು ಬಿಟ್ಟು, ಇತರ ಎಲ್ಲ ಪದಾರ್ಥಗಳನ್ನೂ ಕೊಡಿಸಿಕೊಟ್ಟಳು. ಪಾಕವಿದ್ಯೆಯಲ್ಲಿ ಪ್ರವೀಣನಾಗಿದ್ದ ನಳನು ತನ್ನ ಸ್ವಂತ ಶಕ್ತಿಯಿಂದ, ಬೆಂಕಿ, ನೀರುಗಳ ನೆರವಿಲ್ಲದೆ ಅಡುಗೆಯನ್ನು ಸಿದ್ಧಪಡಿಸಿದನು. ಬಾಹುಕನ ಆ ಹಸ್ತ ಕೌಶಲವನ್ನು ಮೆಚ್ಚಿಕೊಂಡ ದಮಯಂತಿ ಸಖಿಯರ ಮೂಲಕ ಆ ಅಡುಗೆಯಲ್ಲಿ ಸ್ವಲ್ಪ ಭಾಗವನ್ನು ತರಿಸಿಕೊಂಡು ರುಚಿ ನೋಡಿ, ಅದನ್ನು ತಯಾರು ಮಾಡಿದಾತನು ನಳನಲ್ಲದೆ ಬೇರಾರೂ ಅಲ್ಲವೆಂದು ಗ್ರಹಿಸಿದಳು. ಅನಂತರ, ದಾದಿಯರ ಜೊತೆಯಲ್ಲಿ ತನ್ನ ಮಕ್ಕಳನ್ನು ಬಾಹುಕನಿದ್ದಲ್ಲಿಗೆ ಕಳುಹಿಸಿಕೊಟ್ಟಳು. ಆ ಮಕ್ಕಳ ಸ್ಫುರದ್ರೂಪವನ್ನು ಕಂಡು ನಳನ ಹೃದಯ ಕರಗಿತು. ಮನಸ್ಸಿನಲ್ಲಿಯೇ ತನ್ನನ್ನು ತಾನೇ ಹಳಿದುಕೊಂಡು "ಇಂಥ ಮಕ್ಕಳನ್ನು ಬಿಟ್ಟು ಕಲ್ಲೆದೆಯುಳ್ಳವರು ಹೇಗೆ ಇರುವರೋ" ಎಂದು ನಿಟ್ಟುಸಿರು ಬಿಟ್ಟನು. ದಾದಿಯು ಈ ವಿಷಯವನ್ನು ದಮಯಂತಿಯಲ್ಲಿಗೆ ಬಂದು ತಿಳಿಸಿದಳು. ಆಗ ಆಕೆಗೆ ಬಾಹುಕನು ಯಾರೆಂಬುದು ದೃಢವಾಯಿತು. ಆತನನ್ನು ತನ್ನಲ್ಲಿಗೆ ಬರಮಾಡಿಕೊಂಡು ಆತನ ಆ ದುಃಸ್ಥಿತಿಗಾಗಿ ಕಣ್ಣೀರಿನ ಕೋಡಿ ಹರಿಸಿದಳು. ನಳನು ಆ ಕೂಡಲೆ ಫಣಿರಾಜನಿತ್ತ ನಾಗವಸ್ತ್ರಗಳನ್ನು ಹೊದೆಯಲು ಆತನ ಸ್ಫುರದ್ರೂಪ ಮತ್ತೆ ಪ್ರಾಪ್ತವಾಯಿತು. ಅವರ ಜೀವನದಲ್ಲಿ ಆವರೆಗೆ ಕವಿದಿದ್ದ ಕಗ್ಗತ್ತಲೆಯೆಲ್ಲ ಸರಿಯಿತು. ಭೀಮರಾಜನು ಅಳಿಯನನ್ನು ಮತ್ತೆ ಬರಮಾಡಿಕೊಂಡನು. ಋತುಪರ್ಣನಿಗೆ ಅಲ್ಲಿ ನಡೆದ ಘಟನೆಗಳೆಲ್ಲ ಗೊತ್ತಾಗಲು, ಆತನು ದಮಯಂತಿಯ ಬುದ್ಧಿ ಕೌಶಲಕ್ಕೆ ಬೆರಗಾಗಿ, ಮನವಾರೆ ಮೆಚ್ಚಿಕೊಂಡನು. ಮುಂದೆ ನಳನು ಪುಷ್ಕರನನ್ನು ದ್ಯೂತದಲ್ಲಿ ಗೆದ್ದು ತನ್ನ ರಾಜ್ಯಕೋಶಗಳನ್ನೆಲ್ಲ ಪುನಃ ಗಳಿಸಿದನು.

'ನಳಚಂಪು'ವಿನಲ್ಲಿರುವ ಒಟ್ಟು ೭೭೬ ಪದ್ಯಗಳಲ್ಲಿ ಪೂರ್ವಾರ್ಧದ ಕಥಾಭಾಗಕ್ಕೆ ಕವಿ ೬೮೮ಪದ್ಯಗಳನ್ನು ಮೀಸಲಾಗಿಟ್ಟಿದ್ದರೆ, ಕಡೆಯ ೨೮೮ ಪದ್ಯಗಳನ್ನು ಮಾತ್ರ ಉತ್ತರಾರ್ಧದ ಕಥಾಭಾಗಕ್ಕೆ ಮುಡುಪಾಗಿ ಇಟ್ಟಿದ್ದಾನೆ. ಈತನಿಗೆ ನಳನ ಗುಣಗಾನ, ಮದುವೆಗೆ ಪೂರ್ವದಲ್ಲಿ ಈ ನಳ ದಮಯಂತಿಯರಲ್ಲಿ ಕಂಡುಬರುವ ವಿರಹತಾಪ, ಆ

ಬಳಿಕ ಆ ಪ್ರಣಯಿಗಳ ವಿವಾಹವೈಭವಗಳ ಕಡೆ ಇರುವಷ್ಟು ಗಮನ, ಅವರು ಕಲಿಪುರುಷನ ಕೈಗೆ ಸಿಕ್ಕಿ ಪಡುವ ಯಾತನೆಯ ಕಡೆ ಹರಿಯದಿರುವುದು ಸೋಜಿಗವೇ ಸರಿ. ನಲೋಪಾಖ್ಯಾನದಲ್ಲಿ ಹೃದಯವನ್ನು ಕರಗಿಸುವ ಈ ಸನ್ನಿವೇಶಗಳೇ ತುಂಬ ಜನಾದರಣೀಯವೂ, ಸ್ವಾರಸ್ಯಪ್ರದವೂ ಆಗಿರುವುವು. ಚೌಂಡರಸನು ತನ್ನ ಕೃತಿಗಳನ್ನು ಹೆಸರಿಸುವಲ್ಲಿ 'ಕಲ್ಯಾಣನಳಖ್ಯಾತಿ' ಎಂದು ಹೇಳಿರುವುದನ್ನು ಗಮನಿಸಿದರೆ, ಆತನು ತನ್ನ ಕಾವ್ಯದಲ್ಲಿ ಈ ಕಥಾಭಾಗಕ್ಕೇ ಪ್ರಾಶಸ್ತ್ಯವನ್ನು ಕೊಡಬೇಕೆಂಬ ಉದ್ದೇಶವನ್ನೇ ಇಟ್ಟುಕೊಂಡಿದ್ದನೋ ಏನೋ! ಅದೇ ರೀತಿ ಕಥೆ ಅಲ್ಲಿಗೇ ಮುಗಿದಿದ್ದರೆ, ಪ್ರಕೃತ ಪ್ರಕಟವಾಗುವ ಔಚಿತ್ಯಭಂಗದ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ.

ಚೌಂಡರಸನ ಕೃತಿ ಕನ್ನಡದಲ್ಲಿ ನಳಮಹಾರಾಜನನ್ನು ಕುರಿತು ಬರೆದವುಗಳಲ್ಲಿ ಮೊದಲನೆಯದಾದರೂ, ಕಥಾವಸ್ತುವಿನಲ್ಲಿ ಹೃದಯಸ್ಪರ್ಶಿಯಾದ ಭಾಗವು ಸಾಕಷ್ಟು ಸ್ವಾರಸ್ಯವಾಗಿ ನಿರೂಪಿಸದೆಹೋಗಿರುವುದರಿಂದಲೂ, ಅದರೊಂದಿಗೆ ಪ್ರೌಢವಾದ ಸರಣಿಯನ್ನು ಅನುಸರಿಸಿರುವುದರಿಂದಲೂ ಜನಪ್ರಿಯವಾಗದೆ ಹೋಯಿತು ಎನ್ನಬಹುದು. ಈ ಎಲ್ಲ ಕೊರತೆಗಳನ್ನೂ ನಿವಾರಿಸಿಕೊಂಡು, ಅತ್ಯಂತ ಜನಪ್ರಿಯವಾದ ಭಾಮಿನೀಷಟ್ಪದಿಯಲ್ಲಿ ರಚಿತವಾದ ಕನಕದಾಸರ ನಳಚರಿತೆಯನ್ನು ತಿಳಿಯದ ಕನ್ನಡಿಗನೇ ಇಲ್ಲವೆನ್ನಬಹುದು. ಕನಕದಾಸರ ಕಥಾನಿರೂಪಣೆ, ಸರಳ ಶೈಲಿ, ಸ್ವಾರಸ್ಯವಾದ ಪ್ರಸಂಗಗಳು ಒಂದಕ್ಕೊಂದು ಹೊಂದಿಕೊಂಡು ಆ ಕಾವ್ಯ ಅಪಾರವಾದ ಅಭಿಮಾನವನ್ನು ಗಳಿಸಿದೆ.

ಆದರೆ ಚೌಂಡರಸನ ಅಭಿನವ ದಶಕುಮಾರ ಚರಿತೆಯನ್ನು ಓದಿದವರಿಗೆ ಆತನ ಸಾಹಿತ್ಯಸಾಧನೆಯೇನೆಂಬುದು ವಿದಿತವಾಗುತ್ತದೆ. ಪ್ರಕೃತ "ನಳಚಂಪು" ವಿನಲ್ಲಿಯು ಚಂಪೂ ಕಾವ್ಯಕ್ಕೆ ತಕ್ಕ ಆವನ ಶೈಲಿಯ ಹದವನ್ನು ಮನಗಂಡಾಗ ಆನಂದವಾಗದೆ ಇರದು. "ವಿರಹವಿಸ್ಮೃತಿ ಕೇವಳಮೇ ಧರಿತ್ರಿಯೊಳ್" (ಪದ್ಯ ೬೩), "ಸಂತತಂ ಗಾಡಿಯೊಳಿರ್ಪ ಕೋಮಳೆಯ ರೂಪು ಮನೋಜನ ಮೈಮೆಯಲ್ಲವೇ" (ಪದ್ಯ ೧೩೨), "ವಿರಹಮೇಂ ಕೇವಳಮೇ ?" (ಪದ್ಯ ೧೮೬), "ಕಲಿಯ ಮಹಿಮೆಯೇಂ ಕೇವಳಮೇ?" (ಪದ್ಯ ೫೦೮), "ಸರ್ವಜ್ಞನಾದೊಡಂ ಮತಿ ಖರ್ವತೆಯಂ ಪಡೆವನುಚಿದರೇಂ ದೊರೆ ಧರೆಯೊಳ್" (ಪದ್ಯ ೫೩೧), "ಪ್ರಾರಬ್ಧದ ಬಲೆಯನಟುವ ಶೂರರುಮೊಳರೇ" (ಪದ್ಯ ೫೬೭), "ಸುತರನಗಲ್ದೆತು ನಿಲ್ವರೋ ಕಲ್ಲೆರ್ದೆಗಳ್ !" (ಪದ್ಯ ೭೧೭) ಎಂಬಿವೇ ಮೊದಲಾದ ಸ್ವಾರಸ್ಯವಾದ ಸಾಮಾನ್ಯೋಕ್ತಿಗಳು ಕೃತಿಯಲ್ಲಿ ಅಲ್ಲಲ್ಲಿಯೇ ಮಿನುಗುತ್ತವೆ. ಚೌಂಡರಸನು ಮಹಾಭಾರತದ ನಲೋಪಾಖ್ಯಾನದ ಹಂದರವನ್ನೇ ಆದರ್ಶವಾಗಿ ಇಟ್ಟುಕೊಂಡರೂ, ಅವನಿಗೆ ಶ್ರೀಹರ್ಷನ ನೈಷಧೀಯ ಚರಿತೆಯ ಭಂಗಿ ಭಣಿತಗಳೇ ಆದರ್ಶವಾದುವು ಎನ್ನಿಸುತ್ತದೆ. ಆದರೂ, ಈತನ ಕೃತಿ ಹರ್ಷನ ರಚನೆಯಂತೆ ಅತಿಯಾದ ಅಲಂಕಾರಗಳು, ಚಮತ್ಕಾರಯುತವಾದ ಶೈಲಿಯ ಬಲೆಗಳಿಗೆ ಸಿಕ್ಕಿಬೀಳದೆ, ಕನ್ನಡ ಚಂಪೂಕಾವ್ಯದಲ್ಲಿ

ಮಧ್ಯಮ ಮಾರ್ಗವನ್ನೇ ಅನುಸರಿಸಿರುವುದು ಪ್ರಶಂಸನೀಯವಾದುದು. ಸಂಸ್ಕೃತ ವಿದ್ವಾಂಸರಾದ ಶ್ರೀ. ಬಿ. ಹೆಚ್. ಶ್ರೀಧರ ಅವರು "ಸಂಸ್ಕೃತ ನೈಷಧಕ್ಕೆ ನೈಷಧಂ ವಿದ್ವದೌಷಧಂ ಎಂಬ ಕೀರ್ತಿ ಇದ್ದರೆ, ಕನ್ನಡ ನಳಚಂಪು ಅದನ್ನು ಭಾಷಾಪಾಂಡಿತ್ಯ ಕ್ಷೇತ್ರದಲ್ಲಿ ಗಳಿಸದೆ ಹೋಗದಿರುವುದು ಕನ್ನಡಿಗರ ಸುದೈವವೆನ್ನಬೇಕು"[9] ಎಂದು ಅಭಿಪ್ರಾಯ ವ್ಯಕ್ತಪಡಿಸಿರುವುದು ಸೂಕ್ತವೆನ್ನಬಹುದು. "ನಳಚಂಪು ಸಂಗ್ರಹ"ದ ಸಂಪಾದಕರು "ಚೌಂಡರಸನ ಶೈಲಿ ಆದರ್ಶಶೈಲಿಯಲ್ಲದಿದ್ದರೂ, ನಿಕೃಷ್ಟಶೈಲಿಯೇನೂ ಅಲ್ಲ. ಅವನ ಕಾವ್ಯಗುಣ ಆರಕ್ಕೇರದಿದ್ದರೂ ಮೂರಕ್ಕೇನೂ ಇಳಿದಿಲ್ಲ. ನಳ ದಮಯಂತಿಯ ವಿಖ್ಯಾತ ಕಥೆಯನ್ನು ಕನ್ನಡದಲ್ಲಿ ಬರೆಯಬೇಕೆಂಬ ಹಂಬಲದಿಂದ ಅವನು ಪಟ್ಟ ಶ್ರಮ ಬಹುಮಟ್ಟಿಗೆ ಸಾರ್ಥಕವಾಗಿದೆ ಎನ್ನಬೇಕು"[10] ಎಂದು ಹೇಳಿರುವುದೂ ಒಪ್ಪತಕ್ಕದಾಗಿದೆ. 'ನಳಚಂಪು' ವಿನಲ್ಲಿ ಚೌಂಡರಸನ ಭಾಷಾಸಂಪತ್ತು ಶ್ರೀಮಂತವೂ ಶಿಷ್ಟವೂ ಆದುದು.[11]— ಎಂಬ ಮತ್ತೊಬ್ಬ ವಿಮರ್ಶಕರ ಉಕ್ತಿಯೂ ಈ ಮೇಲಿನ ಅಭಿಪ್ರಾಯಗಳನ್ನೇ ಸಮರ್ಥಿಸುವಂತಿದೆ.

---

[9] ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ. ಸಂ. iii, ಪು. ೬೩೪ : ಬೆಂಗಳೂರು ವಿಶ್ವ ವಿದ್ಯಾಲಯ, ೧೯೭೬.

[10] ನಳಚಂಪು ಸಂಗ್ರಹ : ಶ್ರೀ. ಜಿ. ವೆಂಕಟಸುಬ್ಬಯ್ಯ ಮತ್ತು ಶ್ರೀ. ಮ. ಸು. ಕೃಷ್ಣ ಮೂರ್ತಿ, ೧೯೬೬, ಪೀಠಿಕೆ, ಪು. cxii.

[11] ಕನ್ನಡ ಸಾಹಿತ್ಯಚರಿತ್ರೆ; ಸಂಪುಟ iv, ಭಾಗ ೧; ಪು. ೧೭೨೬; ಶ್ರೀ ಜಿ. ಜಿ. ಮಂಜುನಾಥನ್, ಮೈಸೂರು ವಿಶ್ವ ವಿದ್ಯಾನಿಲಯ, ೧೯೭೭,

ಚೌಂಡರಸ ವಿರಚಿತ

# ನಳಚಂಪು

ಶ್ರೀಸತಿ ತನ್ನ ಪೇರುರವನಾವಗಮಪ್ಪಿರಲೀಛ್ರಿಯಂ ಧರಿ
ತ್ರೀಸತಿ ಸಾರ್ದಿರಲ್ ಕದನಮೋಹನಕೇಳಿಯನೊಲ್ದು ಸತ್ಯಭಾ
ಮಾಸತಿ ಪೆರ್ಚಿಸಲ್ ಸೊಬಗುವೆತ್ತು ಜಗತ್ಪತಿ ತನ್ನ ಮಾನಸೋ
ಲ್ಲಾಸದಿನೆಲ್ಲರಂ ಪೊರೆಗೆ ಮಂಗಳಮೂರ್ತಿಯಭಂಗ ವಿಟ್ಠಲಂ ೧

ಪ್ರಣುತ ಸುರಾಸುರಪ್ರಿಯವರಪ್ರದನೂರ್ಜಿತಶೇಷರತ್ನಕಂ
ಕಣನವನೀಜಲಾಗ್ನಿ ಮರುದಂಬರ ಸೋಮ ದಿವಾಕರಾತ್ಮಲ
ಕ್ಷಣ ನಿಜಮೂರ್ತಿಯದ್ರಿತನಯಾನನಪದ್ಮ ಮದಾಳಿ ದೇವರ
ಗ್ರಣಿ ಶಿವನೆಮ್ಮೊಳೀಗೆ ಸುಕವಿಸ್ತುತ ಕಾವ್ಯಮತಿಪ್ರಕಾಶಮಂ ೨

ಪರಶುಸೃಣಿ ಪ್ರದೀಪ್ತರದ ಮೋದಕರಾಜಿತ ಹಸ್ತನದ್ರಿಜಾ
ವರ ನಿಜಪುತ್ರನಿಂದ್ರ ಶಿಖಿ ಕಾಲ ಸುರಾರಿ ಜಲೇಶ ವಾಯು ಶಂ
ಕರಸಖಿ ರುದ್ರವಂದ್ಯನಹಿಭೂಷಣನುನ್ನತಮೂರ್ತಿ ಮತ್ತಕುಂ
ಜರವದನಂ ಗಣೇಶನೆಮಗೀಗೆ ಮನೋರಥ ಕಾರ್ಯಸಿದ್ಧಿಯಂ ೩

೧. ಶ್ರೀಲಕ್ಷ್ಮೀದೇವಿಯು ತನ್ನ ವಿಶಾಲವಾದ ಎದೆಯನ್ನು ಯಾವಾಗಲೂ ಅಪ್ಪಿಕೊಂಡಿರಲು, ಭೂದೇವಿಯು ಪಾದವನ್ನು ಸಮೀಪಿಸಲು, ಸತ್ಯಭಾಮಾದೇವಿಯು ಪ್ರೇಮ ಕಲಹಕ್ರೀಡೆಯನ್ನು ಮೆಚ್ಚಿ ಉಬ್ಬಿಸಲು, ಲೋಕಕ್ಕೆ ಒಡೆಯನೂ, ಮಂಗಳಮೂರ್ತಿಯೂ ಆದ ಅಭಂಗವಿಟ್ಠಲನು ಚೆಲುವಿನಿಂದ ಕೂಡಿ, ತನ್ನ ಮನಃಸಂತೋಷದಿಂದ ಎಲ್ಲರನ್ನೂ ಕಾಪಾಡಲಿ. ೨. ಕೊಂಡಾಡುವ ದೇವತೆಗಳು ಮತ್ತು ರಾಕ್ಷಸರಿಗೆ ಪ್ರಿಯವಾದುದನ್ನು ನೀಡುವವನೂ, ಅಭಿವೃದ್ಧಿಕಾರಕನಾದ ಆದಿಶೇಷನ ಹೆಡೆಯ ರತ್ನವನ್ನೇ ಕಂಕಣವಾಗಿ ಉಳ್ಳವನೂ, ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಚಂದ್ರ, ಸೂರ್ಯ ಮತ್ತು ಆತ್ಮ ಲಕ್ಷಣ (ಯಜಮಾನ ?) ಗಳಿಂದ ಕೂಡಿ ಅಷ್ಟಮೂರ್ತಿಸ್ವರೂಪನೂ, ಗಿರಿಜೆಯ ಮುಖ ಕಮಲಕ್ಕೆ ದುಂಬಿಯಂತಿರುವವನೂ, ದೇವಶ್ರೇಷ್ಠನೂ ಆದ ಈಶ್ವರನು ಸತ್ಕವಿಗಳ ಸ್ತುತಿಗೆ ಪಾತ್ರವಾದ ಕಾವ್ಯಪ್ರತಿಭೆಯ ಪ್ರಕಾಶವನ್ನು ನಮಗೆ ದಯಪಾಲಿಸಲಿ. ೩. ಕೊಡಲಿ (ಪಾಶ ?), ಅಂಕುಶ, ಬಿಳುಪಾದ ಹಲ್ಲು, ಕಡುಬುಗಳಿಂದ ಪ್ರಕಾಶಮಾನವಾದ ಕೈಯುಳ್ಳವನೂ, ಗಿರಿಜೆಯ ಆತ್ಮೀಯ ಕುಮಾರನೂ, ಇಂದ್ರ, ಅಗ್ನಿ, ಯಮ, ನೈರೃತ್ಯ, ವರುಣ, ವಾಯು, ಕುಬೇರ, ರುದ್ರಾದಿಗಳಿಂದ ವಂದಿತನೂ, ಸರ್ಪಭೂಷಣನೂ, ಶ್ರೇಷ್ಠಸ್ವರೂಪನೂ, ಮದಿಸಿದ ಆನೆಯ ಮುಖವುಳ್ಳವನೂ ಆದ ಗಣಪತಿಯು ನಮಗೆ

ಘೋರವಿಶಾಲವಕ್ತ್ರೆ ಶಿಖಿನೇತ್ರೆ ಚತುರ್ಭುಜೆ ಚಂದ್ರಮೌಳಿ ದೈ
ತ್ಯಾರಿ ಭುಜಂಗಭೂಷಣೆ ಸುರಾಸುರಪೂಜ್ಯೆ ಮಹಾಭಯಂಕರಾ
ಕಾರೆ ಸಮಸ್ತ ಶಸ್ತ್ರಪರಿಶೋಭಿತೆ ಭಕ್ತಜನಪ್ರಸನ್ನೆ ವಿ
ಸ್ತಾರ ವಿಚಿತ್ರಮೂರ್ತಿ ಬನದಂಬಿಕೆ ಮಾಳ್ಕೆಮಗಿಷ್ಟಸಿದ್ಧಿಯಂ ೪

ಅಕ್ಷರಮಾತ್ರಮಂ ಬಯಸಿ ಕಲ್ತವರೊಳ್ ಗುಣಮೇ ಪ್ರಭಾವಮಂ
ಪಕ್ಷ ವಿಪಕ್ಷಮೆಂದು ಪರಿಭಾವಿಸದೇತೆಱದಿಂ ಪರೋಪಕಾ
ರಕ್ಷಮರಾಗಿ ಪುಟ್ಟಿದವರುಳ್ಳೊಡೆ ಕೈಮುಗಿದೆರ್ದು ಗಂಧಪು
ಷ್ಪಾಕ್ಷತೆಯಿಂದಲಂಕರಿಸಿ ವಂದಿಸಿ ಬಣ್ಣಿಸುವೆಂ ನಿರಂತರಂ ೫

ಸಂದಿಯರೊಂದಿ ಬಗ್ಗರ ಸಮಕ್ಷದೊಳಿದ್ದುರಿದೆದ್ದು ದುರ್ಜನಂ
ನಿಂದಿಸುತಿರ್ಪನುತ್ತಮರ ಕಾವ್ಯಮನಂತುಟು ದಲ್ ನಿರಂತರಂ
ಹಂದಿಗೆ ಮಿಂದ ನೀರ ಕೆಸಱೊಗ್ಗುವುದಲ್ಲದೆ ತಣ್ಪನೀವ ಸ
ಚ್ಚಂದನದಣ್ಪದೊಗ್ಗುವುದೆ ನೈಜಗುಣಕ್ಕೆ ನವೀನಮಾವುದೋ ೬

ತಮತಮಗೆಲ್ಲರುಂ ಮತಿಗೆ ತೋಱಿದುದಂ ಸಲೆ ಪೇಳ್ವರುತ್ತಮ
ಕ್ರಮವೆನಲಕ್ಷರಂ ಧರೆಯೊಳೊಬ್ಬರ ಭಾಗೆಗೆ ಬಂದುದಲ್ತು ಲೋ

ಇಷ್ಟಾರ್ಥಕಾರ್ಯವು ಫಲಿಸುವಂತೆ ಮಾಡಲಿ. ೪. ಭಯಂಕರವೂ ವಿಸ್ತಾರವೂ ಆದ ಮುಖವುಳ್ಳವಳೂ, ಅಗ್ನಿಯೇ ಕಣ್ಣುಳ್ಳವಳೂ, ನಾಲ್ಕು ಭುಜಗಳುಳ್ಳವಳೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವಳೂ, ರಾಕ್ಷಸಶತ್ರುವೂ, ಹಾವನ್ನು ಆಭರಣವನ್ನಾಗಿ ಉಳ್ಳವಳೂ, ದೇವತೆಗಳು ಮತ್ತು ರಾಕ್ಷಸರಿಂದ ಪೂಜಿತಳೂ, ಬಹಳ ಭಯಂಕರಾಕೃತಿಯುಳ್ಳವಳೂ, ಸಕಲ ಆಯುಧಗಳಿಂದ ಸಂಶೋಭಿತಳೂ, ಭಕ್ತರಿಗೆ ಒಲಿದವಳೂ, ವಿಶಾಲ ಹಾಗೂ ವಿಶಿಷ್ಟವಾದ ಮೂರ್ತಿಸ್ವರೂಪಳೂ ಆದ ಬನದಂಬಿಕೆಯು (ಬನಶಂಕರಿಯು) ನಮಗೆ ಇಷ್ಟಾರ್ಥವನ್ನು ಉಂಟುಮಾಡಲಿ. ೫. ಕೇವಲ ಅಕ್ಷರಜ್ಞಾನಿಗಳಾದ ವಿದ್ಯಾವಂತರಲ್ಲಿ ಮಾತ್ರ ಗುಣವಿರುವುದೆ ? ಸ್ವಪಕ್ಷ ಪರಪಕ್ಷಗಳೆಂಬ ಪ್ರಭಾವವನ್ನು ಲಕ್ಷಿಸದೆ ಯಾವ ರೀತಿಯಿಂದಲಾದರೂ ಪರೋಪಕಾರದಕ್ಷರಾಗಿ ಹುಟ್ಟಿದವರಿದ್ದಲ್ಲಿ (ಅವರಿಗೆ) ಎದ್ದು ಕೈಮುಗಿದು, ಗಂಧ ಹೂವು ಅಕ್ಷತೆಗಳಿಂದ ಅಲಂಕಾರ ಮಾಡಿ ಬಾಗಿ ಸರ್ವದಾ ವರ್ಣಿಸುವೆನು. ೬. ಸಂದೇಹಗ್ರಸ್ತರಾದ ಭಂಗಿತರ ಸಹವಾಸದಲ್ಲಿದ್ದಂಥ ಕೆಟ್ಟವನು ಕಿಡಿಕಿಡಿಯಾಗಿ ಉತ್ತಮರ ಕಾವ್ಯವನ್ನು ಸರ್ವದಾ ಅವಹೇಳನ ಮಾಡುತ್ತಿರುವನಷ್ಟೆ ! ಹಂದಿಗೆ ಇತರರು ಸ್ನಾನ ಮಾಡಿದ ಕೆಸರು ಒಗ್ಗುವುದಲ್ಲದೆ, ತಂಪೆರೆಯುವ ಒಳ್ಳೆಯ ಶ್ರೀಗಂಧದ ಲೇಪನವು ಹಿತವೆನ್ನಿಸುತ್ತದೆಯೆ ? ಸಹಜವಾದ ಸ್ವಭಾವಕ್ಕೆ ಬೇರೆ ಯಾವುದು ತಾನೆ ಹಿಡಿಸುತ್ತದೆ ? ೭. ಎಲ್ಲರೂ ತಮ್ಮ ತಮ್ಮ ಬುದ್ಧಿಗೆ ಉತ್ತಮ ನೀತಿಯೆಂದು ತೋಚಿದುದನ್ನು ಹೇಳುವರು. ಅಕ್ಷರವೆನ್ನುವುದು ಭೂಮಿಯಲ್ಲಿ ಒಬ್ಬರ ಪಾಲಿಗೆ

ಕಮನೀಜಿ ಮೆಚ್ಚಿಸಲ್ ಗಿರಿಶನಾರ್ಪನೆ ತಮ್ಮಮದಕ್ಕಶಿರ್ವರಾ
ಕ್ರಮಿಸುತಿ ದುರ್ಜನಂಗೆ ಪರಿಶಂಕಿಸಲೇಕೆ ದುರುಕ್ತಿಭೀತಿಯಿಂ ೭

ಪರಿವಿಡಿದು ನಳಚರಿತ್ರಂ
ಪರಮಪವಿತ್ರಂ ನಿತಾಂತಪುಣ್ಯಶ್ಲೋಕಂ
ವಿರಚಿಸುವನದರ್ಟನೀ ಚೌಂ
ಡರಸಂ ಕರ್ನಾಟವಂಶಶೃಂಗಾರರಸಂ ೮

ವ॥ ಅದೆಂತೆನೆ

ಶ್ರೀಮದಶೇಷವಸ್ತು ಪರಿಪೂರ್ಣದಿನಾಗಮಯುಕ್ತ ಸದ್ಬುಧ
ಸ್ತೋಮದಿನೂರ್ಜಿತ ಪ್ರಕಟ ಸಂಪದ ಸನ್ನುತ ನಿತ್ಯಮಂಗಳ
ಕ್ಷೇಮದಿನುತ್ತಮೋತ್ತಮ ಚತುರ್ವಿಧ ನಾಯಕ ನಾಯಿಕಾಮನಃ
ಪ್ರೇಮದಿನೊಪ್ಪುಗುಂ ನಿಷಧಮೆಂಬ ಮಹಾವಿಷಯಂ ಧರಿತ್ರಿಯೊಳ್ ೯

ತೊಲಗದ ಸಂಪದಂ ಸೊಬಗುಗುಂದದ ಯೌವನದೇಳ್ಗೆಯೆಲ್ಲರೊಳ್
ನೆಲಸಿದ ಧರ್ಮಮತ್ಯಧಿಕ ನೀತಿಕಲಾಕುಶಲತ್ವಮಾವಗಂ
ಸುಲಲಿತ ಸತ್ಯವಾಕ್ಯಮೆಡರ್ಬಿಲ್ಲದ ಭೋಗಮನಾರತಂ ಸಮು
ಜ್ಜ್ವಲಮೆನಿಸಿರ್ಪುದಾ ನಿಷಧದೇಶದ ಸನ್ನುತ ಸಜ್ಜನರ್ಕಳಾ ೧೦

ಮಾತ್ರ ಬಂದುದಲ್ಲ. ಲೋಕವನ್ನೆಲ್ಲ ಮೆಚ್ಚಿಸಲು ಈಶ್ವರನಿಂದಲಾದರೂ ಸಾಧ್ಯವೆ ? ತಮ್ಮ ಅಹಂಕಾರದಿಂದ ಆವೃತರಾಗಿ ಆಡುವ ಕೆಟ್ಟಮಾತಿನ ಭಯದಿಂದ, ದುಷ್ಟನಾದವನಿಗೆ ಆತಂಕಪಡುವುದಾದರೂ ಯಾಕೆ ? ೮. ಕ್ರಮಶಃ ನಳಚರಿತ್ರವು ತುಂಬ ಶ್ರೇಷ್ಠವಾದುದು. ಅತ್ಯಂತ ಪುಣ್ಯ ಸ್ತುತಿಕರವಾದುದು. ಇದನ್ನು ರಚಿಸಿದವನಾದರೋ ಕರ್ನಾಟವಂಶದಲ್ಲಿ ಶೃಂಗಾರರಸಪ್ರಿಯನೂ ಸಮರ್ಥನೂ ಆದ ಚೌಂಡರಸನು. ವ॥ ಅದು ಹೇಗೆಂದರೆ, ೯. ಭೂಮಂಡಲದಲ್ಲಿ ನಿಷಧವೆಂಬ ದೊಡ್ಡದೇಶವು ಸಂಪದ್ಯುಕ್ತವಾದ ಸಕಲ ವಸ್ತುಗಳ ಸಂಪೂರ್ಣತೆಯಿಂದಲೂ, ಶಾಸ್ತ್ರಸಂಪನ್ನರಾದ ಒಳ್ಳೆಯ ವಿದ್ವಾಂಸರಿಂದಲೂ, ಅಭಿವೃದ್ಧಿದಾಯಕವೂ, ಸುವ್ಯಕ್ತವೂ. ಶ್ರೀಮಂತವೂ, ಸ್ತುತ್ಯಾರ್ಹವೂ, ಶಾಶ್ವತ ಶುಭಪ್ರದವೂ ಆದ ಶ್ರೇಯಸ್ಸಿನಿಂದಲೂ, ಶ್ರೇಷ್ಠರಾದ ನಾಲ್ಕು ತೆರನಾದ ನಾಯಕ ನಾಯಿಕೆಯರ ಮನಃಪ್ರೀತಿಯಿಂದಲೂ ಒಪ್ಪುವಂತಿದೆ. ೧೦. ಆ ನಿಷಧ ದೇಶದ ಸ್ತುತ್ಯರಾದ ಸಜ್ಜನರ ಐಶ್ವರ್ಯವು ಅಕ್ಷಯವಾದುದು. ಯೌವನೋತ್ಸಾಹವು ಸೌಂದರ್ಯ ಕುಗ್ಗದಂತಹುದು. ಎಲ್ಲರಲ್ಲಿಯೂ ಧರ್ಮವು ನೆಲಸಿದ್ದಿತು. ನೀತಿಕಲಾ ಕೌಶಲವು ಅತ್ಯಧಿಕವಾದುದು. ಸತ್ಯವಾಕ್ಯವು ಸರ್ವದಾ ಸುಭಗವಾಗಿತ್ತು. ಸುಖಕ್ಕೆ ಭಂಗತನವೆಂಬುದೇ ಇರಲಿಲ್ಲ. (ಇವೆಲ್ಲವೂ) ಸರ್ವದಾ ವಿರಾಜಮಾನವೆನ್ನಿಸಿದ್ದುವು.

ವ॥ ಮತ್ತಮಾ ಜನಪದಂ ಜನಾರ್ದನನಂತನಂತ ಭೋಗಸುಪ್ರತಿಷ್ಠಿತಮುಂ, ಯಾಗದೀಕ್ಷಿತ ನಂತನುಕ್ರಮ ಕ್ಷೇತ್ರಪವಿತ್ರಮುಂ, ಸಂವತ್ಸರದಂತೆ ಪಾರ್ಥಿವನಂದನ ಶ್ರೀಮುಖಭಾವರಮ್ಯಮುಂ, ಸ್ವರ್ಗಲೋಕದಂತೆ ಸುಮನಸ್ಸಂದೋಹಮಂದಿರಮುಂ, ಕಶ್ಯಪಋಷ್ಯಾಶ್ರಮದಂತೆ ದೇವಮಾತೃಕಾಭಿ ರಾಮಮುಂ, ಸಮಾಸಸಂಪತ್ತಿಯಂತೆ ಬಹುವ್ರೀಹಿ ಸಮೃದ್ಧಿಯುಂ, ಉತ್ತರದಿಶಾ ವಿಸ್ತಾರದಂತೆ ಮನುಷ್ಯಧರ್ಮಸನ್ಮಾರ್ಗಮುಂ, ನಂದನವನದಂತೆ ನಾನಾಜಾತಿಜನ್ಮಭೂಮಿಯುಂ, ಕ್ಷೀರಾಬ್ಧಿಯಂತೆ ಶ್ರೀವರ ಸಮಾಶ್ರಯ[ಮು]ಮಾಗಿರ್ಪುದಂತುಮಲ್ಲದೆಯುಂ

ನಾನಾ ಧಾನ್ಯಸಮೃದ್ಧಿ ದೇವನಿವಹಂ ಪುಣ್ಯೋದನಂ ದಾನಸ
ನ್ಮಾನಂ ಭಾವಕಭಾವಿತಸ್ಥಿತಿ ಸದಾ ವರ್ಣಾಶ್ರಮಪ್ರಾಪ್ತಿ ವಿ
ಜ್ಞಾನಂ ಕುಂದದೆನಿಪ್ಪ ತದ್ವಿಷಯಮಂ ಸಾನಂದದಿಂ ನೋಡಿ ವಾ
ಣೀನಾಥಂ ಮಿಗೆ ಬಣ್ಣಿಸಲ್ಕೆ ಜೀವಸೇಸಿರ್ದಂ ಚತುಃಪ್ರೌಢಿಯಂ ೧೧

ವ॥ ಅಲ್ಲದೆ, ಆ ದೇಶವು ವಿಷ್ಣುವಿನಂತೆ ಆದಿಶೇಷನ ಹೆಡೆಯ ವೈಭವವನ್ನು ಒಳಗೊಂಡಿತ್ತು (ಅಪಾರವಾದ ಸುಖಭೋಗಗಳಿಂದ ಸುಪ್ರಸಿದ್ಧವಾಗಿತ್ತು). ಯಜ್ಞವನ್ನು ಕೈಕೊಂಡವನಂತೆ ಪ್ರತಿಯೊಂದು ಸ್ಥಳವೂ ಪರಿಶುದ್ಧಗೊಳಿಸಲ್ಪಟ್ಟಿತ್ತು (ಕ್ರಮಾನುಸಾರವಾಗಿ ಪುಣ್ಯ ಕ್ಷೇತ್ರಗಳಿಂದ ಕೂಡಿತ್ತು). ಪಾರ್ಥಿವ, ನಂದನ, ಶ್ರೀಮುಖ, ಭಾವಸಂವತ್ಸರಗಳಂತೆ ಮನೋಹರವಾಗಿತ್ತು (ಕ್ಷತ್ರಿಯಕುಮಾರ ಸಂಪದ್ಯುಕ್ತವಾದ ಮುಖಭಾವಗಳಿಂದ ಸುಂದರವಾಗಿತ್ತು), ಸ್ವರ್ಗಲೋಕದಂತೆ ದೇವತಾಸಮೂಹಗಳ ನಿವಾಸಗಳಿಂದ ನಿಬಿಡವಾಗಿತ್ತು (ನಾನಾ ಪುಷ್ಪಗಳ ಸಮೂಹದ ಆವಾಸಸ್ಥಳವಾಗಿತ್ತು). ಕಶ್ಯಪಋಷಿಯ ಆಶ್ರಮದ ಹಾಗೆ ದೇವಮಾತೆಯರಿಂದ ಶೋಭಾಯಮಾನವಾಗಿತ್ತು (ಮಳೆನೀರಿನಿಂದ ಬೆಳೆಯುವ ಬೆಳೆಗಳಿಂದ ವಿರಾಜಿಸುತ್ತಿತ್ತು). ನಾನಾ ಸಮಾಸಗಳಲ್ಲಿ ಬಹುವ್ರೀಹಿ ಸಮಾಸದಂತೆ ಪೂರ್ಣವಾಗಿತ್ತು (ಅಧಿಕವಾಗಿ ಬತ್ತದಿಂದ ತುಂಬಿ ತುಳುಕುತ್ತಿತ್ತು). ಉತ್ತರದಿಕ್ಕಿಗೆ ವೈಶಾಲ್ಯವನ್ನು ಹೋಲುವ ಕುಬೇರನ ಸದ್ಗುಣದಂತಿತ್ತು (ಮಾನವ ಧರ್ಮದ ಸತ್ಪಥದಂತಿತ್ತು). ನಂದನವನದಂತೆ ನಾನಾ ಬಗೆಯ ಜಾಜಿಹೂವುಗಳ ಆವಾಸಸ್ಥಾನವಾಗಿತ್ತು (ನಾನಾ ವರ್ಣಗಳಿಗೆ ಸೇರಿದ ಜನರ ನೆಲೆಯಾಗಿತ್ತು). ಕ್ಷೀರ ಸಮುದ್ರದಂತೆ ಲಕ್ಷ್ಮೀನಾರಾಯಣನ ಆಶ್ರಯಸ್ಥಾನವಾಗಿತ್ತು (ಶ್ರೇಷ್ಠವಾದ ಸಂಪತ್ತಿಗೆ ಎಡೆಯಾಗಿತ್ತು). ಅಷ್ಟೇ ಅಲ್ಲದೆ, ೧೧. ವಿಧವಿಧವಾದ ಧಾನ್ಯಗಳ ಆಧಿಕ್ಯ, ದೇವರ ಸಮೂಹ (ದೇವಾಲಯಗಳ ಸಮೂಹ ?), ಪುಣ್ಯಪ್ರದವಾದ ಆಹಾರ, ದಾನ ಸನ್ಮಾನಗಳು, ಪಂಡಿತಪಾಮರರ ನೆಲೆ, ಸರ್ವದಾ ವರ್ಣಾಶ್ರಮ ಪರಿಪಾಲನೆ, ವಿಶೇಷವಾದ ಜ್ಞಾನಾದಿಗಳು ಕಡಮೆಯಾಗದಂತಿರುವ ಆ ದೇಶವನ್ನು ಸಂತೋಷಯುಕ್ತನಾಗಿ ನೋಡಿ ಬ್ರಹ್ಮನು ವಿಶೇಷವಾಗಿ ಹೊಗಳಲು, (ಆತನ) ಚಾತುರ್ಯದ ಪ್ರೌಢಿಮೆಯನ್ನು

ಸೀಮಾಲಂಘ್ಯಂ ನದಿಯೊಳ್
ಸಾಮಜದೊಳ್ ನಿಗಳಮೆನಿಪ ಕರಪೀಡೆ ರತಿ
ಪ್ರೇಮದೊಳತಿನಿರ್ಲಜ್ಜೆ ವಿ
ರಾಮಂ ಕಪಿಕುಲದೊಳಲ್ಲದಿಲ್ಲಾ ನಾಡೊಳ್ ೧೨

ಅಲ್ಲಿ ನಿರಂತರಂ ಮೆಱೆವುದೊಪ್ಪುವ ತನ್ನ ವಿಲಾಸದಿಂದೆ ವಾ
ಗ್ವಲ್ಲಭಸೋಜೆಗೀ ಪುರವೆ ಸೀಮೆಯೆನುತ್ತಿಳೆ ಬಣ್ಣಿಸಲ್ಕೆ ತಾಂ
ಸಲ್ಲಲಿತ ಪ್ರಭಾಕರ ನಿಶಾಕರವೀಥಿಯ ಗೋಪುರಂಗಳ
ಲ್ಲಲ್ಲಿಯ ಚಿತ್ರದಿಂ ವಿಮಳಪಟ್ಟಣಮೆಂಬುದನೇಕ ಶೋಭೆಯಿಂ ೧೩

ಸುರುಚಿರ ಶಾತಕುಂಭಕಳಶಂಗಳಿನೊಪ್ಪುವ ಕೇರಿಕೇರಿಯ
ಪ್ಪರಿಗೆಯ ಲೋವೆಯೊಳ್ ಪೊಳೆವ ಮುತ್ತಿನ ಲಂಬಣದಿಂ ವಿಚಿತ್ರ ಕ
ರ್ಬುರಮಣಿತೋರಣಾವಳಿಗಳಿಂ ನವರತ್ನದ ಪುತ್ರಿಕಾಮನೋ
ಹರತೆಯಿನೊಪ್ಪುಗುಂ ವಿಮಳಪಟ್ಟಣಮುರ್ವಿಯ ಕಣ್ಗೆ ಕೌತುಕಂ ೧೪

ಪಸುರೆಳಗೌಂಗು ಪೆರ್ಚಿದೆಳನೀರ್ವೊಱೆಯೊಟ್ಟಿಲ ತೆಂಗು ಸಂತತಂ
ರಸಮೊಸರ್ವಿಳೆ ಪಣ್ಗೊನೆಗಳಿಂದೊಲೆದಾಡುವ ಬಾಳೆ ದೋರೆವ

ಎಷ್ಟೆಂದು ಮರೆಸಲಾದೀತು ? ೧೨. ಮೇರೆ ಮೀರುವುದು ನದಿಯಲ್ಲಿಯೂ, ಸರಪಣಿಯಿಂದ ಕಟ್ಟಿಹಾಕುವ ಯಾತನೆ ಮದಿಸಿದ ಆನೆಯಲ್ಲಿಯೂ, ನಾಚಿಕೆಯಿಲ್ಲದಿರುವಿಕೆಯು ಪ್ರೇಮದಲ್ಲಿಯೂ, ವಿರಾಮವು ಕಪಿಸಂತತಿಯಲ್ಲಿಯೂ ಕಂಡುಬರುವುದಲ್ಲದೆ ಆ ನಾಡಿನಲ್ಲಿ ಇಲ್ಲ. (ಪರಿಸಂಖ್ಯಾಲಂಕಾರ) ೧೩. ಸರಸ್ವತಿಯ ಒಡೆಯನಾದ ಬ್ರಹ್ಮನ ಸೃಷ್ಟಿಕ್ರಮಕ್ಕೆ ಈ ಪಟ್ಟಣವೇ ಮೇರೆಯೋ ಎಂಬಂತೆ ಭೂಮಂಡಲವು ವರ್ಣಿಸಲು, ಮನೋಹರವಾದ ಸೂರ್ಯ ಚಂದ್ರಬೀದಿಗಳ ಗೋಪುರಗಳಿಂದಲೂ, ಅಲ್ಲಲ್ಲಿಯೇ (ಕಂಡು ಬರುವ) ಚಿತ್ರಾವಳಿಗಳಿಂದಲೂ ವಿಮಳಪಟ್ಟಣವೆನ್ನುವುದು ನಾನಾ ಕಾಂತಿಯುಕ್ತವಾಗಿ, ತನಗೆ ತಕ್ಕುದಾದ ವೈಖರಿಯಿಂದ ಸರ್ವದಾ ಅಲ್ಲಿ ವಿರಾಜಿಸುತ್ತಿರುವುದು. ೧೪. ಶೋಭಾಯಮಾನವಾದ ಚಿನ್ನದ ಕಳಶಗಳಿಂದಲೂ, ಅಣಿಯಾದ ಕೇರಿಕೇರಿಗಳ ಮಹಡಿಗಳ ಇಳಿಜಾರಾಗಿರುವ ಭಾಗಗಳಲ್ಲಿ ಹೊಳೆಹೊಳೆಯುವ ಮುತ್ತಿನ ಹಾರಗಳಿಂದಲೂ, ವಿಶಿಷ್ಟವಾದ ಬಂಗಾರದ ಮಣಿತೋರಣಗಳಿಂದಲೂ, ನವರತ್ನನಿರ್ಮಿತವಾದ ಸ್ತ್ರೀಮೂರ್ತಿಗಳ ಮನೋಜ್ಞತೆಯಿಂದಲೂ ಆ ವಿಮಳಪಟ್ಟಣವು ಕಣ್ಣಿಗೆ ಆಶ್ಚರ್ಯವನ್ನುಂಟುಮಾಡುವಂತೆ ಒಪ್ಪುತ್ತಿದೆ. ೧೫. ಹಸುರಾದ ಎಳೆಯ ಅಡಿಕೆ, ಅಧಿಕವಾದ ಎಳನೀರಿನ ಭಾರದ ಸಮೂಹದಿಂದ (ಕೂಡಿರುವ) ತೆಂಗು, ಯಾವಾಗಲೂ ರಸವನ್ನು ಸುರಿಸುತ್ತಿರುವ ಕಿತ್ತಿಳೆ, ಹೇರಿಳೆ (ಮೊದಲಾದ ಹಣ್ಣುಗಳು), ಹಣ್ಣಿನ ಗೊನೆಗಳಿಂದ ತೂಗಾಡುವ ಬಾಳೆ, ನಸು

ಣ್ಣುಸುಕಿದ ಒಕ್ಕಿಯುರ್ವಿಗಿಡುಗೆಂಧಿಕೆ ಕೊರ್ವಿದ ಕರ್ಬು ಕೆಂದಳಿರ್
ಮಿಸುಗುವ ಚೂತಮೊಪ್ಪಲತಿಕೌತುಕಮಾದುದು ತಪ್ಪುಹಿರ್ವಸಂ ೧೫

ಕೋಗಿಲೆಯಿಂಚರಂ ಗಿಳಿಯ ಪೆಲ್ನುಡಿ ಭೃಂಗನಿನಾದಮಾವಗಂ
ಸೋಗೆಯ ತೆಂಗು ಮೆಲ್ಲನೆಡೆಯಾಡುವ ಮೆಲ್ಲೆಲರಂಚೆವಿಂಡು ತ
ಳ್ತೋಗರಗಂಪು ತಳ್ತ ಲತೆ ಕೊರ್ವಿದಶೋಕೆ ತಳಿರ್ತ ಮಾಪು ಚೆ
ಲ್ವಾಗಿರೆ ತತ್ಪುರೋಪವನಮಂ ಮದನಂ ವನಮೆಂದು ಸಾಱನೇ ೧೬

ಆ ಪುರದಧಿಪತಿ ಸಕಳ ಕ
ಳಾಪರಿಣತನಧಿಕ ವೀರಸೇನಂ ಜಂಬೂ
ದ್ವೀಪಮನೊರ್ವನೆ ಪೆರ್ಚಿದ
ಕೂಪಾರಂ ಸೀಮೆಯಾಗಲಾಳುತ್ತಿರ್ದಂ ೧೭

ಆ ವೀರಸೇನನೃಪತಿಗೆ
ಪಾವನತರಮೂರ್ತಿ ಪುಟ್ಟಿದಂ ನಳನೆಂಬಂ
ಭಾವಭವಸನ್ನಿಭಂ ನಾ
ನಾ ವಂದಿಸ್ತೋತ್ರಪಾತ್ರನಭಿಜನಮಿತ್ರಂ ೧೮

ಎಳವೆಱೆಯೇಟಿಗ್ಗಿವೆತ್ತು ದಿವಸಕ್ರಮದಿಂ ಕಮನೀಯಮಪ್ಪ ಸ
ತ್ಕಳೆ ಬೆಳೆವಂದದಿಂ ಬೆಳೆದು ಬಾಲ್ಯಮನಂ ಪೆಱಪಿಂಗಿ ಯೌವನಂ

ಮಾಗಿದ ಹಣ್ಣಿನಿಂದ ಆವೃತವಾದ ಹಲಸಿನ ಭೂಮಿ, ಗಿಡಮೂಲಿಕೆಗಳು, ಕೊಬ್ಬಿದ ಕಬ್ಬು, ಕೆಂಪಾದ ಚಿಗುರಿನಿಂದ ವಿರಾಜಿಸುವ ಮಾವುಗಳು ಒಪ್ಪುವಂತಿರಲು ಆ ಊರಿನ ಹೊರಗಡೆಯಿದ್ದ ಉದ್ಯಾನವು ಬಹಳ ಆಶ್ಚರ್ಯಕರವೆನ್ನಿಸಿತು. ೧೬. ಕೋಗಿಲೆಯ ನುಣ್ದನಿ, ಗಿಳಿಯ ಸವಿನುಡಿ, ದುಂಬಿಯ ಝೇಂಕಾರ, ಸಂತತವಾಗಿ ಗರಿಯುಳ್ಳ ತೆಂಗು, ಮೆಲ್ಲನೆ ಸುಳಿದಾಡುವ ಮೃದುವಾದ ಗಾಳಿ, ಹಂಸಗಳ ಬಳಗ, ಆಹಾರದ ಕಂಪು, ಹೊಸೆದುಕೊಂಡಿರುವ ಬಳ್ಳಿ, ಚಿಗುರೊಡೆದ ಮಾವು (ಮೊದಲಾದುವು) ಸುಂದರ ವಾಗಿರಲು ಆ ಉಪವನವನ್ನು ಮನ್ಮಥನು ವನವೆಂದು ಸಾರದೆ ಇರುವನೆ ? ೧೭. ಸಮಸ್ತ ಕಲೆಗಳಲ್ಲಿಯೂ ಪ್ರವೀಣನಾಗಿ ಮಿಗಿಲಾದ ವೀರಸೇನನು ಆ ಪಟ್ಟಣದ ಒಡೆಯನಾಗಿ ವಿಸ್ತಾರವಾದ ಸಮುದ್ರವೇ ಮೇರೆಯಾಗಿರಲು ಜಂಬೂದ್ವೀಪವನ್ನು ಒಬ್ಬನೇ ಆಳುತ್ತಿದ್ದನು. ೧೮. ಆ ವೀರಸೇನಮಹಾರಾಜನಿಗೆ ಶ್ರೇಷ್ಠತರನಾದ ಮೂರ್ತಿಸ್ವರೂಪನೂ, ಮನ್ಮಥಸಮಾನನೂ, ನಾನಾ ಸ್ತುತಿಪಾಠಕರ ಕೊಂಡಾಟಕ್ಕೆ ಪಾತ್ರನೂ, ಪಂಡಿತಮಿತ್ರನೂ ಆದ ನಳನೆಂಬುವನು ಹುಟ್ಟಿದನು. ೧೯. ಬಾಲಚಂದ್ರನು ಏಳಿಗೆಗೊಂಡು ದಿನಕಳೆದಂತೆಲ್ಲ ಮನೋಹರವಾದ ಸತ್ಕಳೆ ಬೆಳೆಯುವಂತೆಯೇ ಪ್ರವರ್ಧಿಸಿ,

ಪೊಳೆತು ತಳಿರ್ತಿರಲ್ ಪಗೆಗಳಂಜುವಿನಂ ಯುವರಾಜಪಟ್ಟಮಂ
ತಳೆವೊಡೆ ಕಾಲಮೆಂದು ನೃಪನೀಕ್ಷಿಸಿದಂ ನಿಜಪುತ್ರವಕ್ತ್ರಮಂ ೧೯

ವ|| ಆ ಸಮಯದೊಳ್

ಸಕಳ ನದೀನದ ಪ್ರಕಟ ತೋಯದಿನಂದಭಿಷೇಕಮಂ ಕರಂ
ಪ್ರಕಟಿಸಿ ಸನ್ಮುಹೂರ್ತದೊಳನಂತರಮುರ್ವಿಪನಚ್ಚಿಯಿಂದೆ ಕೌ
ತುಕ ಯುವರಾಜಪಟ್ಟವನಲಂಪು ಮಿಗಲ್ ತನಯಂಗೆ ಕಟ್ಟಿ ದ
ಇ್ಭಿಕರಜಯಕ್ಕೆ ಸೇನೆಸಹಿತಂ [ತಳತರಲ್] ಬಗೆದಂದನಾಕ್ಷಣಂ ೨೦

ಗಜಬಜಿಸಲ್ ಸುರಸಂತತಿ
ಭುಜಗರ್ ಕಿವಿಯಿಲ್ಲಮುಟಿವರೆರ್ದೆಗೆಡಲಾಶಾ
ಗಜವರಿಗಳಿಳೆಯನುಟಿಯಲ್
ವಿಜಯಪ್ರಸ್ಥಾನಭೇರಿನಿನದಕ್ಕಾಗಳ್ ೨೧

ಹಸ್ತ್ಯಶ್ವ ರಥ ಪದಾತಿ ಸ
ಮಸ್ತಯುತಂ ನಡೆದು ನಳನೃಪಾಳಂ ರಿಪುವಂ
ಶಾಸ್ತಿಯನೈದಿಸಿ ದಿಗ್ವಿಜ
ಯಸ್ತಂಭಮನೆಂಟು ದಿಕ್ಕಿನೊಳ್ ನಿಱಿಸಿಟ್ಟಂ ೨೨

ಬಾಲ್ಯವೆಂಬ ವನವು ಹಿಂದುಳಿದು ಯೌವನವು ಕುಡಿಯೊಡೆದು ಚಿಗುರಿರಲು, ಹಗೆಗಳು ಹೆದರುವಂತೆ ಯುವರಾಜಪಟ್ಟವನ್ನು ತಾಳಲು ಸಕಾಲವೆಂದು ಎಣಿಸಿ, ಮಹಾರಾಜನು ತನ್ನ ಮಗನ ಮುಖದತ್ತ ನೋಡಿದನು. ವ|| ಆ ಹೊತ್ತಿನಲ್ಲಿ, ೨೦. ಸಮಸ್ತ ನದೀನದಗಳಲ್ಲಿ ಸುವ್ಯಕ್ತವಾದ ನೀರಿನಿಂದ ಅಭಿಷೇಕವನ್ನು ಎಲ್ಲರಿಗೂ ತಿಳಿಯುವಂತೆ ಮಾಡಿ, ಆ ತರುವಾಯ ಶುಭಮುಹೂರ್ತದಲ್ಲಿ ಮಹಾರಾಜನು ಕುತೂಹಲಭರಿತವಾದ ಯುವರಾಜಪಟ್ಟವನ್ನು ಸಂತೋಷ ಮಿಗಿಲಾಗುವಂತೆ ಮಗನಿಗೆ ಕಟ್ಟಲು, (ಆತನು) ಆಕ್ಷಣವೇ ದಿಗ್ವಿಜಯಕ್ಕೆ ಸೇನಾಸಮೇತನಾಗಿ ಹೊರಡಲು ಮನಸ್ಸನ್ನು ಮಾಡಿದನು. ೨೧. ವಿಜಯಯಾತ್ರೆಯ ಭೇರೀಶಬ್ದಕ್ಕೆ ಆಗ ದೇವಸಮೂಹದವರು ಗಡಿಬಿಡಿಗೊಂಡರು ; ನಾಗಲೋಕದವರು ಕಿವಿಗಳನ್ನೇ ಕಳೆದುಕೊಂಡರು ; ಹೆದರಿಕೆಯಾಗಲು ದಿಗ್ಗಜಗಳು ಭೂಮಿಯನ್ನೇ ಬಿಟ್ಟು ತೆರಳಿದುವು. ೨೨. ಆನೆ, ಕುದುರೆ, ರಥ, ಕಾಲಾಳುಗಳಿಂದ ಕೂಡಿ ನಡೆದು, ನಳಮಹಾರಾಜನು ಶತ್ರುಗಳನ್ನು ದಂಡಿಸಿ, ಎಂಟು ದಿಕ್ಕುಗಳಲ್ಲಿಯೂ ವಿಜಯ

ವ॥ ಅಂತು ದಿಗ್ವಿಜಯಮಂ ಮಾಡಿ

ನಗರವಧೂಜನಂ ತಳಿವ ಮಂಗಳಸೇಸೆಗಳಂ ಪ್ರಸೂನಮಾ
ಲೆಗಳನತಿಪ್ರಮೋದದೊದವಿಂ ತಳೆಯುತ್ತನುರಾಗದೇೞ್ಗೆ ಕೈ
ಮಿಗೆ ಚತುರಂಗಸೇನೆ ಸಹಿತಂ ಪುರವಂ ಪುಗುತಂದನುತ್ಸವಂ
ದ್ವಿಗುಣಿಸೆ ವೀರಸೇನನೃಪನಂದನನಪ್ರತಿಮ ಪ್ರತಾಪದಿಂ ೨೩

ವ॥ ಅನಂತರಂ

ಸದಮಳ ವೈಭವಂ ಬೆರಸು ರಾಜಸುತಂ ಸುಖಸಂಕಥಾವಿನೋ
ದದೊಳಿರಲಾತ್ಮಜಂಗಖಿಳ ರಾಜ್ಯದ ಭಾರಮನಿತ್ತು ನಮ್ಮ ವಂ
ಶದ ನೃಪರಂದಮೀ ತೆಱನೆನುತ್ತರೆಬರ್ ಬರೆ ತನ್ನ ಕೂಡೆ ಪೆ
ರ್ಚಿದ ವನಮಧ್ಯದೊಳ್ ನೆಲಸಿದಿಂ [ಮುದದಿಂ] ನಿಷಧಾಧಿನಾಯಕಂ ೨೪

ವ॥ ಬಳಿಯಂ

ವಿಜಯವಧೂವರಂ ಸಕಲರಾಜ್ಯದ ಭಾರಮನಾಂತು ಧರ್ಮಮಂ
ಪ್ರಜೆಯನುರಾಗದೊಳ್ ನೆಲಸಿದಾಜ್ಞೆಯನಾಶ್ರಮವರ್ಣವೃಂದಮಂ
ಗಜಹಯರತ್ನಕೋಶತತಿಯಂ ತನಿವೆರ್ಚಿಸಿ ನೀತಿಮಾರ್ಗದಿಂ
ನಿಜಸುಖಲೀಲೆಯಿಂ ನಳನೃಪಂ ಪರಿಪಾಲಿಸುವಂ ಧರಿತ್ರಿಯಂ ೨೫

ಸ್ತಂಭಗಳನ್ನು ಸ್ಥಾಪಿಸಿದನು. ವ॥ ಹಾಗೆ ದಿಗ್ವಿಜಯವನ್ನು ನೆರವೇರಿಸಿ, ೨೩. ಪಟ್ಟಣದ ಸ್ತ್ರೀಸಮೂಹದವರು ಚೆಲ್ಲಿದ ಮಂಗಳಾಕ್ಷತೆಗಳನ್ನೂ (ಮಂತ್ರಾಕ್ಷತೆಗಳನ್ನೂ), ಹೂವಿನ ಮಾಲೆಗಳನ್ನೂ ಅತ್ಯಂತ ಸಂತೋಷದಿಂದ ಧರಿಸುತ್ತ, ಪ್ರೀತಿ ವಿಶ್ವಾಸಗಳು ಮೇರೆ ಮೀರಲು, ವೀರಸೇನಮಹಾರಾಜನ ಮಗನು ಅದ್ವಿತೀಯವಾದ ಪ್ರತಾಪದಿಂದ ಉತ್ಸವವು ಇಮ್ಮಡಿಸಲು ಚತುರಂಗಸೇನಾಸಮೇತನಾಗಿ ಪಟ್ಟಣವನ್ನು ಪ್ರವೇಶಿಸಿದನು. ವ॥ ಆ ತರುವಾಯ ೨೪. ರಾಜಕುಮಾರನು ಪವಿತ್ರವಾದ ವೈಭವದಿಂದ ಕೂಡಿ, ಸುಖ ಸಂಕಥಾ ವಿನೋದಮಗ್ನನಾಗಿರಲು, ನಿಷಧೆಯ ಒಡೆಯನು ನಮ್ಮ ವಂಶದ ರಾಜರ ಪದ್ಧತಿಯಿದೆಂದು ತನ್ನ ಮಗನಿಗೆ ಸಮಸ್ತ ರಾಜ್ಯದ ಆಳ್ವಿಕೆಯನ್ನು ವಹಿಸಿಕೊಟ್ಟು, ತನ್ನೊಂದಿಗೆ ಕೆಲವರು ಬರಲು, ದಟ್ಟವಾದ ಅರಣ್ಯಮಧ್ಯದಲ್ಲಿ ಸಂತೋಷದಿಂದ ವಾಸಿಸಲು ತೊಡಗಿದನು. ವ॥ ಬಳಿಕ, ೨೫. ಜಯಲಕ್ಷ್ಮಿಯ ಒಡೆಯನಾದ ನಳಮಹಾ ರಾಜನು ಸಮಸ್ತ ರಾಜ್ಯದ ಭಾರವನ್ನೂ ಹೊತ್ತು, ಧರ್ಮವನ್ನೂ, ಪ್ರಜೆಗಳನ್ನೂ, ಪ್ರೀತಿಯುಕ್ತವಾದ ರಾಜಾಜ್ಞೆಯನ್ನೂ, ಚಾತುರ್ವರ್ಣ್ಯಕ್ಕೆ ಸೇರಿದವರನ್ನೂ, ಆನೆ, ಕುದುರೆ, ರತ್ನ ಭಂಡಾರಗಳ ಸಮೂಹವನ್ನೂ ಸಮೃದ್ಧಿಗೊಳಿಸಿ ನೀತಿಮಾರ್ಗದಿಂದ ತನ್ನ ಸುಖ

ಸ್ಥಿರಧರ್ಮ ಪ್ರೀತಿ ಸತ್ಯಂ ದುರಿತವಿರತಿ ದಾಕ್ಷಿಣ್ಯಮೌದಾರ್ಯ ವೀರ್ಯಂ
ಕರುಣಂ ನ್ಯಾಯಂ ಪ್ರಜಾಪಾಲನೆ ಬುಧಜನಸನ್ಮಾನ ದಾನಂ ವಿಶುದ್ಧಾ
ಚರಣಂ ಸನ್ನೀತಿಮಾರ್ಗಂ ದ್ವಿಜಯತಿಜನಸುರಕ್ಷೆಯೆಂಬಿಂತಿವೆಲ್ಲಂ
ಧರಣೀಶಂಗಾತ್ಮನಾಮಂ ನಳನೃಪನ ಚರಿತ್ರಂ ನಿತಾಂತಂ ಪವಿತ್ರಂ ೨೬

ಸತತಂ ಸತ್ಯವ್ರತಂ ಧಾರ್ಮಿಕನಧಿಕನನಿಂದ್ಯಂ ದಯಾಯಾತ್ತ ಚಿತ್ತಂ
ವ್ರತನಿಷ್ಠಂ ಪಾಪಭೀತಂ ಮೃದುವಚನರತಂ ತೀವ್ರಪುಣ್ಯಾತ್ಮಕಂ ನಿ
ತ್ಯತಪಃಪ್ರೀತಂ ಸಮಸ್ತೇಂದ್ರಿಯ ನಿಜವಿಜಯಂ ಶಾಶ್ವತಂ ಸಾರ್ವಭೌಮಂ
ಪ್ರತಿಶೂನ್ಯಂ ವೀರಸೇನಾತ್ಮಜನೆನೆಲದಟಿಂದಾಂಪವಂ ಗಾಂಪನಲ್ತೇ ೨೭

ನಳನೃಪನತ್ಯುದಾರತನಮಂ ಬುಧರುನ್ನತ ವೈಭವಂಗಳಿಂ
ನಳನೃಪಸತ್ವಮಂ ರಿಪುನೃಪಾಳದರಿದ್ರತೆಯಿಂ ನಿರಂತರಂ
ನಳನೃಪಸತ್ಯಮಂ ನಿಖಿಳರಾಜ್ಯವಿವರ್ಧನದಿಂ ವಿಚಾರಿಸಲ್
ನಳನ ಗುಣಂಗಳಂ ಪ್ರಜೆಯ ಮನ್ನಣೆಯಿಂದಱಿಗುಂ ಜಗಜ್ಜನಂ ೨೮

ಆಹವದೊಳರಿಗೆ ಚಿತ್ತವಿ
ಮೋಹದಿನೆರೆವರ್ಥಿಗಳ್ಗೆ ನೋಡಲ್ಕ ಪುನ

ಪ್ರದಲೀಲೆಯಿಂದ ಭೂಮಂಡಲವನ್ನು ಆಳುವನು. ೨೬. ಶಾಶ್ವತ ಧರ್ಮ, ಪ್ರೀತಿ, ಸತ್ಯ, ಪಾಪನಿವಾರಣೆ, ದಾಕ್ಷಿಣ್ಯ, ಔದಾರ್ಯ, ವೀರ್ಯ, ಕರುಣ, ನ್ಯಾಯ, ಪ್ರಜಾಸಂರಕ್ಷಣೆ, ವಿದ್ವಾಂಸರ ಸನ್ಮಾನ, ದಾನ, ಪರಿಶುದ್ಧಾಚರಣೆ, ಶ್ರೇಷ್ಠ ನೀತಿಮಾರ್ಗ, ಬ್ರಾಹ್ಮಣ, ಯತಿಸಮೂಹಗಳ ಹಿತ ಎಂಬಿವೇ ಮೊದಲಾದುವು ಮಹಾರಾಜನಿಗೆ ಅನ್ವರ್ಥನಾಮಗಳಾಗಿದ್ದುವು. ನಳಮಹಾರಾಜನ ಚರಿತ್ರೆ ಸರ್ವದಾ ಪವಿತ್ರವಾದುದು. ೨೭. ವೀರಸೇನನ ಮಗನಾದ ನಳಮಹಾರಾಜನು ಸರ್ವದಾ ಸತ್ಯವ್ರತ, ಧರ್ಮಪರಾಯಣ, ಶ್ರೇಷ್ಠ, ಅಕಳಂಕ, ದಯಾಯುಕ್ತನಾದ ಮನಸ್ಸುಳ್ಳವನು, ವ್ರತನಿಷ್ಠ, ಪಾಪಭಯವುಳ್ಳವನು, ಮೃದುವಾದ ಮಾತಿನಲ್ಲಿ ಆಸಕ್ತಿಯುಳ್ಳವನು, ವಿಶೇಷವಾದ ಪುಣ್ಯಾತ್ಮ, ಸರ್ವದಾ ತಪಸ್ಸಿನಲ್ಲಿ ಅನುರಾಗವುಳ್ಳವನು, ಸರ್ವೇಂದ್ರಿಯಗಳನ್ನು ಗೆದ್ದವನು, ಶಾಶ್ವತನು, ಚಕ್ರವರ್ತಿ, ಅಪ್ರತಿಮ ಎನ್ನಬೇಕಾದರೆ ಪರಾಕ್ರಮದಿಂದ ಆತನ ಮೇಲೆ ಕೈಯೆತ್ತುವವನು ಅವಿವೇಕಿಯಲ್ಲವೇ ? ೨೮. ನಳಮಹಾರಾಜನ ಔದಾರ್ಯವನ್ನು ವಿದ್ವಾಂಸರ ಉನ್ನತವಾದ ಸಂಪತ್ತಿನಿಂದಲೂ, ನಳಮಹಾರಾಜನ ಸಾಮರ್ಥ್ಯವನ್ನು ಶತ್ರುಮಹಾರಾಜರ ದಾರಿದ್ರ್ಯದಿಂದಲೂ, ನಳಮಹಾರಾಜನ ಸತ್ಯವನ್ನು ಸಮಸ್ತ ರಾಜ್ಯದ ಅವಿಚ್ಛಿನ್ನವಾದ ಏಳಿಗೆಯಿಂದಲೂ, ವಿಚಾರಿಸಿನೋಡಲು, ನಳನ ಗುಣಶೀಲಗಳನ್ನು ಆತನ ಪ್ರಜೆಗಳ ಆದರದಿಂದಲೂ ಜಗತ್ತಿನ ಜನರು ತಿಳಿಯಬಲ್ಲವರಾಗಿದ್ದರು. ೨೯. ವಿಚಾರಿಸಿನೋಡಲು ನಳಮಹಾರಾಜನ ಬಾಹುಬಲವೂ, ವಿನಿಯೋಗ ಸ್ವಭಾವವೂ ಇರುವವರೆಗೆ ಯುದ್ಧದಲ್ಲಿ

ರ್ದೋಹಿಯೆನಲುಂಟೆ ನಳನೃಪ
ಬಾಹುಬಳಂ ವಿತರಣಂಗಳಿರ್ಪನ್ನೆವರಂ ೨೯

ಎಳೆದಳಿರಗ್ರಪಾಣಿತಳಮುನ್ನತ ಶಾಖೆ ಭುಜಂ ಪ್ರಸೂನಮು
ಜ್ಜ್ವಲನಖದೀಪ್ತಿ ಪಕ್ವಫಲ ಸಂತತಿಯೇಟ್ಗೆಯುದಾರವಾಗೆ ಸ
ಲ್ಲಲಿತ ಕುಲೀನವಪ್ಪ ನಳಕಲ್ಪಕುಜಂ ಸಕಲೋರ್ವಿಯೆಲ್ಲಮಂ
ಸಲೆ ನಿಲೆ ರಕ್ಷಿಸಲ್ಕೆ ತವಿಲಾಗದೆ ವರ್ಧಿಸುಗುಂ ಪ್ರಜಾಕುಲಂ ೩೦

ನ್ಯಾಯದಿನರ್ಥಮಂ ಪಲವುಪಾಯದಿನುತ್ತಮ ಧರ್ಮಮಂ ಕುಲ
ಸ್ತ್ರೀಯರಿನಾತ್ಮಸಂತತಿಗಳಂ ಭುಜಸತ್ತ್ವದಿನುಗ್ರವೈರಿಭೂ
ದಾಯಮನರ್ಜಿಸಲ್ ಪಡೆಯಲೆಂದು ನಳಂ ಸುಖರಾಜ್ಯವೈಭವ
ಶ್ರೀಯನನಾರತಂ ಸಲಹುವಂ [ವಿತತ ಸ್ವಭುಜ] ಪ್ರತಾಪದಿಂ ೩೧

ಭೂಮಿಗೆ ಮಂಡನಂ ಭುವನಭೂಭುಜಕೋಟಿಗೆ ಕರ್ಣಕುಂಡಲಂ
ಪ್ರೇಮಮಿಳಾಜನಕ್ಕೆ ಬುಧಸಂತತಿಗಾತ್ಮಹಿತಂ ಚತುರ್ವಿಧ
ಸ್ತ್ರೀಮುದಕಾರಣಂ ಕವಿಗೆ ನಾಲಗೆಯುತ್ಸವಮುಗ್ರವೈರಿಗು
ದ್ದಾಮ ಶಿಲಾಭಿಘಾತವೆನಿಕುಂ ನೃಪನುನ್ನತಕೀರ್ತಿ ಕೌತುಕಂ ೩೨

ಶತ್ರುಗಳಿಗೂ, ಚಿತ್ತವ್ಯಾಮೋಹದಿಂದ ಬೇಡುವ ಯಾಚಕರಿಗೂ ಮತ್ತೆ ಬೇಡ ಬೇಕಾಗುವ ಸಂಭವವುಂಟೆ ? (ಯಥಾಸಂಖ್ಯಾಲಂಕಾರ) ೩೦. ಅಂಗಯ್ಯ ಮೇಲಿನ ಭಾಗವೇ ಎಳೆಯ ಚಿಗುರು, ಭುಜವೇ ಎತ್ತರವಾದ ಕೊಂಬೆ, ಕಾಂತಿಯುಕ್ತವಾದ ಉಗುರಿನ ಪ್ರಕಾಶವೇ ಹೂವು, ಧಾರಾಳವಾದ ಮೇಲ್ಮೆಯೇ ಮಾಗಿದ ಹಣ್ಣುಗಳ ರಾಶಿ ಯಾಗಲು ಸುಂದರವೂ ಸದ್ವಂಶದಲ್ಲಿ ಹುಟ್ಟಿದುದೂ ಆದ ನಳನೆಂಬ ಕಲ್ಪವೃಕ್ಷವು ಸಮಸ್ತ ಭೂಮಂಡಲವನ್ನೆಲ್ಲ ವ್ಯಾಪಿಸಿ ಕಾಪಾಡುತ್ತಿರಲು ಪ್ರಜಾಸಮೂಹವು ನಾಶ ವಾಗದಂತೆ ಬೆಳೆಯುತ್ತಿದ್ದಿತು. ೩೧. ನ್ಯಾಯಸಮ್ಮತವಾಗಿ ಸಂಪತ್ತನ್ನೂ, ನಾನಾ ಉಪಾಯಗಳಿಂದ ಶ್ರೇಷ್ಠವಾದ ಧರ್ಮವನ್ನೂ, ಸತ್ಕುಲಕ್ಕೆ ಸೇರಿದ ಸ್ತ್ರೀಯರಿಂದ ಮಕ್ಕಳು ಗಳನ್ನೂ, ಬಾಹುಬಲದಿಂದ ಭಯಂಕರ ಶತ್ರುಗಳ ಭೂಭಾಗವನ್ನೂ ಗಳಿಸುವುದಕ್ಕಾಗಿಯೇ ಸುಖದಾಯಕವಾದ ರಾಜ್ಯವೈಭವವೆಂಬ ಲಕ್ಷ್ಮಿಯನ್ನು ವಿಶಾಲವಾದ ತನ್ನ ಭುಜಗಳ ಸಾಮರ್ಥ್ಯದಿಂದ ಸರ್ವದಾ ಸಲಹುವನು. ೩೨. ಮಹಾರಾಜನ ಶ್ರೇಷ್ಠವಾದ ಯಶಸ್ಸಿನ ಕೌತುಕವೆನ್ನುವುದು ಭೂಲೋಕಕ್ಕೆ ಶೋಭಾಯಮಾನವೂ, ಲೋಕದ ರಾಜಸಮೂಹಕ್ಕೆ ಕಿವಿಯ ಆಭರಣವೂ, ಭೂಮಿಯ ಜನಸಮುದಾಯಕ್ಕೆ ಪ್ರೇಮಪರವೂ, ವಿದ್ವಾಂಸರ ಸಮೂಹಕ್ಕೆ ಆತ್ಮಹಿತವೂ, ಹಸ್ತಿನಿ, ಚಿತ್ತಿನಿ, ಪದ್ಮಿನಿ, ಶಂಕಿನಿ ಎಂಬ ನಾಲ್ಕು ತೆರನಾದ ಸ್ತ್ರೀಯರಿಗೂ ಸಂತೋಷದಾಯಕವೂ, ಕವಿಗಳ ನಾಲಗೆಗೆ ಉತ್ಸವಪ್ರದವೂ, ಕ್ರೂರ ನಾದ ಶತ್ರುವಿಗೆ ಬಲವಾದ ಶಿಲಾಪ್ರಹಾರವೂ ಎನ್ನಿಸುವಂತಿತ್ತು. (ಉಲ್ಲೇಖಾಲಂಕಾರ)

ವಸುಧೆಗಧೀಶನಪ್ಪ ನಳನಧ್ವರ ಸತ್ಫಲದಿಂ ಸುರರ್ಗೆ ಪೆ
ರ್ಚಿಸಿವಡಗಿರ್ತ್ತಿಳಾಭರಮನೊಂದೆ ಭುಜಂ ಧರಿಸಲ್ ಫಣೀಶ್ವರಂ
ಗುಸಿರುಟಿಯಿತ್ತು ಬಾಹುಬಲದಿಂ ರಿಪುವಂ ಬಱಿಕೆಯ್ಕೆ ಧಾತ್ರಿಯು
ಬ್ಬಸವಟಿಯಿತ್ತದೇಂ ಹಿತವನೋ ಭುವನತ್ರಿತಯಕ್ಕೆ ತನ್ನೃಪಂ ೩೩

ಪಸರಿಸಿದಾಜ್ಞೆಯೆಂಬ ಮೊಲೆವಾಲೆಱೆದುತ್ತಮ ಧರ್ಮಮಾರ್ಗದೊಳ್
ಸಸಿನಡಿಯಿಕ್ಕುವಂತೆಸಗಿ ತೋಳ್ಗಳ ತೊಟ್ಟಿಲೊಳಿಟ್ಟು ಮೇದಿನೀ
ಶಿಶುವನನಂತಕೀರ್ತಿವಿಮಳಾಭರಣಂಗಳನಿಕ್ಕಿ ಕೂರ್ತು ಪಾ
ಲಿಸಲದು ಮುದ್ದುಗೆಯ್ವುವನೊಡರ್ಚುವುದಾತನೊಳಾವ ವಿಸ್ಮಯಂ ೩೪

ಬಡಿದೊಡೆ ಖಡ್ಗಮಂ ನಳನೃಪಂ ರಿಪುವಾಗಳೆ ಯುದ್ಧರಂಗದೊಳ್
ಮಡಿವನಿದಿರ್ಚನೆಂಬ ನುಡಿಗೇಳ್ದೊಡೆ ತನ್ನಯ ರಾಜ್ಯಮೆಲ್ಲಮಂ
ಬಿಡುವನಮರ್ಚಿದುಂಗುಟವಲುಂಗಿದೊಡಂಘ್ರಿಯಮೇಲೆ ಬೇಗದಿಂ
ಕೆಡೆವನದೇನಮಾನುಷವೊ ಬಾಹುಬಲಂ ವಿಮಳಾಧಿನಾಥನಾ ೩೫

ನಳನೃಪನಿಂತು ರಾಜ್ಯಸುಖದಿಂದಿರಲೊಪ್ಪುವ ವಾರ್ತೆಯೊಂದು ಭೂ
ವಳಯದೊಳೆಲ್ಲಿಯುಂ ಪಸರಿಸಿತ್ತು ನೆಗಟ್ಟಿ ವಿದರ್ಭದೇಶದ

೩೩. ಭೂಮಿಗೆ ಒಡೆಯನಾದ ನಳಮಹಾರಾಜನ ಯಜ್ಞದ ಸತ್ಫಲದಿಂದ ದೇವತೆಗಳ ಹಿರಿದಾದ ಹಸಿವೆ ಕಡಮೆಯಾಯಿತು. ಅವನ ಒಂದೇ ಭುಜವು ಭೂಭಾರವನ್ನು ಹೊರಲು ಆದಿಶೇಷನ ಉಸಿರು ಉಳಿಯಿತು. ಬಾಹುಬಲದಿಂದ ಶತ್ರುಗಳನ್ನು ಸದೆಬಡಿಯಲು ಭೂಮಿಯ ಉಬ್ಬಸ ನಿವಾರಣೆಯಾಯಿತು. ಆ ಮಹಾರಾಜನು ಮೂರು ಲೋಕಗಳಿಗೂ ಅದೇನು ಹಿತಕಾರಿಯಾಗಿದ್ದನೊ ! ೩೪. ಎಲ್ಲೆಲ್ಲಿಯೂ ವ್ಯಾಪ್ತವಾದ ಆಜ್ಞೆಯೆನ್ನುವ ಮೊಲೆವಾಲನ್ನು ಕುಡಿಸಿ, ಉತ್ತಮವಾದ ಧರ್ಮಮಾರ್ಗದಲ್ಲಿ ನೇರವಾಗಿ ನಡೆಯುವಂತೆ ಮಾಡಿ ತೋಳುಗಳ ತೊಟ್ಟಿಲಿನಲ್ಲಿ ಮಲಗಿಸಿ, ಕೊನೆಯಿಲ್ಲದ ಕೀರ್ತಿಯೆಂಬ ಪವಿತ್ರವಾದ ಒಡವೆಗಳನ್ನು ತೊಡಿಸಿ ಭೂಮಿಯೆಂಬ ಮಗುವನ್ನು ಪ್ರೀತಿಯಿಂದ ಕಾಪಾಡಲು, ಅದು ಆತನನ್ನು ಪ್ರೀತಿಸುವುದರಲ್ಲಿ ಆಶ್ಚರ್ಯವೇನು ? ೩೫. ನಳಮಹಾರಾಜನು ಖಡ್ಗವನ್ನು ಎತ್ತಿ ಹೊಡೆದದ್ದೇ ಆದರೆ ಶತ್ರುವಾದವನು ಯುದ್ಧರಂಗದಲ್ಲಿ ಆಗಲೆ ಸತ್ತು ಬೀಳುವನು. ಎದುರಾಗುವುದಿಲ್ಲವೆಂಬ ಮಾತನ್ನು ಕೇಳಿದ್ದೇ ಆದರೆ ಶತ್ರುವಾದವನು ತನ್ನ ರಾಜ್ಯವನ್ನೆಲ್ಲ ಒಪ್ಪಿಸಿಕೊಡುವನು. ಮೇಲೆ ಬಿದ್ದು ಕಾಲಬೆರಳು ಅಲುಗಿದ್ದೇ ಆದರೆ ಶತ್ರುವಾದವನು ಪಾದಗಳ ಮೇಲೆ ಬಿದ್ದು ಆ ಕೂಡಲೆ ನಮಸ್ಕರಿಸುವನು. ಪವಿತ್ರವಾದ ರಾಜನ ಬಾಹುಬಲವು ಅದೇನು ಅಸಾಮಾನ್ಯವಾದುದೋ ! ೩೬. ನಳಮಹಾರಾಜನು ಹೀಗೆ ರಾಜ್ಯಸುಖದಿಂದ ಇರಬೇಕಾದರೆ, ಸಮ್ಮತವಾದ ಸಂಗತಿಯೊಂದು ಭೂಮಂಡಲದಲ್ಲೆಲ್ಲ ಹರಡತೊಡಗಿತ್ತು. ಸುಪ್ರಸಿದ್ಧವಾದ ವಿದರ್ಭದೇಶಕ್ಕೆ ಅಧಿಕವೆನ್ನಿಸಿದ ಚೆಲುವಾದ

ಗ್ಗಳಿಕೆಯು ಚೆಲ್ವ ಕುಂಡಿನಪುರೇಶ್ವರ ಭೀಮನೃಪಾಲಪುತ್ರಿ ಕೋ
ಮಳೆ ದಮಯಂತಿಯೆಂಬ ಪೆಸರುರ್ವಿಯ ಸರ್ವರ ಕರ್ಣಕೌತುಕಂ ೩೬

ಅಂಚೆಗಳೊಳ್ನಡೆಯುಂ ನಯ
ದಿಂಚರವುಂ ಪಿಕನಿಕಾಯಮರಗಿಳಿ ನುಡಿಯುಂ
ಮಿಂಚುಗಳಾಕೆಯಪಾಂಗ
ಪ್ರಾಂಚಲಮಂ ಬಯಸಿ ಪಡೆದವೆಂಬುದು ಪುಸಿಯೇ ೩೭

ಚರಣವಿಘಾತಿಯುಂ ತನುವಿನಪ್ಪುಗೆಯುಂ ನಸುನೋಟವುಂ ಮುಖಾಂ
ಬುರುಹದಿನೊಲ್ದು ತೂಪಿಱ್ವುದಂ ಪಡೆದಾಗಳೆ ಗಾಡಿ ಪೆರ್ಚುಗುಂ
ತರುಮೊದಲಾಗಿ ಸರ್ವವಿಷಯೇಂದ್ರಿಯಸೌಖ್ಯದಿನಿರ್ಪ ಸದ್ವಿಟರ್
ತರುಣಿಯ ನೇಹಮಂ ಪಡೆದೊಡೇಂ ಕೃತಕೃತ್ಯತೆವೆತ್ತು ತೋರ್ಪರೋ ೩೮

ಶಂಬರವೈರಿಗೆ ಯಾತ್ರಾ
ಸಂಬಳಮುದ್ದಂಡ ವಿಟ ವಿಡಂಬನಮಾಶಾ
ಲಂಬನಮೆನಿಸುವುದು ಮದ
ಸ್ತಂಬೇರಮ ಗಮನೆಯಂದಮೇಂ ವರ್ಣಪುದೋ ೩೯

ಕುಂಡಿನಪುರದ ಒಡೆಯನಾದ ಭೀಮನೃಪಾಲನ ಮಗಳೂ ಕೋಮಲೆಯೂ ಆದ ದಮಯಂತಿಯೆಂಬಾಕೆಯ ಹೆಸರು ಪ್ರಪಂಚದ ಎಲ್ಲರ ಕಿವಿಗೂ ಆಶ್ಚರ್ಯಕರವಾಯಿತು. ೩೭. ಹಂಸೆಗಳು ಒಳ್ಳೆಯ ನಡಿಗೆಯನ್ನೂ ಕೋಗಿಲೆಯ ಸಮೂಹವು ಹಿತವಾದ ಸುಸ್ವರವನ್ನೂ ಅರಗಿಳಿಗಳು ಮಾತನ್ನೂ ಮಿಂಚುಗಳು ಆಕೆಯ ಕಡೆಗಣ್ಣನೋಟದ ತುತ್ತ ತುದಿಯನ್ನೂ ಅಪೇಕ್ಷಿಸಿ ಪಡೆದುವೆಂಬುದು ಸುಳ್ಳಾದೀತೆ ? (ಪ್ರತೀಪಾಲಂಕಾರ). ೩೮. ಗಿಡಮರಗಳೇ ಮೊದಲಾದುವು ಕಾಲನ ಒದೆತವನ್ನೂ, ದೇಹದ ಆಲಿಂಗನವನ್ನೂ, ಓರೆನೋಟವನ್ನೂ. ಮುಖಪದ್ಮದಿಂದ ಮೆಚ್ಚಿ ಮುಕ್ಕಳಿಸುವುದನ್ನೂ ಪಡೆದೊಡನೆಯೇ ಸೌಂದರ್ಯವು ಹೆಚ್ಚುವುದು. (ಇಲ್ಲಿ ಹೇಳಿರುವುವೆಲ್ಲ ದೋಹದ ಕ್ರಿಯೆಗಳು.) (ಎಂದ ಮೇಲೆ) ಎಲ್ಲ ಇಂದ್ರಿಯಾಭಿಲಾಷೆಗಳ ಸುಖದಿಂದಿರುವ ಒಳ್ಳೆಯ ರಸಿಕರು ಆ ಯುವತಿಯ ಸ್ನೇಹವನ್ನು ಪಡೆದದ್ದೇ ಆದರೆ, ಅದೆಷ್ಟು ಕೃತಕೃತ್ಯರಾಗಿ ತೋರಿಬರುವರೋ ಏನೋ ! ೩೯. ಮನ್ಮಥನಿಗೆ. ವಿಜಯಯಾತ್ರೆಯ ಪಾಥೇಯವೂ (ಬುತ್ತಿ), ಉದ್ಧಟರಾದ ವಿಟರ ಕುಚೋದ್ಯದ ಅಪೇಕ್ಷೆಗೆ ಆಧಾರಭೂತವೂ ಎನ್ನಿಸಲು ಆ ಗಜಗಮನೆಯ ಸೌಂದರ್ಯವನ್ನು

ನೀತಿವಿದಂ ಕುಲೀನನಧಿಕಂ ಕುಲವಿಕ್ರಮಧಾರ್ಮಿಕಂ ಮನೋ
ಜಾತನಿಭಂ ಕಲಾಕುಶಲನಿಂಗಿತ ಕೋವಿದನೂರ್ಜಿತಪ್ರಭಂ
ಭೂತಳವಲ್ಲಭಂ ನಳನೃಪಂ ಸಲೆ ಮತ್ಪತಿಯಾತನೆಂದು ಸಂ
ಪ್ರೀತಿಯಿನಾಪ್ತರೊಳ್ ಮಿಗೆ ವಿಚಾರಿಪಳಾಕೆ ಕರಂ ರಹಸ್ಯದೊಳ್ ೪೦

ರೂಪವಿಹೀನರಂ ಕುಟಿಲಬುದ್ಧಿಗಳಂ ಪರಪೀಡೆಯುಳ್ಳರಂ
ಕೋಪಿಗಳಂ ಕುಲಾಧಮರನಸ್ಥಿರರಂ ಸತತಂ ದರಿದ್ರರಂ
ಚಾಪಲಚಿತ್ತರಂ ಮಱೆದು ನಿರ್ಮಿಸಿದುತ್ಕಟಚಿಂತೆಯಿಂದೆ ತ
ತ್ಪಾಪಮಡಂಗಲೆಂದು ಪಡೆದಂ ದಮಯಂತಿಯನಬ್ಜಸಂಭವಂ ೪೧

ಪೊಡವಿಯೊಳೆಲ್ಲರ ಕೈಗ
ನ್ನಡಿ ಶಾಶ್ವತಸೌಕುಮಾರ್ಯಸಂಪದವೈನೂ
ರ್ಮಡಿ ಭಾಗ್ಯದೇೞ್ಗೆ ಸಾಸಿ
ರ್ಮಡಿಯೆಂದು ಪೊಗೞ್ದುದವನಿ ಭೀ[ಮಾತ್ಮಜೆಯಂ] ೪೨

ಸೌಭಾಗ್ಯದ.........
.........ಸಂಪದದ ಬೆಳಸು ಕಾಂತಿಯ ಕಟಕಂ
ಭೂಭುವನದ ಸಿರಿಯೆನಿಸುವು
ದಾ ಭೀಮಾತ್ಮಜೆಯ ಜನ್ಮವೆಲ್ಲಾ ದೆಸೆಯೊಳ್ ೪೩

ಏನೆಂದು ವರ್ಣಿಸುವುದು ! ೪೦. ನೀತಿವಂತನೂ, ಸತ್ಕುಲಜನೂ, ಶ್ರೇಷ್ಠನೂ, ಕ್ಷತ್ರಿಯಕುಲ ಪರಾಕ್ರಮಿಯೂ, ಮನ್ಮಥಸದೃಶನೂ, ಕಲಾನಿಪುಣನೂ, ಪರೇಂಗಿತ ಪ್ರವೀಣನೂ, ಉತ್ತರೋತ್ತರ ಪ್ರಕಾಶವುಳ್ಳವನೂ, ಭೂಮಂಡಲಾಧಿಪನೂ ಆದ ನಳ ಮಹಾರಾಜನೇ ತನ್ನ ಗಂಡನೆಂದು ಆಕೆ (ದಮಯಂತಿ) ಅತ್ಯಂತ ಪ್ರೀತಿಪೂರ್ವಕವಾಗಿಯೂ ಗೋಪ್ಯವಾಗಿಯೂ ತನ್ನ ಆಪ್ತರಲ್ಲಿ ವಿಚಾರವಿನಿಮಯ ಮಾಡಿಕೊಳ್ಳುವಳು. ೪೧. ಕುರೂಪಿಗಳನ್ನು, ದುರ್ಬುದ್ಧಿಯುಳ್ಳವರನ್ನು, ಪರಹಿಂಸಕರನ್ನು, ಕೋಪಿಗಳನ್ನು, ಕುಲಭ್ರಷ್ಟರನ್ನು, ದೃಢಚಿತ್ತರಲ್ಲದವರನ್ನು, ಸರ್ವದಾ ದರಿದ್ರರಾದವರನ್ನು, ಚಂಚಲಮನಸ್ಕರನ್ನು ಮರೆತು ಸೃಷ್ಟಿಸಿದ ಉತ್ಕಟವಾದ ಚಿಂತೆಯಿಂದ ಕೂಡಿ ಆ ಪಾಪವನ್ನು ಹೋಗಲಾಡಿಸಬೇಕೆಂದು ಬ್ರಹ್ಮನು ದಮಯಂತಿಯನ್ನು ಪಡೆದನು. ೪೨. ಭೀಮರಾಜನ ಮಗಳಾದ ದಮಯಂತಿಯನ್ನು ಪೃಥ್ವಿಯಲ್ಲಿ ಎಲ್ಲರ ಕೈಗನ್ನಡಿಯೆಂದೂ ಚಿರವಾದ ಸೌಕುಮಾರ್ಯ ಸೌಭಾಗ್ಯವು ಐನೂರು ಮಡಿಯೆಂದೂ, ಸಂಪತ್ತಿನ ಮೇಲ್ಮೆಯು ಸಾವಿರ ಮಡಿಯೆಂದೂ ಭೂಮಂಡಲವೇ ಕೊಂಡಾಡಿತು. ೪೩. ಆ ಭೀಮರಾಜನ ಮಗಳಾದ ದಮಯಂತಿಯ ಜನನವು ಎಲ್ಲಾ ದಿಕ್ಕುಗಳಲ್ಲಿಯೂ...ಸಂಪದದ ಬೆಳಸೂ

ಇಂತು ಸಮಸ್ತ ಸದ್ಗುಣಗಣಂ ದಮಯಂತಿಗೆ ಪೆರ್ಚಿರಲ್ ದಿಶಾ
ಪ್ರಾಂತದೊಳಾರ್ತು ಕೇಳ್ದು ನಳಭೂಪತಿಯಂದುಮೊದಲ್ನರಂ ಕರಂ
ಕಂತುಶರಾಗ್ನಿಗಳ್ಕಿ ಪೊಸಪೂಗೊಳದೊಳ್ ವನದೊಳ್ ತೊಳಲ್ದು ತ
ಚ್ಚಿಂತೆಯೊಳಿರ್ಪನಾರಱಿವರಾತನ ಚಿತ್ತದ ತಾಪದೇಳ್ಗೆಯಂ ೪೪

ಅಮರ್ದನಮರ್ತ್ಯನಲ್ಲದುಣಲಾರಱಿವರ್ ಧರೆಯೆಲ್ಲಮಂ ಪರಾ
ಕ್ರಮವೆಸದಾಳ್ವ ಭೂಭುಜಕುಲೋದ್ಭವನಾ ದಮಯಂತಿಗಾತನೇ
ರಮಣನೆನಿಪ್ಪ ನಾಣ್ನುಡಿಗಳೆಣ್ದೆಸೆಯೊಳ್ ಬಳೆಯುತ್ತಿ ಕೇಳ್ದು ವಿ
ಕ್ರಮ ನಳನಾಕೆಯಂ ಬಯಸಿ ಬಣ್ಣಿಸುವಂ ಮನದೊಳ್ ನಿರಂತರಂ ೪೫

ವಿಮಳಾಂಭೋರುಹಷಂಡದೊಳ್ ನೆಲಸಿ ಮೌನಂ ಮುತ್ತಿ ತದ್ಧ್ಯಾನ ಚಿ
ತ್ರಮನಿಂಬಾಗಿಸಿಯನ್ನಪಾನಸುಖಮಂ ಬೇಕೆನ್ನದಂಗಂ ಬೆಳ
ರ್ತೆಮೆಯಿಕ್ಕಲ್ ಮಱೆದಂಗಜಾಗ್ನಿವಶವಾಗಿರ್ದಾವಗಂ ತನ್ನೃಪಂ
ದಮಯಂತೀವ್ರತಮಂ ಸಮಾಚರಿಸುವಂ ಸದ್ಬ್ರಹ್ಮಚಾರಿತ್ವದಿಂ ೪೬

ಇನ್ನೊಮ್ಮೆ ಸುಡುವೊಡಂಗಜ
ನಂ ನೀಲಗ್ರೀವ ನಿನಗೆ ಭಾಳಾಕ್ಷಿಯ ಕಿ

ಕಾಂತಿಯ ಸಮೂಹವೂ ಭೂಲೋಕದ ಸಂಪತ್ತೂ ಎನ್ನಿಸಿತು. ೪೪. ಈ ರೀತಿಯಾಗಿ ದಮಯಂತಿಯ ಸಕಲ ಸದ್ಗುಣಸಮೂಹವೂ ದಿಗ್ದಿಗಂತದವರೆಗೆ ವ್ಯಾಪಿಸಿರಲು, ನಳ ಮಹಾರಾಜನು ಆಸೆಪಟ್ಟು ಕೇಳಿ ಅಂದು ಮೊದಲಾಗಿ ವಿಶೇಷವಾಗಿ ಮನ್ಮಥನ ಬಾಣಗಳ ಬೆಂಕಿಗೆ ಬೆದರಿ ಹೊಸದಾದ ಹೂಗೊಳದಲ್ಲಿಯೂ ವನದಲ್ಲಿಯೂ ಅಲೆದಲೆದು ಆ ಚಿಂತೆಯಲ್ಲಿಯೇ ಮಗ್ನನಾಗಿರುವನು. ಆತನ ಮನೋವ್ಯಥೆಯ ಆಧಿಕ್ಯವನ್ನು ಯಾರುತಾನೆ ತಿಳಿಯಬಲ್ಲರು ? ೪೫. ಅಮೃತವನ್ನು ದೇವತೆಗಳು ಹೊರತು (ಇತರರು) ಯಾರುತಾನೆ ಸೇವಿಸಲು ಬಲ್ಲರು ? ಶೌರ್ಯಶಾಲಿಯಾದ ಆಳುತ್ತಿರುವ ಕ್ಷತ್ರಿಯಕುಲೋತ್ಪನ್ನನಾದ ಆತನೇ (ನಳನೇ) ದಮಯಂತಿಗೆ ಗಂಡನೆಂಬ ಗಾದೆ ಎಂಟು ದಿಕ್ಕುಗಳಲ್ಲಿಯೂ ಹರಡುತ್ತಿರಲು, ಅದನ್ನು ಕೇಳಿ ಪರಾಕ್ರಮಿಯಾದ ನಳನು ಆಕೆಯನ್ನು ಅಪೇಕ್ಷಿಸಿ ಮನಸ್ಸಿನಲ್ಲಿಯೇ ಸರ್ವದಾ ವರ್ಣಿಸಿಕೊಳ್ಳುವನು. ೪೬. ಪವಿತ್ರವಾದ ತಾವರೆಗಳುಳ್ಳ ಕೊಳದಲ್ಲಿ ಮೌನವು ಆವರಿಸಿಕೊಂಡು ನೆಲಸಿ, ಆ ಧ್ಯಾನಮಗ್ನವಾದ ಮನಸ್ಸಿಗೆ ಹಿತವನ್ನುಂಟು ಮಾಡಲು, ಅನ್ನ ನೀರುಗಳ ಸೌಖ್ಯವನ್ನೂ ನಿರಾಕರಿಸಿ ಶರೀರವು ಬಿಳಿಚಿಕೊಂಡು ಎವೆ ಮುಚ್ಚುವುದನ್ನೇ ಮರೆತು, ಆ ಮಹಾರಾಜನು ಯಾವಾಗಲೂ ಮನ್ಮಥಾಗ್ನಿವಶನಾಗಿ ಶ್ರೇಷ್ಠವಾದ ಬ್ರಹ್ಮಚರ್ಯತ್ವದಿಂದ ದಮಯಂತೀವ್ರತವನ್ನು ಚೆನ್ನಾಗಿ ಪರಿಪಾಲಿಸುವನು. ೪೭. ಎಲೈ ನೀಲಕಂಠನೇ ! ಮನ್ಮಥನನ್ನು ಇನ್ನೊಮ್ಮೆ ಸುಡಲು ನಿನಗೆ ಹಣೆಗಣ್ಣಿನ ಬೆಂಕಿಯೆಲ್ಲಿದೆಯೆಂದು ಹೇಳಬೇಡ. ನನ್ನ ತಾಪಾಗ್ನಿಯನ್ನು (ನಿನಗೆ) ಸಂತೋಷವಾಗಿ

ಚ್ಚಿನ್ನೆಲ್ಲಿಯುಮೆನ್ನದಿರಿಂ
ವೆಂ ನಲವಿಂ ಕಡನನೆನ್ನ ತಾಪಾನಲನಂ ೪೭

ವ॥ ಅಂತಾದನನಾಪ್ತರಱಿದು ಮಱೆಯುದಂತಿರೆ

ಲಲನೆಯರುನ್ನತಸ್ತನನಿಕುಂಜದೊಳುತ್ಕಟಪೂರ್ಣ ಯೌವನೋ
ಜ್ವಲ ಜಲತೀರದೊಳ್ ಗುರುನಿತಂಬ ಶಿಲೋಚ್ಚಯದೊಳ್ ಸುಧಾಧರಾ
ನಿಲ ಪರಿಸೇವೆಯೊಳ್ ಸುಖಿಸಮಾಧಿಯೊಳಿರ್ಪ ತಪಸ್ವಿ ಕಾಮನಂ
ಗೆಲಲಱಿವಂತೆ ಪಿಕ್ಕವರದೆಂ ಗೆಲಲಾರ್ಪರೆ ಕೋಟ್ಯುಪಾಯದಿಂ ೪೮

ವ॥ ಅದನಱಿದು

ನೆಱೆದಿರ್ದ ವಿರಹದುರಿಯುಂ
ಪೆಱರಱಿಯದ ತೆಱದಿನೊಲ್ದು ಬಱಿಯೋಲಗದೊಳ್
ಮೆಱೆದಿರ್ಪಂ ಗದ್ದುಗೆಯೊಳ್
ಮಱೆಮಾಳ್ಪಂ ತನ್ನ ಹೃದಯತಾಪದ ರೂಪಂ ೪೯

ಇರುತಿರಲಾಮ್ರಶಾಖೆಯೆಡೆಯೊಳ್ ಮಱಿಗೋಗಿಲೆ ಸಣ್ಣ ರಾಗದಿಂ
ಕರೆಯೆ ಕುಜವ್ರಜಂ ತಳಿರವಸ್ತ್ರಮನೀಯೆ ಲತಾಳಿ ಪುಷ್ಪಮಂ
ಸುರಿಯೆ ಪದಂಗಳೊಳ್ ಕಳಮಹಂಸೆಗಳೊಲ್ದಿದಿರೇಱೆ ಬಂದನ
ಚ್ಚರಿಯೆನೆ ಚೈತ್ರವಲ್ಲಭನುದಗ್ರಹಿಮಾಗಮನಿತ್ಯದುರ್ಲಭಂ ೫೦

ಸಾಲ ಕೊಡುವೆನು. ವ॥ ಹಾಗಾದವನನ್ನು ಹಿತರಾದವರು ತಿಳಿದು ಮರೆಯದಂತಿರಲು, ೪೮. ಸುಖಸಮಾಧಿಮಗ್ನನಾಗಿರುವ ತಪಸ್ವಿಯಾದ ಕಾಮನನ್ನು ಉಬ್ಬಿದ ಮೊಲೆಗಳ ಮಂಟಪದಲ್ಲಿ, ಅತ್ಯಧಿಕವಾದ ತುಂಬುಹರೆಯದ ಕಾಂತಿಯುಕ್ತವಾದ ನೀರತಡಿಯಲ್ಲಿ, ತೋರತೊಡೆಗಳ ಶಿಲಾರಾಶಿಗಳಲ್ಲಿ (ಕೃತಕಪರ್ವತದಲ್ಲಿ)ಅಮೃತಸದೃಶವಾದ ತುಟಿಯ ಗಾಳಿಸೇವೆಯಲ್ಲಿ ಸ್ತ್ರೀಯರು ಜಯಿಸಲು ತಿಳಿದಂತೆ ಇತರರು ಕೋಟಿ ತೆರನಾದ ಉಪಾಯ ಗಳಿಂದ (ಆತನನ್ನು) ಜಯಿಸಲು ಬಲ್ಲರೆ ? ವ॥ ಅದನ್ನು ತಿಳಿದು ೪೯. ಮೈತುಂಬಿದ್ದ ವಿರಹಾಗ್ನಿಯನ್ನು ಇತರರು ತಿಳಿಯದಂತೆ ಪ್ರೀತಿಪೂರ್ವಕವಾಗಿ ರಾಜಸಭೆಯಲ್ಲಿ ಸಿಂಹಾ ಸನದ ಮೇಲೆ ಕೇವಲ ವಿರಾಜಿಸುತ್ತಿದ್ದನು. ತನ್ನ ಹೃದಯದ ಬೇಗೆಯ ಸ್ವರೂಪವನ್ನು ಮರೆಮಾಡಿಕೊಳ್ಳುವನು. ೫೦ ಹೀಗಿರುತ್ತಿರಬೇಕಾದರೆ, ಮಾವಿನ ಕೊಂಬೆಗಳೆಡೆಯಲ್ಲಿ ಕೋಗಿಲೆಯ ಮರಿ ಮೆಲ್ಲನೆ ಕುಹೂ ಸ್ವರವನ್ನುಂಟುಮಾಡಲು, ಮರಗಳ ತಂಡವು ಚಿಗುರಿನ ಬಟ್ಟೆಬರೆಗಳನ್ನು ನೀಡಲು, ಬಳ್ಳಿಗಳ ಸಮೂಹವು ಹೂಗಳನ್ನು ಸುರಿಯಲು, ರಾಜಹಂಸಗಳು (ಕಲಹಂಸೆ ?) ಒಲಿದು ಎದುರುಗೊಳ್ಳಲು ಹಿಮಾಗಮನಕ್ಕೆ ಎಂದೆಂದಿಗೂ

ಕುಸುಮಮಯಂ ವನಂ ಸುರಭಿಗಂಧಮಯಂ ಮಲಯಾನಿಲಂ ಸುಧಾ
ರಸಮಯಮಂಬು ಕೋರಕಮಯಂ ನವಚೂತಮನೂನಪಲ್ಲವ
ಪ್ರಸರಮಯಂ ಕುಜಂ ಪಿಕನಿನಾದಮಯಂ ದೆಸೆ ಕಾಮಭೋಗಮಾ
ನಸಮಯಮಾಯ್ತು ಕಾಮುಕಚಯಂ ನೆಲೆಗೊಂಡ ವಸಂತಮಾಸದೊಳ್ ೫೧

ಕೆಂದಳಿರಂಬರಂ ಮುಗುಳ ಹಾರಮರಲ್ಗಳ ಕಂಕಣಂ ಲಸ
ತ್ಕುಂದದ ಕುಂಡಲಂ ಮಿಸುಪ ಮಲ್ಲಿಗೆಮಾಲೆ ನವೀನಪಾಟಲೀ
ವೃಂದದ ಬಾಸಿಗಂ ಮೃದುಪರಾಗದ ಚಂದನವೊಪ್ಪೆ ಬಂದನಾ
ನಂದದಿನೊಲ್ದು ಚೈತ್ರನೃಪನಂಗಜದೂತಸಮೇತನಾಕ್ಷಣಂ ೫೨

ಪೂಗೊಳನಾವಗಂ ತಿಳಿಯೆ ಸಂಪಗೆ ಪುಷ್ಪಿತೆಯಾಗೆ ನಲ್ಮೆಯಿಂ
ಕೋಗಿಲೆ ನುಣ್ಚರಂಗರೆಯೆ ಪಾದರಿಯೊಳ್ ನಲಿದಾಡೆ ತುಂಬಿಗಳ್
ಭೋಗಿಗಳುತ್ಸವಂ ಮೆಱೆಯೆ ಕಾಮನ ಡಾವರವೊಪ್ಪೆ ಮಾವು ಕೈ
ವೋಗೆ ರತೇಚ್ಛೆಯುಗ್ಗಲಿಸೆ ಚಂದ್ರದ ಚೈತ್ರಋತುಪ್ರವೇಶದೊಳ್ ೫೩

ಜಾತಿ ವಿಜಾತಿಯಂತಡಗಿರಲ್ ನಗುವಂದದಿನೆಯ್ದೆ ಚಂಪಕಂ
ಪೂತುದು ಕಾಣ್ಕೆಯಂ ಮಧುಸಖಂಗೊಲವಿಂ ಕುಡುವಂತೆ ಮಾವುಗಳ್

ಅಲಭ್ಯನಾದ ಚೈತ್ರದೊಡೆಯನು ಆಶ್ಚರ್ಯವುಂಟುಮಾಡುವಂತೆ ಬಂದನು. ೫೧. ಬೀಡು ಬಿಟ್ಟ ವಸಂತಮಾಸದಲ್ಲಿ ವನವು ಪುಷ್ಪಮಯವಾಯಿತು ; ಮಲಯಮಾರುತವು ಸುಗಂಧ ಮಯವಾಯಿತು ; ನೀರು ಅಮೃತದಂತೆ ಸವಿಯಾಯಿತು ; ಹೊಸಮಾವು ಮೊಗ್ಗುಗಳಿಂದ ನಿಬಿಡವಾಯಿತು ; ಗಿಡಗಳು ಕುಂದಿಲ್ಲದಂತೆ ದಟ್ಟೈಸಿದ ಚಿಗುರುಗಳಿಂದ ಆವೃತವಾಯಿತು; ದಿಕ್ಕುಗಳು ಕೋಗಿಲೆಯ ಕೂಗಿನಿಂದ ತುಂಬಿಕೊಂಡಿತು ; ಕಾಮುಕರ ಸಮೂಹವು ಕಾಮ ಭೋಗಾಸಕ್ತವಾಯಿತು. ೫೨. ಕೆಂಪಾದ ಚಿಗುರಿನ ವಸ್ತ್ರವೂ, ಮೊಗ್ಗುಗಳ ಹಾರವೂ, ಹೂಗಳ ಕಂಕಣವೂ ಶೋಭಾಯಮಾನವಾದ ಮೊಲ್ಲೆಯ ಕಿವಿಯೋಲೆಯೂ, ಮಿರುಗುವ ಮಲ್ಲಿಗೆಯ ಮಾಲೆಯೂ, ಹೊಸದಾದ ಪಾದರೀಸಮೂಹದ ಬಾಸಿಗವೂ, ಮೃದುವಾದ ಪುಷ್ಪಧೂಳಿಯ ಲೇಪನವೂ ಹೊಂದಿಕೊಂಡಂತಿರಲು ಮನ್ಮಥದೂತ ಸಮೇತನಾಗಿ ಆ ಕೂಡಲೆ . ಚೈತ್ರಮಹಾರಾಜನು ಸಂತೋಷದಿಂದ ಮೆಚ್ಚಿಬಂದನು. ೫೩. ಮನೋಹರ ವಾದ ಚೈತ್ರಋತುವಿನ ಆಗಮನದಿಂದ ಹೂಗೊಳವು ಸರ್ವದಾ ಸ್ವಚ್ಛವಾಯಿತು. ಸಂಪಗೆಯು ಪುಷ್ಪಮಯವಾಯಿತು. ಕೋಗಿಲೆಯು ಪ್ರೀತಿಯಿಂದ ಮೃದುಧ್ವನಿಯನ್ನು ಮಾಡಿತು. ದುಂಬಿಗಳು ಪಾದರಿಹೂಗಳಲ್ಲಿ ನಲಿದಾಡಿದುವು. ರಸಿಕರ ವೈಭವವು ವಿರಾಜಿಸಿತು. ಮನ್ಮಥನ ಹಾವಳಿ ಅನುವಾಯಿತು. ಮಾವುಗಳು ಕುಡಿಯಿಟ್ಟುವು. ಸಂಭೋಗಾಪೇಕ್ಷೆಯು ಹೆಚ್ಚಾಯಿತು. ೫೪. ಶಿಶಿರಮಹಾರಾಜನಿಗೆ ಯಮಸ್ವರೂಪಿಯಾದ ವಸಂತಮಾಸದಲ್ಲಿ ಜಾಜಿಯು ವಿಜಾತಿಯೆನ್ನಿಸಿ ಅಡಗಿಕೊಂಡಿರಲು, ಅದನ್ನು ನೋಡಿ

ಕಾತವು ಜೀವನಂ ಬಯಸಲೆಲ್ಲಿಯುದೇದು ಕದಂಬಸಂಕುಳಂ
ಬೀತುದು ಸಂತತಂ ಶಿಶಿರಭೂಪಕೃತಾಂತ ವಸಂತಮಾಸದೊಳ್ ೫೪

ವನದ ಸಿರಿ ವಿರಹಿಜನದುರಿ
ಮನಸಿಜನೈದಂಬಿನಲರ್ಗೆ ಹರವರಿ ಶಿಶಿರ
ಕ್ಕನುದಿನದರಿಯೆನಿಸಿರ್ಪಾ
ತನ ಪರಿ ಪೊಸತಾಯ್ತು ಚೈತ್ರಭೂಪಾಲಕನಾ ೫೫

ಕುಂದೆ ನದೀಜಲಂ ಪರಿಯೆ ನಾಲ್ದೆಸೆಯೊಳ್ ಮೃಗತೃಷ್ಣೆ ಪರ್ವೆ ಪೆ
ರ್ಚಿದವೆ ವಹ್ನಿ ಸುಟ್ಟುರೆ ಕವಲ್ತಿರೆ ದುವ್ವೆವೊಲಾಗೆ ಧೂಳಿ ಕಾ
ಮಂ ದಯೆಗೆಟ್ಟು ಕಾಮುಕರನರ್ದಿಸಿ ನೋಡಲುದಗ್ರತೇಜದಿಂ
ಬಂದುದು ಚೈತ್ರಮಾಸಮನುರಾಗವಿಕಾಸವತಿಪ್ರಕಾಶದಿಂ ೫೬

ಎಳದಳಿರ್ವಾಸು ನೀರಜದಳವ್ಯಜನಂ ಘನಸಾರದಂಜನಂ
ಮಲಯಜದಣ್ಪು ಮಾಮರನ ತಣ್ಪು ರಹಸ್ಯದ ಮಾತು ಕಟ್ಟುವೂ
ಗಳ ತಲೆಗಿಂಬು ಲಾಮಚದ ಚಪ್ಪರವಿಲ್ಲದೆ ಚೈತ್ರರಾತ್ರಿಯುಂ
ಕಳೆವರದೆಂತು ಕಾಮುಕರನಂಗನ ಬಾಣದ ಕಿರ್ಚು ಪೆರ್ಚಿರಲ್ ೫೭

ನಗುವಂತೆ ಸಂಪಗೆಯೆಲ್ಲವೂ ಹೂಬಿಟ್ಟಿತು, ಮಧುಮಿತ್ರನಿಗೆ ಕಾಣಿಕೆಯನ್ನು ನೀಡುವಂತೆ ಮಾವುಗಳು ಕಾಯಿಬಿಟ್ಟುವು. ತಾಳೆಮರಗಳು ಬದುಕುವ ಬಗೆಯಾದರೂ ಹೇಗೆ ಎಂಬುದಾಗಿ ಒಣಗಿನಿಂತುವು. ೫೫. ವನದ ಸಿರಿ ವಿರಹಿಗಳಿಗೆ ಉರಿಯೂ, ಮನ್ಮಥನ ಪಂಚಬಾಣಗಳ ಪುಷ್ಪಕ್ಕೆ ಆಶ್ರಯವೂ, ಶಿಶಿರನಿಗೆ ಪ್ರತಿನಿತ್ಯವೂ ಶತ್ರುವೂ ಎನ್ನಿಸಿರಲು ಚೈತ್ರದೊಡೆಯನಾದ ಆತನ ರೀತಿ ಹೊಸದಾಯಿತು. (ಈ ಪದ್ಯದಲ್ಲಿ ಕವಿ ಪ್ರಯೋಗಿಸಿರುವ 'ಸಿರಿ, ಉರಿ, ಹರವರಿ, ಅರಿ' ಎಂಬ ಶಬ್ದಗಳ ಅಂತ್ಯಪ್ರಾಸಾಕ್ಷರಗಳು ಶಬ್ದಮಾಧುರ್ಯವನ್ನು ಹೆಚ್ಚಿಸುತ್ತವೆ.) ೫೬. ನದೀಜಲವು ಕಡಮೆಯಾಗಲು, ನಾಲ್ಕೂ ದಿಕ್ಕುಗಳಲ್ಲಿ ಮರೀಚಿಕೆ ಪಸರಿಸಲು, ದಾವಾಗ್ನಿ ಹೆಚ್ಚಿ ಹಬ್ಬಲು, ಸುಂಟರಗಾಳಿ ಕವಲೊಡೆಯಲು, ಧೂಳು ಧೂಮ್ರ (ದುವ್ವೆ ?) ದಂತಾಗಲು ಮನ್ಮಥನು ನಿರ್ದಯದಿಂದ ಕಾಮುಕರನ್ನು ಬಡಿದು ನೋಡಲೆಂಬಂತೆ ಚೈತ್ರಮಾಸವು ಪ್ರೀತಿಸುವಂತೆ, ಅತ್ಯಂತ ಪ್ರಕಾಶದಿಂದಲೂ, ಉಜ್ವಲವಾದ ತೇಜಸ್ಸಿನಿಂದಲೂ ಆಗಮಿಸಿತು. ೫೭. ಮನ್ಮಥನ ಬಾಣದ ಕಿಚ್ಚು ಹೆಚ್ಚಾಗಿರಲು ಕಾಮುಕರು ಎಳೆಯ ಚಿಗುರಿನ ಹಾಸುಗೆ, ತಾವರೆಎಲೆಯ ಬೀಸಣಿಗೆ, ಕರ್ಪೂರದ ಅಂಜನ, ಗಂಧದಲೇಪನ, ಮಾವಿನಮರದ ತಂಪು, ಗೋಪ್ಯವಾದ ಮಾತು, ಕಟ್ಟಿದ ಹೂವುಗಳ ತಲೆದಿಂಬು, ಲಾಮಂಚದ ಚಪ್ಪರವಿಲ್ಲದೆ ಚೈತ್ರರಾತ್ರಿಯನ್ನು ಹೇಗೆ ತಾನೆ

ಕಾದಲರನೆಚ್ಚೊಡೆಲ್ಲಂ
ಪೋದುವು ಪೊದೆಯಂಬಿವೆಂದು ಮನಸಿಜಸುಭಟಂ
ಪಾದರಿಯರಲಂಬುಗಳಂ
ಸಾದರದಿಂ ವನದೊಳಾಗಳೊದಗಿಸಿಕೊಂಬಂ ೫೮

ಮದನನರಮನೆಗೆ ಬಂಟರ್
ಬದಗರ್ ವಿಟರೆಂದು ಶುಕಪಿಕಂಗಳ ರವದಿಂ
ಬೆದಱಲ್ ಸಾಱಿಸುವಂತೆ
ಯ್ದಿದನವನಿಗೆ ಚೈತ್ರವಲ್ಲಭಂ ನಸುನಗುತಂ ೫೯

ಮೇದಿನಿಯ ವಿಟಜನಕ್ಕರ
ಸಾದಂ ಸ್ಮರನೆಂದು ತನ್ನ ಮನದುತ್ಸವದಿಂ
ಭೂದೇವತೆ ಸುರರಱಿಯ
ಲ್ಕಾದಂ ಭುಜವೆತ್ತಿದಂತೆ ಸುಂಟುರೆಯೆಸೆಗುಂ ೬೦

ಬಂದ ವಸಂತನಿಂದೆ ಪರಿಣಾಮಮಗುರ್ವಿಸೆ ಕೂಡಿ ತನ್ನೃಪಾ
ಲಂ ದಮಯಂತಿಯಂ ನೆನೆವ ಕಾರಣದಿಂ ಮದನಾಗ್ನಿ ತನ್ನ ಹೃ
ನ್ಮಂದಿರದೊಳ್ ಧಗದ್ಧಗಿಸೆಯೇತೆಱದಿಂ ಶಿಶಿರೋಪಚಾರದಿಂ
ನಂದಿಸಲಾರ್ತುದಿಲ್ಲದಱಿಂ ಶಂಕಿಸುಗುಂ ಸಖಿಗಳ್ ನಿರಂತರಂ ೬೧

ಕಳೆಯಬಲ್ಲರು ? ೫೮. ಪ್ರಣಯಿಗಳ ಮೇಲೆ ಪ್ರಯೋಗಿಸಲು ಬತ್ತಳಿಕೆಯಲ್ಲಿದ್ದ ಬಾಣಗಳೆಲ್ಲ ಆಗಿಹೋದುವೆಂದು ವೀರನಾದ ಮನ್ಮಥನು ಅತ್ಯಂತ ಪ್ರೀತಿಯಿಂದ ವನದಲ್ಲಿ ಪಾದರಿಯ ಹೂಬಾಣಗಳನ್ನು ಆಗ ದೊರಕಿಸಿಕೊಳ್ಳುವನು. ೫೯. ಮನ್ಮಥನ ಅರಮನೆಗೆ ವಂಚಕರಾದ ವಿಟರು ಬಂಟರೆಂದು ಗಿಳಿ ಕೋಗಿಲೆಗಳ ಶಬ್ದದ ಮೂಲಕ ಹೆದರಿಸುವಂತೆ ಸಾರಿಬರುವನೋ ಎಂಬಂತೆ ಚೈತ್ರದೊಡೆಯನು ನಸುನಗುತ್ತ ಭೂಮಿಗೆ ಆಗಮಿಸಿದನು. ೬೦. ಭೂಲೋಕದ ವಿಟಜನಗಳಿಗೆ ಮನ್ಮಥನು ರಾಜನಾದನೆಂದು ಭೂದೇವತೆ ಮತ್ತು ದೇವತೆಗಳು ತಿಳಿಯುವಂತೆ ಸುಂಟರಗಾಳಿಯು ವಿಶೇಷವಾಗಿ ಹೆಗಲೆತ್ತಿತೋ ಎಂಬಂತೆ ಮನೋಮುದದಿಂದ ತೋರಿಬಂದಿತು. ೬೧. ಬಂದ ವಸಂತಋತುವಿನಿಂದ (ಆದರ) ಪ್ರಭಾವವು ಹೆಚ್ಚಾಗಲು, ಆ ಮಹಾರಾಜನು ದಮಯಂತಿಯನ್ನು ಸ್ಮರಿಸುವ ಕಾರಣದಿಂದ ಆತನ ಹೃದಯಮಂದಿರದಲ್ಲಿ ಮದನಾಗ್ನಿ ಧಗಧಗಿಸಲು, ಯಾವ ರೀತಿಯಿಂದಲೂ ಶೈತ್ಯೋಪಚಾರದಿಂದ ನಿವಾರಿಸಲು ಅಸಾಧ್ಯವಾದುದರಿಂದ ಸಖಿಯರು

ದೂರದೊಳಿರ್ದ ಕಾಮಿನಿಯನಾಸೆವಡುತ್ತತಿ ತಾಪದೇಱ್ಗೆಯಿಂ
ದೂರಿಸಿ ಸುಯ್ಯಲೇಕೆ ವಿರಹವ್ಯಥೆಯಿಂದವೆನುತ್ತೆ ಸಂತತಂ
ಪೌರಜನಂ ವಿಡಂಬಿಸುಗುಮೆಂದಱಿದುಂ ಮಱೆದುಂ ಸಮಂತು ಧಾ
ತ್ರೀರಮಣಂ ದಿನಂಗಳಿನಿತಂ ಕಳೆವಂ ನಿಜಧೈರ್ಯವೃತ್ತಿಯಿಂ ೬೨

ಏತೆಱದಿಂ ಮೃಗಾಕ್ಷಿ ದಮಯಂತಿಯ ಸಂಗಮದಪ್ಪುದೆಂದು ನಿ
ಶ್ಚೇತನನಾಗಿ ರಾಜ್ಯಸುಖಮಂ ಬಗೆಗೊಳ್ಳದೆ ತನ್ನ ಬಾೞ್ಕೆಯಿ
ನ್ನೇತಱದೆಂಬ ಮೆಯ್ಮಱಕದಿಂ ನವಚಿತ್ರಪಟಂಬೊಲಿರ್ದನಾ
ಭೂತಳವಲ್ಲಭಂ ವಿರಹವಿಸ್ಮೃತಿ ಕೇವಳಮೇ ಧರಿತ್ರಿಯೊಳ್ ೬೩

ಇಂತತಿತಾಪದಿಂ ನಳನೃಪಂ ದಿನಮಂ ಕಳೆಯುತ್ತಮೊರ್ಮೆ ನಿ
ಶ್ಚಿಂತ ಮನಸ್ವಿಯಂತೆ ಮಱೆದೋಲಗಶಾಲೆಗೆ ಬಂದನಾಗಳ
ತ್ಯಂತ ಭಯಂಕರಾಕೃತಿಯ ಬೇಂಟೆಯ ನಾಯಕರಾರ್ತು [ನಿಂದು] ಭೂ
ಕಾಂತನೊಳೊಲ್ದು ಬಿನ್ನವಿಸಿದರ್ ಮೃಗಸಂಕುಳಬಾಧೆಯಂ ೬೪

ವ॥ ಅದೆಂತೆನೆ

ಮರೆ ಹುಲಿ ಪಂದಿ ಪೆರ್ಗರಡಿ ತೋಳನಸಂಕೆಯ ಪುಲ್ಲೆವಿಂಡು ಬೆ
ಳ್ಗೆರಳೆ ಕಱುತ್ತ ಕೊಂಡಗುಱಿಯೆಯ್ಯಮೃಗಂ ಕಡುಕೊರ್ಬಿ ಕಾಸನಾಂ

ಸರ್ವದಾ ಚಿಂತಾಕ್ರಾಂತರಾಗಿರುವರು. ೬೨. ದೂರದಲ್ಲಿರುವ ಪ್ರಣಯಿಯನ್ನು ಆಸೆ ಪಟ್ಟು ಅತಿತಾಪದ ಆಧಿಕ್ಯದಿಂದ ನಿಂದಿಸಿ, ವಿರಹವ್ಯಥೆಯಿಂದ ನಿಟ್ಟುಸಿರನ್ನು ಬಿಡುವುದಾದರೂ ಏಕೆ ?' ಎಂಬುದಾಗಿ ಪುರಜನರು ಸರ್ವದಾ ಹಂಗಿಸುವರು ಎನ್ನುವುದನ್ನು ಅರಿತೂ, ಅದನ್ನು ಮರೆತು ಭೂಪಾಲನು ಈ ದಿನಗಳನ್ನೆಲ್ಲ ತನ್ನ ಧೈರ್ಯಸ್ವಭಾವದಿಂದ ಕಳೆಯುವನು. ೬೩. ಹರಿಣಾಕ್ಷಿಯಾದ ದಮಯಂತಿಯ ಸಮಾಗಮವು ಯಾವ ರೀತಿಯಾಗಿ ಆಗುವುದೆಂದು ತಟಸ್ಥನಾಗಿ ರಾಜ್ಯಹಿತವನ್ನು ಲಕ್ಷಿಸದೆ ತನ್ನ ಬದುಕಾದರೂ ಇದೇತಕ್ಕೆ ಎಂಬ ಮೈಯ ಕಳವಳದಿಂದ ಆ ಮಹಾರಾಜನು ನೂತನವಾದ ಚಿತ್ರಪಟದಂತಿದ್ದನು. ಭೂಮಂಡಲದಲ್ಲಿ ಅಗಲಿಕೆಯ ಮೈಮರೆವು ಸಾಮಾನ್ಯವಾದುದೇ ? ೬೪. ಈ ರೀತಿ ಅತಿಬೇಗೆಯಿಂದ ನಳಮಹಾರಾಜನು ದಿನಗಳನ್ನು ಕಳೆಯುತ್ತ ಒಮ್ಮೆ ನಿರಾತಂಕನಂತೆ ಅಪ್ಪಿತಪ್ಪಿ ಆಸ್ಥಾನಮಂಟಪಕ್ಕೆ ಬಂದನು. ಆಗ ಅತ್ಯಂತ ಭಯಂಕರಾಕಾರದ ಬೇಟೆಯ ನಾಯಕರು ವಿಕ್ರಮದಿಂದ ನಿಂತು ಮೃಗಸಮೂಹದ ದುಷ್ಟಬಾಧೆಯನ್ನು ಮಹಾರಾಜನಲ್ಲಿ ಪ್ರೀತಿಯಿಂದ ವಿಜ್ಞಾಪಿಸಿದರು. ವ॥ ಅದು ಹೇಗೆಂದರೆ, ೬೫. ಜಿಂಕೆ, ಹುಲಿ, ಹಂದಿ, ದೊಡ್ಡಕರಡಿ, ತೋಳನ ಭೀತಿಗೊಳಗಾದ ಹುಲ್ಲೆಗಳ ಹಿಂಡು, ಬಿಳಿಜಿಂಕೆ, ವೀರಾವೇಶದಿಂದ

ತರದ ಕುಟೀರವಂ ಬೆಳೆದ ಕೆಯ್ಗಳನಂತಿರಲೀಯವಂತವಂ
ನಿರಸನವೈದಿಸಲ್ ನೆಱೆವ ಬೇಂಟೆಗೆ ಕಾಲಮಿದುರ್ವರೇಶ್ವರಾ ೬೫

ವ॥ ಎಂದು ಮತ್ತಂ

ತರವೇಟ್ ಸಾಳುವವೇಗನಂ ತೊಗರನಂ ಹೆಗ್ಗಾಳನಂ ಜೂಗನಂ
ಬರವೇಟ್ ಜಾಯಿಲನೆಂಬ ಸೀಗುರಿಗನಂ ಕೆಂಗಣ್ಣನಂ ವೇಗಿಯಂ
ಭರದಿಂ ಸುಬ್ಬುರುವಾಲನಂ ಗದುಗನಂ ಮತ್ತುಳ್ಳ ಪೆರ್ನಾಯ್ಗಳಂ
ನರನಾಥಂ ಮೃಗಯಾವಿನೋದದೊದವಂ ನೋಡಲ್ ಮನಂದಂದಪಂ ೬೬

ವ॥ ಎಂಬುದುಂ

ಮಡಿದ ಕಿವಿ ಸಣ್ಣ ರೋಮಂ
ಹಿಡಿಕೆಯ ನಡು ಸೂಜಿವಾಲಮುಗ್ಗಡ ಕೋಪಂ
ಸಿಡಿಲರವಮಸಿಯ ಮೋಱೆಗ
ಅಡಿ ಮುಂಚುವ ನಾಯ್ಗಳಂ ನೃಪಾಲಂ ಕಂಡಂ ೬೭

ಮಿಡಿಗೆ ಕನಲ್ದು ಲಂಘಿಸುವ ಪೆರ್ದೊಡೆಯಂ ಕಡಿಖಂಡವಪ್ಪಿನಂ
ತುಡುಕುವ ಗಾಹು ತಪ್ಪಿದೊಡೆ ಬೆಂಬಿಡದೆಯ್ದುವ ಹುಲ್ಲೆವಿಂಡುಗಂ
ಡೊಡೆ ಬಱಿಕೆಯ್ವ ಪೆರ್ಮರೆಯನಟ್ಟಿ ಕರುಳ್ಗಳ ತಿಂಬ ಬಂದ ಮುಂ
ಗುಡಿಗಳ ನಾಯ್ಗಳಂ ಪಿಡಿದು ಬೇಂಟೆಯವರ್ ಕರೆದರ್ ನೃಪಾಲನಂ ೬೮

ಗುರಿಯಿಟ್ಟು ನುಗ್ಗುವ ಮುಳ್ಳುಹಂದಿಗಳು ವಿಶೇಷವಾಗಿ ಕೊಬ್ಬಿ ಕಾಡಿನಲ್ಲಿರುವ ಗುಡಿಸಿಲುಗಳನ್ನೂ, ಬೆಳೆ ಬೆಳೆದಿರುವ ಗದ್ದೆಗಳನ್ನೂ ಉಳಿಯಗೊಡುತ್ತಿಲ್ಲ. ಅವುಗಳನ್ನು ಸಂಹರಿಸಲು ಬೇಟೆಗೆ ಒಡಗೂಡುವ ಕಾಲವಿದು ಮಹಾರಾಜನೇ ! ವ॥ ಎಂದು ಬಳಿಕ, ೬೬. ಮಹಾರಾಜನು ಮೃಗಗಳ ಬೇಟೆಯ ಆನಂದದ ಸುಖವನ್ನು ನೋಡಲು ಬಯಸುತ್ತಾನೆ. ಸಾಳುವವೇಗನನ್ನು, ತೊಗರನನ್ನು, ಹೆಗ್ಗಾಳನನ್ನು, ಜೂಗನನ್ನು ತರುವಂತೆ ತಿಳಿಸಿರಿ. ನಾಯಿಗಳಾದ ಸೀಗುರಿಗನನ್ನು ಗದುಗನನ್ನು ಹಾಗೂ ಇತರ ದೊಡ್ಡ ದೊಡ್ಡ ನಾಯಿಗಳನ್ನೂ ಬೇಗಬೇಗನೆ ಬರುವಂತೆ ಹೇಳಿರಿ, ವ॥ ಎನ್ನಲು ೬೭. ಮಡಿಸಿದ ಕಿವಿಗಳು, ಸಣ್ಣ ಸಣ್ಣ ಕೂದಲುಗಳು, ಸಣ್ಣ ನಡುಗಳು, ಮೊನಚಾದ ಬಾಲಗಳು, ಉಗ್ರವಾದ ಕೋಪ, ಸಿಡಿಲಶಬ್ದ, ಕಪ್ಪಾದ ಮುಖಗಳುಳ್ಳ ಓಡಲು ಅಣಿಯಾಗಿರುವ ನಾಯಿಗಳನ್ನು ನೃಪಾಲನು ನೋಡಿದನು. ೬೮. ತಟ್ಟಿದೊಡನೆಯೇ ಕೆರಳಿ ಹಾರುವ, ದೊಡ್ಡ ತೊಡೆಯನ್ನು ಚೂರು ಚೂರಾಗುವಂತೆ ಹಿಡಿಯುವ, ಗುರಿ ತಪ್ಪಿದ್ದೇ ಆದರೆ ಬಿಡದೆ ಬೆನ್ನಟ್ಟುವ, ಹುಲ್ಲೆಗಳ ಸಮೂಹವನ್ನು ನೋಡಿದೊಡನೆಯೇ ಬರಿದುಮಾಡುವ, ಸಾರಂಗವನ್ನು ಅಟ್ಟಿಸಿಕೊಂಡು ಕರುಳುಗಳನ್ನು ತಿನ್ನುವ, ಮುಂಭಾಗದಲ್ಲಿಯೇ ನಿಲ್ಲುವ ನಾಯಿ

ಹೇರಿಟ್ಟ ಪೊಱೆಯು ಪೆರ್ಬಲೆ
ಸೀರೆಯು ತೆರೆ ಕೊಂಬು ಕಣ್ಣಿ ದೀವದಹುಲಿಗ
ಳ್ಗೋರಿ ಕವಲಂಬುಸಹಿತಂ
ಘೋರನೆ ನೆರೆದತ್ತು ಬೇಂಟೆಕಾಱರ ತಂಡಂ ೬೯

ವ॥ ಅಂತು ಬೇಂಟೆಕಾಱರಂ ಕಂಡು

ಬೇಟೆಯ ನೆವದಿಂ ವಿರಹದ
ಕೋಟಲೆ ಮಾಣ್ದನಿತು ಮಾಣಸುತ್ತವನಿಪನೊ
ಲ್ದಾಟವಿಕರೊಡನೆ ನಡೆದು ಮ
ಹಾಟವಿಯುಂ ಪೊಕ್ಕು ಬೇಂಟೆಗನುವಾಗಿರ್ದಂ ೭೦

ಅತ್ತಿ ಕಪಿತ್ಥವಿಪ್ಪೆ ಖದಿರಂ ಮದನಂ ಕರಿಕಕ್ಕೆ ಬಿಕ್ಕೆ ಮುಳ್
ಮುತ್ತವಶೋಕೆ ಮಾವು ಬದರೀತರು ಸಲ್ಲಕಿ ಬನ್ನಿ ಹೊನ್ನೆಯು
ತ್ತುತ್ತೆ ಶಿರೀಷವಿಂಗುಳವರಿಷ್ಟವಗೋತ್ಪಲ ಸಿಗ್ಗು ಗುಗ್ಗುಳಂ
ಮತ್ತಮನೇಕವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ ೭೧

ನಸೆಯಿಂ ಮುಂಗೆಟ್ಟು ತನ್ನಂ ಮಱೆದು ಮಱುಕದಿಂ ಕಣ್ಗಳಂ ಮುಚ್ಚಿ ನಿಚ್ಚಂ
ಪಸಿವಂ ನೀರಟ್ಕೆಯುಂ ನಿದ್ರೆಯನಱಿಯದೆ ಹೃತ್ತಾಪದಿಂ ಕಾಡಿ ನಾಲ್ಕುಂ

ಗಳನ್ನು ಹಿಡಿದುಕೊಂಡು ಬೇಟೆಗಾರರು ಮಹಾರಾಜನನ್ನು ಕರೆದರು. ೬೯. ದೊಡ್ಡದಾದ ಈಟಿ, ಹೊರೆಹೊತ್ತ ದೊಡ್ಡಬಲೆ, ಬಟ್ಟೆಯ ತೆರೆ, ಕೊಂಬು, ಹಗ್ಗ, ಸಳೆತದ ಹುಲಿಗಳು, ಬೇಟೆಯಾಡುವ ಮೃಗವನ್ನು ಆಕರ್ಷಿಸುವ ಪ್ರಾಣಿ, ಕವಲೊಡೆದ ಬಾಣಗಳೊಡನೆ ಬೇಟೆಗಾರರ ಸಮೂಹವು ಸಂಭ್ರಮದಿಂದ ಸೇರಿದ್ದಿತು. ವ॥ ಹಾಗೆ ಬೇಟೆಗಾರರನ್ನು ನೋಡಿ ೭೦. ಬೇಟೆಯ ನೆಪದಲ್ಲಿ, ವಿರಹದ ವ್ಯಾಕುಲವನ್ನು ಅಷ್ಟರಮಟ್ಟಿಗೆ ನಿವಾರಿಸಿಕೊಂಡು ಮಹಾರಾಜನು ಅಡವಿಯವರೊಂದಿಗೆ ನಡೆದು, ದೊಡ್ಡ ಅರಣ್ಯವನ್ನು ಪ್ರವೇಶಿಸಿ ಬೇಟೆಗೆ ಸಿದ್ಧವಾಗಿದ್ದನು. ೭೧. ಅತ್ತಿ, ಬೇಲ, ಇಪ್ಪೆ, ಕಾಚ, ದತ್ತೂರ, ಕರಿಕಕ್ಕೆ, ಬಿಕ್ಕೆ, ಮುಳ್ ಮುತ್ತುಗ, ಅಶೋಕೆ, ಮಾವು, ಬದರಿ, ಬೆಳವಲ, ಬನ್ನಿ, ಹೊನ್ನೆ, ಉತ್ತುತ್ತೆ, ಬಾಗೆ, ಇಂಗುಳ, ಅರಿಷ್ಟ,(?) ವಗೋತ್ಪಲ,(?) ಸಿಗ್ಗು,(?) ಗುಗ್ಗುಳ ಮೊದಲಾದ ಅನೇಕ ವೃಕ್ಷಸಮೂಹಗಳಿಂದ ಆ ಅರಣ್ಯವೆಲ್ಲ ತೋರಿಬಂದಿತು. ೭೨. ಬೆಳ್ಪರಳೆ ಬೆದೆಯಿಂದ ಮುಂಗಾಣದೆ, ತನ್ನನ್ನು ತಾನೇ ಮರೆತು, ದುಃಖದಿಂದ ಕಣ್ಣುಗಳನ್ನು ಮುಚ್ಚಿ ನಿತ್ಯವೂ ಹಸಿವೆ, ನೀರಡಿಕೆ, ನಿದ್ರೆಗಳನ್ನು ತಿಳಿಯದೆ (ತೊರೆದು), ಹೃದ್ವೇಗದಿಂದ ಬಾಡಿ, ನಾಲ್ಕು

ದೆಸೆಯೊಳ್ ತನ್ನಾರ್ಪಿನಿಂ ಹುಲ್ಲೆಯುನಱಸಿಯುಂ ಕಾಣದಶ್ರುಪ್ರವಾಹಂ
ನಿಸದಂ ಸೂಸಲ್ ಕರಂ ಬೆಳ್ಪಿರಳೆ ಪರವಶಂಬಟ್ಟು ಕಾಲ್ಗೆಟ್ಟುದಾಗಳ್ ೭೨

ಅದನೀಕ್ಷಿಸಿ ನಳನರಪತಿ
ಯಿದು ವಾತ್ಸಲ್ಯಯೆಂದೊಡಾಕ್ಷಣಂ ಕಡುಪಿಂದಂ
ಹೃದಯದ ತಾಪಂ ಪೆರ್ಚಲ್
ಪದುಳಿಸಿಕೊಂಡಂ ಮಗುಟ್ದು ಧೀರೋದಾತ್ತಂ ೭೩

ಎಕ್ಕಯಿನಿರ್ಪ ಪುಲ್ಲೆಗಳನಿಲ್ಲಿಯೆ ಮುಗ್ಗಿಸು ಗಂಡುಗೆಯ್ದು ಪೋ
ಪೆಕ್ಕಲವಂದಿಯಂ ತಿವಿ ತರಕ್ಷುವಡುರ್ದಪುದೀ ನಿಕುಂಜದೊಳ್
ಪೊಕ್ಕಿಱಿನಿಂದ ಪೆರ್ಗರಡಿಯಂ ಕಡುಪಿಂ ಕವಲಂಬನೆಚ್ಚು ಕೊಂ
ಡಿಕ್ಕೆನುತಿರ್ಪ ಬೇಂಟೆಯ ಮಹಾಧ್ವನಿ ಪೊಣ್ಮಿದುದೆಲ್ಲಿ ನೋಟ್ಪೊಡಂ ೭೪

ಕೆಲಸಾರ್ ಪೋಗದಿರಿತ್ತ ಬಾ ತುಡುಕದಿರ್ ಜೂಲ್ನಾಯ್ಗಳಂ ಬಿಟ್ಟು ಕೂ
ಱಲಗಂ ತಿತ್ತಿರಿನೋಡಿ ಗಿಬ್ಬಡಿಗೊಳಿಂ ಮುಂಗೆಟ್ಟು ಬೆಂಬೀಟ್ವಿನಂ
..................................................
..................................................  ೭೫

ಉರಿಗಣ್ ಕೆತ್ತುವ ಮೀಸೆ ಪೆರ್ಚಿದ ಕೊರಲ್ ಪೆರ್ಬಾಲವೃದ್ದಂಡವ
ಕ್ರರದಂ ಮಿಂಚುವ ಮೆಯ್ ಭಯಂಕರರವಂ ನೀಳ್ದಂಘ್ರಿಯುದ್ಯನ್ನಖಾ

ದಿಕ್ಕುಗಳಲ್ಲಿಯೂ ತನ್ನ ಕೈಯಲ್ಲಾದಮಟ್ಟಿಗೆ ಹುಲ್ಲೆಯನ್ನು ಹುಡುಕಾಡಿ ಅದನ್ನು ಕಾಣದೆ ಕಣ್ಣೀರಿನ ಹೊನಲು ಹರಿಯಲು ಪರವಶವಾಗಿ ಆಗ ಓಡಾಡದೆ ತಟಸ್ಥ ವಾಯಿತು. ೭೩. ನಳಮಹಾರಾಜನು ಅದನ್ನು ಕಂಡು ಇದು ನನ್ನ ಪ್ರೀತಿಗೆ ಪಾತ್ರ ವಾದದ್ದು ಎಂದುಕೊಂಡ ಕೂಡಲೆ ತೀಕ್ಷ್ಣವಾಗಿ ಹೃದಯದ ತಾಪವು ಹೆಚ್ಚಿರಲು, ಆ ಧೀರೋದಾತ್ತನು ಹಿಂತಿರುಗಿ ಅದನ್ನು ಸಂರಕ್ಷಿಸಿಕೊಂಡನು. ೭೪. ಗುಂಪಾಗಿರುವ ಹುಲ್ಲೆಗಳನ್ನು ಇಲ್ಲೆಯೇ ಕೆಡಹು ; ತೊಂಡುಮೆರೆದು ಹೋಗುವ ಮುಳ್ಳುಹಂದಿಯನ್ನು ತಿವಿ ; ಈ ಪೊದೆಯಲ್ಲಿ ಅಡಗಿರುವ ಹುಲಿಯನ್ನು ನುಗ್ಗಿ ಇರಿ ; ದೊಡ್ಡ ಕರಡಿಯನ್ನು ಬಲವಾಗಿ ಕವಲಂಬನ್ನು ಬಿಟ್ಟು ಹಿಡಿದು ಬಡಿ ಎನ್ನುತ್ತಿರುವ ಬೇಟೆಗಾರರ ಆರ್ಭಟವು ಎಲ್ಲಿ ನೋಡಿದರೂ ಹೊಮ್ಮಿತ್ತು. ೭೫. ಪಕ್ಕಕ್ಕೆ ಸರಿ, ಹೋಗದಿರು, ಇತ್ತ ಬಾ, ಹಿಡಿಯಬೇಡ, ಜೂಲುನಾಯಿಗಳನ್ನು ಬಿಟ್ಟು ಹರಿತವಾದ ಕತ್ತಿಯನ್ನು ಒತ್ತಾಗಿ ಇಟ್ಟು ದಾರಿಗೆಟ್ಟು ಬೆನ್ನಟ್ಟುವಂತೆ (ಆಕ್ರಮಿಸಿರಿ).... ೭೬. ಕೆಂಪುಗಣ್ಣು, ಅದುರುವ ಮೀಸೆ, ಉಬ್ಬಿದ ಕೊರಳು, ದೊಡ್ಡಬಾಲ, ಭಯಂಕರವಾದ ವಕ್ರವಾದ ಹಲ್ಲು, ಹೊಳೆಹೊಳೆಯುವ ಮೆಯ್, ಭಯಂಕರವಾದ ಶಬ್ದ, ಮುಂದೆ ಚಾಚಿದ ಪಾದಗಳು, ಮೇಲೆದ್ದ

ಕುರಮುಸ್ಮಾರ್ಗಗತಿಪ್ರಚಾರವೆನಸುಂ ಚಿಲ್ವಾಗೆ ತತ್ಕಾನನಾಂ
ತರದೊಳ್ ಪೆರ್ಬುಲಿಯಿರ್ದುದೇಣಕುಲಮಂ ನಿಶ್ಶೇಷಮಂ ಮಾಡುತಂ ೭೬

ಇಕ್ಕೆಯಿನೆರ್ದು ಮೆಯ್ಮುರಿದು ಪೆರ್ಮರನಂ ಕೆರೆದಿಕ್ಕೆಲಂಗಳಂ
ಕೆಕ್ಕಳಿಸುತ್ತೆ ನೋಡಿ ಪಸಿದಾಗುಳಿಸುತ್ತಡಿಯಿಟ್ಟು ಮುಂದೆ ದಿಂ
ಕಿಕ್ಕುವ ಹುಲ್ಲೆವಿಂಡನದು ಕಂಡುಜಿ ಲಂಘಿಸಿ ಪಾಯ್ದು ನೆತ್ತರಿಂ
ಸೊಕ್ಕಿರುತಿರ್ಪ ಪೆರ್ಬುಲಿಯನೊರ್ವನೆ ಪೊಯ್ದನಿಳಾಧಿನಾಯಕಂ ೭೭

ಇತ್ತಲಿದೊಂದು ಪಂದಿಯಿದೆ ನಾಯ್ಗಳ ಕೂಗಿಮೆನುತ್ತ ಸುತ್ತಲುಂ
ಮುತ್ತಿರೆ ದಾಡೆಗುಟ್ಟಿ ಕೊಣಕಿಟ್ಟದಟಿಂ ಮಲೆಯುತ್ತ ನಾಯ್ಗಳಂ
ಮುತ್ತಿದವರ್ಗಳಂ ಪೊಡೆದು ಸೈಕನೆ ಸೀಳ್ದು ಸಿಜುಂಬುಳಾಡಿ ಕೊಂ
ದತ್ತು ವಿಚಾರಮಲ್ಲದದು ಪಂದಿಯ ವೇಷದ ಮೃತ್ಯುವಲ್ಲವೇ ೭೮

ಎಕ್ಕಲನದಟಿಂ ಕಂಡೊಂ
ದುಕ್ಕಿನ ಕವಲಂಬಿನಿಂದದಂ ಕೆಡಪಲೊಡಂ
ವಿಕ್ಕವರೆಲ್ಲರ್ ಬೆಜಗಿಂ
ದಕ್ಕಟ್ ವಿಗೆಯಂವನಿಪಾಲಸಂ ಬಣ್ಣಿಸಿದರ್ ೭೯

ಹಲ್ಲಿನ ಮೊಳಕೆ, ಮುಂದೆ ಸಾಗುವ ನಡೆಗಳು ಆಕರ್ಷಕವಾಗಿ ತೋರಿಬರಲು ಆ ಅರಣ್ಯ ಮಧ್ಯದಲ್ಲಿ ಜಿಂಕೆಗಳ ವಂಶವನ್ನೇ ನಿರ್ಮೂಲವಾಗುವಂತೆ ಮಾಡುತ್ತ ಹೆಬ್ಬುಲಿಗಳಿದ್ದುವು. ೭೭. ತಮ್ಮ ಹಕ್ಕೆಗಳಿಂದ (ನಿವಾಸಸ್ಥಳಗಳಿಂದ) ಎದ್ದು, ಮೈಮುರಿದು, ದೊಡ್ಡ ಮರವನ್ನು (ಒರಗಿಕೊಂಡು) ಕೆರೆದು, ಎರಡೂ ಕಡೆಗಳನ್ನೂ ಭಯಚಕಿತ ದೃಷ್ಟಿಗಳಿಂದ ನೋಡಿ, ಹಸಿದು, ಆಕಳಿಸುತ್ತ, ಅಡಿಯಿಟ್ಟು ಮುಂದೆ ಹಾರಾಡುತ್ತಿರುವ ಜಿಂಕೆಗಳ ಸಮೂಹವನ್ನು ಅದು (ಹುಲಿ) ನೋಡಿ ಭರದಿಂದ ಹಾರಿ ಹಾಯ್ದು ರಕ್ತದಿಂದ ಸೊಕ್ಕಿರುವ ಹೆಬ್ಬುಲಿಯನ್ನು ಭೂಪಾಲಕನೊಬ್ಬನೇ ಸಂಹರಿಸಿದನು. ೭೮. ಈ ಸ್ಥಳದಲ್ಲಿ ಒಂದು ಹಂದಿಯಿರುವುದು ನಾಯಿಗಳನ್ನು ಕರೆಯಿರಿ ಎಂಬುದಾಗಿ ಸುತ್ತಲೂ ಮುತ್ತಿರಲು, ದಾಡೆಯನ್ನು ಬಡಿದು, ಮೇಲೆ ಹಾರಿ, ಪರಾಕ್ರಮದಿಂದ ಮಲೆಯುತ್ತ, ನಾಯಿಗಳನ್ನೂ ಮುತ್ತಿದವರನ್ನೂ ಬಡಿದು, ಒಂದೇ ಸಮನಾಗಿ ಹೋಳುಮಾಡಿ, ಚೆಲ್ಲಾಪಿಲ್ಲಿಯಾಗಿ ಚೆಲ್ಲಾಡಿ, ವಿಚಾರಿಸದೆ ಸಂಹಾರಮಾಡಿತ್ತು. ಅದು ಹಂದಿಯ ವೇಷ ತೊಟ್ಟ ಮೃತ್ಯುವಲ್ಲದೆ ಮತ್ತೇನು ? ೭೯. ಹಂದಿಯ ಪರಾಕ್ರಮವನ್ನು ನೋಡಿ ಉಕ್ಕಿನ ಕವಲುಬಾಣವೊಂದರಿಂದ ಅದನ್ನು ಕೆಡಹಲು ಉಳಿದವರೆಲ್ಲ ಆಶ್ಚರ್ಯದಿಂದ ವಿಶ್ವಾಸವು ಹೆಚ್ಚಾ

ಕೆಳರುತ್ತಂ ಮುಂದೆ ನಿಂದಿರ್ದದಟರನಟ್ಟಿದೀಡಾಡಿ ಮುತ್ತಿರ್ದರಂ ಜ
ಕ್ಕುಲಿಸುತ್ತಂ ತೀರ್ಚಿ ಪುತ್ತಂಬಗಿದಿಱುಂಪೆಗಳಂ ಪೀರ್ದು ಕೊರ್ವಿಂ ಮುದಂಬೆ
ತ್ತೊಲೆಯುತ್ತಂ [ಸಾರುತಿರ್ಪ] ಕರಡಿಯನಲಗಂಬಿಂ ಮನಂ ಮೆಚ್ಚಲೆಚ್ಚಲ್
ನೆಲನಂ ತಾಗುತ್ತ ಬಿರ್ದತ್ತವನಿಪತಿಯ ಸತ್ತ್ವಕ್ಕಿದೇಂ ಚೋದ್ಯಮಾಯ್ತೋ ೮೦

ಕೊಂಕಿದ ನೀಳ್ದ ಬಾಲಮತಿರೌದ್ರಮುಖಂ ನಿಡಿದಾದ ಪೇರೊಡಲ್
ಪೊಂಕೆಡೆಗೊಂಡು ಜೋಲ್ವ ಕಿವಿ ಕೇಸುರಿಗಂಗಳಲೊಪ್ಪಲೇಣನಂ
ಜಂಕಿಸಿ ಪಾಯ್ದು ಸೃಗ್ಜಲವನೀಂಟುವನೇಕ ವೃಕಂಗಳಂ ನಿರಾ
ತಂಕದೊಳಾಕ್ಷಣಂ ಕೆಡಪಿ ಬೊಬ್ಬಿಱಿದಾಡಿದನುರ್ಬಿ ಬೇಂಟೆಯಿಂ ೮೧

ಹರವರಿಯಾದ ಪೇರಡವಿಯೊಳ್ ಕಡುಕೊರ್ವಿದ ಬೆಳ್ಮೃಗಂಗಳಂ
ಹರಿಹರಿದಿಟ್ಟಿಯಿಂ ತಿವಿದು ಬಲ್ಸರಳಿಂ ಕೆಡೆಯೆಚ್ಚು ಬೇಗದಿಂ
ಸರಳಿಪ ನಾಯ್ಗಳಂ ಗಜಱಿಬಿಟ್ಟು ನಿಲಲ್ ಬಡಿಕೋಲಲಿಟ್ಟು ಸಂ
ಹರಿಸಿದುದಾರ್ದು ಬೇಡವಡೆ ನೋಡೆ ನೃಪಂ ತಲೆದೂಗುವನ್ನೆಗಂ ೮೨

ಗಡಣದ ಬೇಂಟೆಗಾಱವಡೆ ತೋಳ್ವಲದಿಂ ನರನಾಥನಾಜ್ಞೆಯಿಂ
ಕೆಡಪಿದ ಬೆಳ್ಮೃಗಂಗಳಡಗಂ ತೊಡೆಯಂ ಪೊಱಗಟ್ಟಿ ಪೊತ್ತು ನೀ

ಗಲು ಮಹಾರಾಜನನ್ನು ವರ್ಣಿಸಿದರು. ೮೦. ಅರಚುತ್ತ ಮುಂದೆ ನಿಂತಿದ್ದ ಶಕ್ತಿಶಾಲಿಗಳನ್ನು ಎಳೆದು ದೂರಕ್ಕೆಸೆದು ಮುತ್ತಿದವರನ್ನು ಕಚಗುಳಿಯಿಟ್ಟು ಸಾಯಿಸಿ ಹುತ್ತಗಳನ್ನು ಬಗಿದು ಇರುವೆಗಳನ್ನು ನೆಕ್ಕಿ ನೊಣೆದು, ಕೊಬ್ಬಿ ಸಂತೋಷಗೊಂಡು ಒಲೆದಾಡುತ್ತ ಸಾರಿ ಬರುತ್ತಿರುವ ಕರಡಿಯನ್ನು ಅಲಗುಬಾಣದಿಂದ ಮನಮೆಚ್ಚಿ ಹೊಡೆಯಲು ನೆಲವನ್ನು ಮುಟ್ಟಿ ಕೆಳಗುರುಳಿತು. ಮಹಾರಾಜನ ಸಾಮರ್ಥ್ಯಕ್ಕೆ ಇದೇನು ಅತಿಶಯವೆನ್ನಿಸಿತೋ ! ೮೧. ಬಾಗಿರುವ ನೀಳವಾದ ಬಾಲ, ಅತಿಭಯಂಕರವಾದ ಮುಖ, ಉದ್ದವಾದ ಹೆಬ್ಬೊಟ್ಟೆ, ಓರೆಯಾಗಿ (?) ಜೋಲುತ್ತಿರುವ ಕಿವಿ, ಕೆಂಗಣ್ಣುಗಳಿಂದ ಕೂಡಿದ ಜಿಂಕೆಯನ್ನು ಬೆದರಿಸಿ ಮೇಲೆ ಬಿದ್ದು ರಕ್ತವನ್ನು ಹೀರುವ ಅನೇಕ ತೋಳಗಳನ್ನು ನಿರಾತಂಕವಾಗಿ ಆಕ್ಷಣದಲ್ಲಿಯೇ ಕೆಡಹಿ ಬೇಟೆಯಿಂದ ಹಿಗ್ಗಿ ಬೊಬ್ಬಿರಿದನು. ೮೨. ಆ ಬೇಡರ ತಂಡವು ಹಬ್ಬಿ ಹರಡಿರುವ ದೊಡ್ಡ ಅಡವಿಯಲ್ಲಿ ತುಂಬ ಕೊಬ್ಬಿದ ಬಗೆಬಗೆಯ ಪ್ರಾಣಿಗಳನ್ನು ಬೆನ್ನಟ್ಟಿ, ಈಟಿಯಿಂದ ತಿವಿದು ಬಲಿಷ್ಠವಾದ ಬಾಣದಿಂದ ಉರುಳುವಂತೆ ಹೊಡೆದು, ಶೀಘ್ರವಾಗಿ ಸುತ್ತಿಕೊಳ್ಳುವ ನಾಯ್ಗಳನ್ನು ಛೂಬಿಟ್ಟು ನಿಂತಿರಲು, ಮಹಾರಾಜನು ನೋಡಿ ತಲೆದೂಗುವವರೆಗೆ, ಹೊಡೆಗೋಲಿನಿಂದ ಬಡಿದು ಅಬ್ಬರಿಸಿ ಸಂಹರಿಸಿತು. ೮೩. ಬೇಟೆಗಾರರ ತಂಡವು ಮಹಾರಾಜನ ಅಪ್ಪಣೆಯಂತೆ (ತನ್ನ) ತೋಳ್ಬಲದಿಂದ ಕೆಳಕ್ಕುರುಳಿಸಿದ ಭೀತಿಗೊಂಡ ಪ್ರಾಣಿಗಳ ಮಾಂಸವನೂ

ರಡಸಿ ಬರುತ್ತಿರಲ್ ಕಮಳಕೈರವ ಕೋಕಮರಾಳರಾಜಿ ಸಾ
ಲ್ವಿಡಿದಿರೆ ಕೌತುಕಂಬಡೆದು ಮುಂದೆಸೆದಿರ್ದುದದೊಂದು ಪೂಗೊಳಂ ೬೩

ಜಲಜದೊಳಿರ್ದ ಗೋಮಿನಿಯ ಮೆಲ್‌ನಗೆಯುಂ ತನಿವೆಚ್ಚಿದಂತೆ ಭೂ
ಲಲನೆಯಪಾಂಗದೀಪ್ತಿ ಮಿಗೆ ಮುಯ್ವಡೆದಂತೆ ನಿಜಾತ್ಮಜಾತೆಯಿ
ಪ್ಪಲರ್ವನೆಯುಂ ಮನಂ ದಣಿಯಲೀಕ್ಷಿಸೆ ಬಂದಮೃತಾಬ್ಧಿಯಂತೆ ಸ
ಲ್ಲಲಿತ ಹಿಮಾಂಬುವಿಂ ನಯನಕೌತುಕಮಾ[ದುದದೊಂದು] ಪೂಗೊಳಂ ೬೪

ಮಿಸುಗುವ ಮುತ್ತಿನೆಕ್ಕಸರವಂ ಪ್ರಿಯವಲ್ಲಭೆಗೀವ ನಲ್ಲರಂ
ತಸಿಯಳನೊಂದು ತಣ್ಣೆೞಲೊಳಿಟ್ಟು ನೀಜೋಜ್ವಲ ಚಂಚುವಿಂ ಸುಧಾ
ರಸಬಿಸನಾಳಮುಂ ಪದೆದು ತಂದಿನಿಯಳ್ಗದನಿತ್ತು ಸೋಂಕುವೊಂ
ದೆಸಕದಿನಿದ್ದುದೊಂದು ಕಳಹಂಸೆ ತದೀಯ ಸರೋಜಷಂಡದೊಳ್ ೬೫

ಕಳಹಂಸೆಯ ಪಂಕ್ತಿಗಳಂ
ತಿಳಿಗೊಳದೊಳ್ ಕಂಡು ಪುಂಡರೀಕಾವಳಿಯೆಂ
ದಳಿಗಳ್ ಬಂದೆಱಗಲ್ ಮೆ
ಯ್ವೆಳಗಿಂದಂ ಧಾರ್ತರಾಷ್ಟ್ರಮೆನಿಸಿದುದಾಗಳ್ ೬೬

ತೊಡೆಯನ್ನೂ ಹೊರೆಕಟ್ಟಿ ಹೊತ್ತುಕೊಂಡು ನೀರಡಕೆಯಿಂದ ಬರುತ್ತಿರಲು, ತಾವರೆ, ನೈದಿಲೆ, ಚಕ್ರವಾಕ, ಹಂಸಗಳು ಸಾಲುಗಟ್ಟಿರಲು ಆಶ್ಚರ್ಯಕರವಾದ ಒಂದು ಹೂಗೊಳವು ಮುಂದೆ ಕಂಡುಬಂದಿತು. ೬೪. ಕಮಲವಾಸಿನಿಯಾದ ಲಕ್ಷ್ಮೀದೇವಿಯ ಮೆಲ್ನಗೆಯನ್ನು ಹೆಚ್ಚಿಸಿದಂತೆ, ಭೂದೇವಿಯ ಕಡೆಗಣ್ಣ ಕಾಂತಿ ವಿಶೇಷವಾಗಿ ರೂಪು ತಾಳಿದಂತೆ, ತನ್ನ ಮಗಳಿರುವ ಹೂನೆಲೆವನೆಯನ್ನು ಮನಃಪೂರ್ತಿಯಾಗಿ ನೋಡಲು ಬಂದ ಹಾಲ್ಗಡಲಿನಂತೆ ಸುಂದರವಾದ ತಂಪಾದ ನೀರಿನಿಂದ ಆ ಹೂಗೊಳವು ಕಣ್ಣಿಗೆ ಬೆರಗನ್ನುಂಟುಮಾಡಿತು. ೬೫. ಪ್ರಕಾಶಿಸುವ ಮುತ್ತಿನ ಒಂದೆಳೆಯ ಸರವನ್ನು ತಮ್ಮ ಪ್ರಾಣಕಾಂತೆಯರಿಗೆ ಕೊಡುವ ಪ್ರಿಯರಂತೆ, ಆ ತಾವರೆಗೊಳದಲ್ಲಿದ್ದ ಒಂದು ಶ್ರೇಷ್ಠಹಂಸವು ಪ್ರಿಯೆಯನ್ನು ತಂಪಾದ ನೆರಳಿನಲ್ಲಿಟ್ಟು, ಹೊಳೆ ಹೊಳೆಯುವ ತನ್ನ ಕೊಕ್ಕಿನಿಂದ ಸುಧಾರಸವನ್ನುಳ್ಳ ತಾವರೆಯನಾಳವನ್ನು ಪ್ರೀತಿಯಿಂದ ತಂದು, ಪ್ರಿಯೆಯಾದವಳಿಗೆ ಕೊಟ್ಟು, ಸ್ಪರ್ಶಿಸಲಾಶಿಸುವ ಕಾರ್ಯದಲ್ಲಿ ತೊಡಗಿದ್ದಿತು. ೬೬. ತಿಳಿಯಾದ ಕೊಳದಲ್ಲಿ ಹಂಸಪಂಕ್ತಿಗಳಿದ್ದುದನ್ನು ನೋಡಿ, ತಾವರೆಯ ಹೂವುಗಳೆಂದು ದುಂಬಿಗಳು ಬಂದು ಮುತ್ತಲು, ತಮ್ಮ ಮೈಯ ಪ್ರಕಾಶದಿಂದ ಆ ಹಂಸಗಳು ಧಾರ್ತರಾಷ್ಟ್ರ ಪಕ್ಷಿಗಳಂತೆ (ಕೊಕ್ಕು ಮತ್ತು ಕಾಲುಗಳು ಕಪ್ಪಾಗಿರುವ ಹಂಸ) ತೋರಿಬಂದುವು,

ಜಲರುಹವನನವಗಂಧ
ಕ್ಕಳಿಗಳ್ ಬಂದೆಱಗಲಾಗಲನುಪಮ ನೀಲೋ
ತ್ಪಲವನದಂತೆಸೆದಿರ್ದುದು
ಜಲರುಹಷಂಡಂ ಹಿಮದ್ರುಮಶ್ರೀಖಂಡಂ ೮೭

ವ|| ಮತ್ತಮದು ಜಲದೇವತೆಯರಲ್ಗಂಗಳ ಬಳ್ವೆಳಗಿನಿಂ ಬಣ್ಣಂಬಡೆದ ಬಾಳೆವಿಾಂಗಳ್ ಸುೞಿದಲ್ಲಾಡಿಸೆ ಚೆಲ್ಲಿದ ಪದ್ಮಪರಾಗದೊಳ್ ಪೊರಳ್ದು ಪೊರಳ್ದು ಪಾಱೈಸುವ ಸಾರಸಂಗಳಿಂ ತೆಱದು ಱುಗಲ ತಂದಲಂ ತೊಲಂಗಿ ಕುಮುದಕಾನನದೊಳಿರುಳಭಯದಿಂ ತರುಣಿಯೊಳ್ ನಿರವಧಿಕ ಬೇಂಟದಿಂ ಕೂಟಮನೆಸಗುವ ಕೋಕಂಗಳಿಂ ಕಲ್ಹಾರ ಕಿಂಜಲ್ಕದೊಳ್ ಮಂದೈಸಿದ ಮಧುರರಸವನೆಕ್ಕೆಕ್ಕಿಯುಂ ದೀಂಟಿ ಸೊಕ್ಕಿಂ ಮೆಯ್ಮಱೆವ ಮಱಿದುಂಬಿಗಳಿಂ ಪಂಕಜವನಮನಲರ್ಚಲ್ ಕೆಂಪವಾಗೆ ಮೂಡುವ ರಾಜೀವಬೀಜಮಂ ಸವಿದು ಕೂಜಿತದಿಂ ಮೆಲ್ಲಮೆಲ್ಲನೆ ಸುಳಿವ ಮರಾಳಮಂಡಲದಿಂ ಪಂಚಶರ ಪರಿತಾಪಮಂ ಪರಿಹರಿಸಲೆಂದು ಬಂದಿಂದುಮುಖಿಯರ ಶ್ರಮಮಂ ಕಳೆವ ಹಿಮಾಂಬುವಿಂ ಕಮನೀಯಮಾಗಿರ್ಪುದಂತುಮಲ್ಲದೆಯುಂ

ಕೂಡುವ ಚಕ್ರವಾಕಮಿಥುನಂ ಸಿತಪದ್ಮವನೊಯ್ಯನೊಯ್ಯನ
ಲ್ಲಾಡಿಸುವಂಚೆಯುಬ್ಬ ಮಕರಂದವನುಂಡು ಸುರಾಗದಿಂದ ಮೇ

೮೭. ತಾವರೆಕೊಳದ ಹೊಸ ಸುವಾಸನೆಗೆ ದುಂಬಿಗಳು ಬಂದು ಮುತ್ತಲು ಶೀತಲವಾದ ಶ್ರೀಗಂಧದಂತಹ ತಾವರೆಕೊಳವು ಅಸದೃಶವಾದ ಕನ್ನೈದಿಲೆಯ ಕೊಳದಂತೆಯೇ ತೋರಬಂದಿತು. ವ|| ಪುನಃ ಅದು ಜಲದೇವತೆಯ ಹೂಗಣ್ಣುಗಳ ಬಳ್ಳಿಯಾಕಾರದ ಕಾಂತಿಯಿಂದ ಬಣ್ಣವನ್ನು ಪಡೆದ ಬಾಳೆವಿಾನುಗಳು ಅಷ್ಟಾಡಿ ಅಲ್ಲಾಡಿಸಲು ಅಲ್ಲಲ್ಲಿಯೇ ಚೆಲ್ಲಿದ್ದ ತಾವರೆಧೂಳಿಯಲ್ಲಿ ಹೊರಳಿ ಹೊರಳಿ ಹಾರಾಡುವ ನೀರ್ವಕ್ಕಿಗಳಿಂದಲೂ, ತೆರೆಗಳ ಸಮೂಹದ ಹನಿಗಳನ್ನು ಹೋಗಲಾಡಿಸಿ ಕನ್ನೈದಿಲೆಯ ಕಾಡಿನಲ್ಲಿ ರಾತ್ರಿಯ ಭಯದಿಂದ ಪ್ರೇಯಸಿಯೊಂದಿಗೆ ಕೊನೆಯಿಲ್ಲದೆ ಅನುರಾಗದಿಂದ ಒಡಗೂಡುವ ಚಕ್ರವಾಕಗಳಿಂದಲೂ, ಕೆಂದಾವರೆಯ ಕೇಸರದಲ್ಲಿ ಅಪಾರವಾಗಿದ್ದ ಸಿಹಿಯಾದ ರಸವನ್ನು (ಬಂಡನ್ನು) ಒಟ್ಟೊಟ್ಟಿಗೆ ಸವಿದು ಸೊಕ್ಕಿನಿಂದ ಮೈಮರೆಯುವ ಮರಿದುಂಬಿಗಳಿಂದಲೂ, ತಾವರೆಗೊಳವನ್ನು ಅರಳಿಸಲೆಂದು ಕೆಂಪಾಗಿ ಉದಿಸುವ ಸೂರ್ಯಮಂಡಲವನ್ನು ನೂರರ ಗಟ್ಟಲೆ ಇಮ್ಮಡಿಸಿ ಚಂಚಲವಾಗಿ ತೋರಿಬರುವ ಅಲೆಗಳ ಸಮೂಹದಿಂದಲೂ. ತಾವರೆಯ ಬೀಜವನ್ನು ರುಚಿ ನೋಡಿ ಧ್ವನಿಮಾಡುತ್ತ ಮೆಲ್ಲಮೆಲ್ಲನೆ ಸುಳಿಯುವ ಹಂಸ ಸಮೂಹದಿಂದಲೂ, ಮನ್ಮಥನ ಸಂಕಟವನ್ನು ನಿವಾರಿಸಲೆಂಬುದಾಗಿ ಬಂದ ಚಂದ್ರಾನನೆಯರ ಆಯಾಸವನ್ನು ಹೋಗಲಾಡಿಸುವ ತಂಪು ನೀರಿನಿಂದ ಮನೋಹರವಾಗಿರುವುದು. ಅಷ್ಟೇ ಅಲ್ಲದೆ, ೮೮. ಒಟ್ಟುಗೂಡುವ ಚಕ್ರವಾಕಪಕ್ಷಿಗಳ ಜೋಡಿ, ಬೆಳ್ದಾವರೆಗಳನ್ನು ಒಯ್ಯನೊಯ್ಯನೆ ಅಲ್ಲಾಡಿಸುವ ಹಂಸಗಳು, ತಾವರೆಯ ಬಂಡನ್ನು ಸವಿದು ಪ್ರೀತಿ

ಲಾಡುವ ತುಂಬಿಗಳ್ ಸಲೆ ಗುಣತ್ರಯಮಂ ಪಡೆಯಲ್ಕೆ ಸಂತತಂ
ತೀಡುವ ಮೆಲ್ಲೆಲರ್ ಸೊಗಯಿಕುಂ ಪೊಸಪೂಗೊಳದೊಳ್ ನಿರಂತರಂ ೮೮

ಕಳಿವಣ್ಣೊಪ್ಪುವ ಮಾಮರಂ ಪಲದ . . . . ನೇಲ್ವ ಜಂಬೂಕುಜಂ
ತಳಿರಂ ಪೇಱಿದಶೋಕೆ ಕಾಯ್ಗೊಂಚಲಿಂ ಪೇರ್ದನೇಕ ದ್ರುಮಂ
ನೆಟಲಂ ಪೆರ್ಚಿಸುವಾಲಮುಳ್ಳಲರ್ಗಳಿಂ ಪೂತಿರ್ದ ನಾನಾ ಲತಾ
ವಳಿ ಕಣ್ಗೊಪ್ಪಿರೆ ತೀರವೃಕ್ಷತತಿಯಂ ಭೂಪಾಲಕಂ ನೋಡಿದಂ ೮೯

ಅವನಿಪನೊಲ್ದು ಪೂಗೊಳನನೊಯ್ಯನೆ ಪೊಕ್ಕಮಳಾಂಬುವಿಂ ಪದಾ
ದ್ಯವಯವ ತಾಪಮಂ ತೊಳೆದು ಚೂತಫಲಂಗಳನೊಂದೆರಟ್ಟಿರಂ
ಸವಿದು ಸಿತಾಬ್ಜಪತ್ರ ವಿಮಳಾಂಬುವನೀಂಟಿ ಬೞಲ್ಕೆಯೆಲ್ಲಮಂ
ತವಿಸಿ ಮಗುಳ್ದು ಪೂಗೊಳನನಾಗಳೊಱಲ್ದು ಸಮಂತು ನೋಡಿದಂ ೯೦

ವ॥ ಅಂತು ನೋಟ್ಪನ್ನೆಗಂ

ಸುಲಲಿತ ರಾಜಹಂಸೆಗಳ ಮಧ್ಯದೊಳುರ್ವಿಗಪೂರ್ವವೆಂಬಿನಂ
ತೊಳಗುವ ಸಣ್ಣ ನುಣ್ಗಱಿಯ ಹೇಮಮಯಾಂಗದ ಹಂಸೆಯೊಂದು ಕಂ

ಸಮೇತವಾಗಿ ಮೇಲೆ ಹಾರಾಡುತ್ತಿರುವ ತುಂಬಿಗಳು, ರಾಜಸ, ಸಾತ್ವಿಕ ಮತ್ತು ತಮೋ ಗುಣಗಳನ್ನು ಪಡೆಯಲು ಸರ್ವದಾ ಬೀಸುವ ತಂಗಾಳಿಗಳು ಆ ಹೊಸ ಹೂಗೊಳದಲ್ಲಿ ಸರ್ವದಾ ಸೊಗಯಿಸುತ್ತವೆ. ೮೯. ಪಕ್ವವಾದ ಹಣ್ಣುಗಳಿಂದ ತೋರಿಬರುವ ಮಾವಿನ ಮರ, (ನೇರಿಳೆ ಹಣ್ಣುಗಳಿಂದ) ತೂಗಾಡುತ್ತಿರುವ ನೇರಿಳೆ ಮರ, ಚಿಗುರಿನಿಂದ ತುಂಬಿದ ಅಶೋಕವೃಕ್ಷ, ಕಾಯಿಗಳ ಗೊಂಚಲುಗಳಿಂದ ತುಂಬಿಕೊಂಡಿರುವ ಅನೇಕ ಗಿಡಗಳು, ನೆರಳನ್ನು ಹೆಚ್ಚಿಸುವ ಆಲ, ಅರಳಿದ ಹೂವುಗಳಿಂದ ಪುಷ್ಪಿತವಾಗಿದ್ದ ನಾನಾ ಬಳ್ಳಿಗಳ ಸಮೂಹ ಕಣ್ಣಿಗೆ ಕಂಡುಬರಲು ಎಡೆಎಡೆಯಲ್ಲೆಲ್ಲ ಇದ್ದ ಮರಗಳ ಗುಂಪನ್ನು ಮಹಾ ರಾಜನು ನೋಡಿದನು. ೯೦. ಮಹಾರಾಜನು ಮೆಚ್ಚಿ ಹೂಗೊಳವನ್ನು ಕೂಡಲೇ ಪ್ರವೇಶಿಸಿ, ಪವಿತ್ರವಾದ ನೀರಿನಿಂದ ಕಾಲು ಮೊದಲಾದ ಅಂಗಾಂಗಗಳ ಬೇಗುದಿಯನ್ನು ನಿವಾರಿಸಿಕೊಂಡು, ಒಂದೆರಡು ಮಾವಿನಹಣ್ಣುಗಳನ್ನು ರುಚಿನೋಡಿ, ಬೆಳ್ದಾವರೆಯ ಎಲೆ ಗಳಲ್ಲಿ ಶುಭ್ರವಾದ ನೀರನ್ನು ಕುಡಿದು, ದಣಿವನ್ನೆಲ್ಲ ಹೋಗಲಾಡಿಸಿಕೊಂಡು, ಆಗ ಮನಃ ಪೂರ್ವಕವಾಗಿ ಪುನಃ ಹೂಗೊಳವನ್ನು ಚೆನ್ನಾಗಿ ನೋಡಿದನು. ವ॥ ಹಾಗೆ ನೋಡು ತ್ತಿರುವಲ್ಲಿಗೆ, ೯೧. ಮನೋಹರವಾದ ರಾಜಹಂಸಗಳ ನಡುವೆ, ಭೂಮಿಯಲ್ಲಿಯೇ ಅಸದೃಶವೆಂಬಂತೆ ಬೆಳಗುವ ಸಣ್ಣದೂ, ಮೃದುವೂ ಆದ ಗರಿಗಳಿಂದ ಚಿನ್ನದ ಬಣ್ಣದ

ಗೋಳಿಸಿರೆ ಭೂಭುಜಂ ಬೆಱಗುವೆತ್ತತಿವಿಸ್ಮಯವೆಂದು ದಿಟ್ಟಿ ಸಂ
ಚಲಿಸದೆ ನೋಡುತಿರ್ದನದಱಾಕೃತಿಯುಂ ನೆಲೆಗೊಂಡ ರೀತಿಯುಂ ೯೧

ಮುಗಿದಲರ್ಗಂಗಳಿರ್ದೆಸೆಗೆ ಜೋಲ್ವ ಪತತ್ರದ ಕಾಂತಿ ಮೌನದಿಂ
ನೆಗಪಿದದೊಂದು ಕಾಲ್ ಕೊಳನೊಳೂಱಿದುದೊಂದಡಿ ಕೊಂಕುವೆತ್ತ ಗೋ
ಣ್ಮಿಗೆ ಸುಖನಿದ್ರೆಯಂ ಬಯಸುವಾನನವೊಪ್ಪುವ ಪೊನ್ನ ಹಂಸೆ ದಿ
ಟ್ಟಿಗೆ ಪೊಸಭಿತ್ತಿಯೊಳ್ ಬರೆದ ಚಿತ್ರದ ಹಂಸೆವೊಲಿರ್ದುದಾಕ್ಷಣಂ ೯೨

ಮದನಾರಿಯ ಮಣಿಮಕುಟಾ
ಗ್ರದ ತೆಱನಂ ತಿಳಿವೆನೆಂದು ಪರಮೇಷ್ಠಿ ಮರಾ
ಳದ ರೂಪಂ ತಳೆದಂ ತಾ
ನಿದು ತಪ್ಪದು ಮಿಕ್ಕ ಹಂಸೆಗೀ ಸೊಬಗುಂಟೇ ೯೩

ತೆಗೆದಂಬುಜದೆಲೆ ಕೆಱೆ ಸ
ತ್ತಿಗೆ ಸೀರ್ವನಿ ಚಾಮರಂ ಲಸತ್ಕರ್ಣಿಕೆ ಗ
ದ್ದುಗೆ ಪರಿವಾರಂ ಜಲಪ
ಕ್ಷಿಗಳಾಗಿರೆ ರಾಜಹಂಸನಿರ್ದನಲಂಪಿಂ ೯೪

ಅವಯವವುಳ್ಳ ಒಂದು ಹಂಸಪಕ್ಷಿಯು ವಿರಾಜಿಸಲು, ಮಹಾರಾಜನು ಆಶ್ಚರ್ಯಪರವಶನಾಗಿ ಅತಿ ಸೋಜಿಗವೆಂದು ನೋಟವನ್ನು ಚಲಿಸದೆ, ಅದರ ಆಕಾರವನ್ನೂ ನೆಲಸಿದ್ದ ರೀತಿಯನ್ನೂ ನೋಡುತ್ತಿದ್ದನು. ೯೨. ಮುಚ್ಚಿಕೊಂಡಿದ್ದ ಹೂವಿನಂತಹ ಕಣ್ಣುಗಳು, ಎರಡು ಕಡೆಗಳಲ್ಲಿಯೂ ಜೋಲುತ್ತಿದ್ದ ರೆಕ್ಕೆಗಳ ಕಾಂತಿ, ಮೌನವಾಗಿ ಮೇಲೆತ್ತಿದ್ದ ಒಂದು ಕಾಲು, ಕೊಳದಲ್ಲಿ ಊರಿಕೊಂಡಿದ್ದ ಮತ್ತೊಂದು ಕಾಲು, ಡೊಂಕಾಗಿದ್ದ ಕತ್ತು ಸುಖನಿದ್ರೆಯನ್ನು ಬಯಸುವ ಮುಖಗಳಿಂದ ಅಂದವಾಗಿ ತೋರಿಬರುವ ರಾಜಹಂಸ, ನೋಟಕ್ಕೆ ಆ ಕ್ಷಣದಲ್ಲಿ ಹೊಸ ಗೋಡೆಯ ಮೇಲೆ ಬರೆದ ಚಿತ್ರದ ಹಂಸದಂತಿದ್ದಿತು. ೯೩. ಈಶ್ವರನ ಜಟಾಜೂಟದ (?) ತುದಿಯ ರೀತಿಯನ್ನು ನೋಡುವೆನೆಂಬುದಾಗಿ ಬ್ರಹ್ಮನು ಹಂಸದ ರೂಪವನ್ನು ತಳೆದನಲ್ಲದೆ ಇದು ಬೇರೆಯಲ್ಲ, ಉಳಿದ ಹಂಸಕ್ಕೆ ಈ ಸೌಂದರ್ಯವಿದ್ದೀತೆ ? ೯೪. ಅರಳಿದ ತಾವರೆಯ ಎಲೆಯೇ ಕೆರೆ ಹಿಡಿದಿರುವ ಕೊಡೆ, ತುಂತುರುಹನಿಗಳು ಚಾಮರ, ಪ್ರಕಾಶಿಸುವ ಹೂವಿನ ಮಧ್ಯಭಾಗವೇ ಸಿಂಹಾಸನ. ನೀರ್ವಕ್ಕಿಗಳು ಪರಿವಾರವಾಗಿರಲು ರಾಜಹಂಸನು ಸಂತೋಷದಿಂದಿದ್ದನು. (ಇಲ್ಲಿ ಮಹಾರಾಜನ ಚಿಹ್ನೆಗಳಿಂದ ಛತ್ರ, ಚಾಮರ, ಸಿಂಹಾಸನ, ಪರಿವಾರವೇ ಮೊದಲಾದುವುಗಳ

ಸಿರಿ ಮೆಱೆವ ತನ್ನ ತಾಯ್ವನೆ
ಯಿರವಂ ತನ್ನಾದಿಸೃಷ್ಟಿಯುಂ ನಲವಿಂದಂ
ಪರಮೇಷ್ಠಿ ನೋಡಲಟ್ಟಿದ
ವರವಾಹನ ಹಂಸದಂದವೆಂದೀಕ್ಷಿಸಿದಂ ೯೫

ಮೇರುಸಮೀಪದಿಂದಿೞಿದು ಬಂದುದೊ ಮೇಣ್ ಜಲಲಕ್ಷ್ಮಿ ತನ್ನ ತೇ
ಜೋರವಣೆಯುಮಂ ಕರುಣಿಸಿತ್ತಳೊ ತತ್ಪರಮೇಷ್ಠಿ ಹಸ್ತವಿ
ಸ್ತಾರದಿನುತ್ತಮೋತ್ತಮ ಸುವರ್ಣದ ಸಾರಥಿಗೊಲ್ದು ಮಾಡಿದಾ
ಕಾರಮೊ ಪೇೞದಲ್ಲದೊಡೆ ಭೂಮಿಯೊಳೆಲ್ಲಿಯ ಹೇಮಹಂಸೆಗಳ್ ೯೬

ವ॥ ಎಂದನಂತರಂ

ಮುನ್ನಱಿದಂಚೆಯಲ್ತು ಪಲವಂದದ ಪೂಗೊಳನೊಳ್ ತೊಡರ್ದೊಡೇ
ನಿನ್ನದಱಂದವಿಲ್ಲ ಪಿಡಿದೊಯ್ವೆನಿದಂ ಮನೆಗೊಯ್ಯದಂದು ಚಿಂ
ಬೊನ್ನತನೂರುಹಂ ಮಿಸುಪ ಮಾಣಿಕವರ್ಣದ ಚಂಚು ಚೆಲ್ವಿನ
ಪ್ಪೆನ್ನ ಮನಕ್ಕೆ ಒರ್ಪ ಕಳಹಂಸೆಗಳುಂಟೆ ಸಮಸ್ತಧಾತ್ರಿಯೊಳ್ ೯೭

ಎನ್ನಯ ಕೇಳಿಯ ಸರಸಿಗೆ
ಪೊನ್ನ ತನೂರುಹದ ಹಂಸೆಯುಂ ಕೊಂಡೊಯ್ವೆಂ

ವರ್ಣನೆಯಿದೆ.) ೯೫. ಲಕ್ಷ್ಮಿಯಿಂದ ಶೋಭಿಸುವ ತನ್ನ ತವರುಮನೆಯ ಇರುವಿಕೆಯನ್ನೂ ತನ್ನ ಮೊತ್ತಮೊದಲ ಸೃಷ್ಟಿಯನ್ನೂ ಪ್ರೀತಿಯಿಂದ ನೋಡಲೆಂದು ಬ್ರಹ್ಮನು ಕಳುಹಿಸಿಕೊಟ್ಟ ಶ್ರೇಷ್ಠ ವಾಹನವಾದ ಹಂಸದಂತಿರುವುದೆಂದು ಮಹಾರಾಜನು ನೋಡಿದನು. ೯೬. ಇದು ಮೇರುಪರ್ವತದ (ಕನಕಾಚಲದ) ಸನಿಹದಿಂದ ಇಳಿದುಬಂದಿತೋ, ಇಲ್ಲವೇ ಜಲಲಕ್ಷ್ಮಿಯು ತನ್ನ ಕಾಂತಿಲಾವಣ್ಯವನ್ನು ಪ್ರೀತಿಯಿಂದ ಅನುಗ್ರಹಿಸಿದಳೋ, ಆ ಬ್ರಹ್ಮನು ವಿಸ್ತಾರವಾದ ತನ್ನ ಕೈಗಳಿಂದ ಉತ್ತಮೋತ್ತಮವಾದ ಹೊಂಬಣ್ಣದ ಸಾರಥಿಗಾಗಿ ಸಂತೋಷದಿಂದ ನಿರ್ಮಿಸಿದ ಆಕಾರವೋ ಹೇಳು ! ಹಾಗಿಲ್ಲದಿದ್ದಲ್ಲಿ ಭೂಮಂಡಲದಲ್ಲಿ ಹೊಂಬಣ್ಣದ ಹಂಸಗಳೆಲ್ಲಿಯವು ? ವ॥ ಎಂದು ಆ ಬಳಿಕ, ೯೭. ಹಲವು ಬಗೆಯ ಹೂಗೊಳದಲ್ಲಿ ಹಿಡಿದರೇನು ? ಈ ಮೊದಲು ನಾನು ತಿಳಿದ ಹಂಸೆಯಂತಲ್ಲ ! ಇದರ ಸೊಗಸಿಲ್ಲ ! ಇದನ್ನು ಹಿಡಿದು ಮನೆಗೆ ತೆಗೆದುಕೊಂಡು ಹೋಗುವೆನು. ತೆಗೆದುಕೊಂಡು ಹೋಗದಿದ್ದಲ್ಲಿ, ಕೆಂಪು ಹೊನ್ನಿನ ತುಪ್ಪುಳ, ಹೊಳೆಯುವ ಮಾಣಿಕ್ಯವರ್ಣದ ಕೊಕ್ಕುಗಳಿಂದ ಚೆಲುವೆನ್ನಿಸುವ ನನ್ನ ಮನಸ್ಸಿಗೆ ಒಪ್ಪಿಗೆಯಾಗುವ ಶ್ರೇಷ್ಠ ಹಂಸಗಳು ಭೂಮಂಡಲದಲ್ಲಿ ಇವೆಯೆ ? ೯೮. ಹೊಂಬಣ್ಣದ ಪುಕ್ಕಗಳಿರುವ ಹಂಸವನ್ನು ನನ್ನ ಕ್ರೀಡಾವಿಲಾಸದ ಸರೋವರಕ್ಕೆ ತೆಗೆದುಕೊಂಡು ಹೋಗುವೆನೆಂದು

ಸನ್ನಿವೆನುತ್ತಂ ಪ್ರಜೆಯುಂ
ತನ್ನರಪತಿ ಮೆಲ್ಲನೆರ್ದು ಪಿಡಿಯಲ್ ನೆನೆದಂ ೯೮

ವ॥ ಆಗಳ್

ತಡಿವಿಡಿದೊಯ್ಯನೊಯ್ಯನಡಿಯಿಟ್ಟು ಮಗುಟ್ದು ಕೊಳಕ್ಕೆ ಪಾಯ್ದು ನಿಂ
ದಡಿಗಡಿಗಂಬುಜಾಂಕುರಮನೀಟ್ದು ಕರ್ದುಂಕಿ ಕೆಲಕ್ಕೆ ಸಾರ್ದು ತ
ನ್ನೊಡನೆಯ ಹಂಸಗಳ್ಗೆ ಬಿಸನಾಳವನಿತ್ತು ಬಳಲ್ದು ಭೂಪನಿಂ
ಹಿಡಿವಡೆವಂದದಿಂ ಬೆದರ್ಚಿ ನಿಂದುದು ಹಂಸೆ ಸರೋಜಷಂಡದೊಳ್ ೯೯

ಎಲ್ಲರನಿರವೇಳ್ದವನಿಪ
ನಲ್ಲಲ್ಲಿಗೆ ನಿಂದು ಸಾರ್ದು ಕರಸರಸಿಜಮಂ
ಮೆಲ್ಲನೆ ನೀಡಲ್ ಸಿಕ್ಕಿ
ತ್ತೆಲ್ಲ ವಿಹಂಗಂಗಳಿಕ್ಕೆಗೋಡಿದವಾಗಳ್ ೧೦೦

ನಸುನಗೆ ಪೊಣ್ಮೆ ವಕ್ತ್ರದೊಳಿಳಾಪತಿ ತನ್ನ ಕರಕ್ಕೆ ಸಿಕ್ಕಿದಾ
ಯಸದ ಬಳಲ್ಕೆಯಿಂ ತಳೆದ ಹಂಸೆಯ ಹೆಚ್ಚಿದ ಪೊನ್ನ ಪಕ್ಕಮಂ
ಮಿಸುಪ ಕರಾಗ್ರದಿಂ ಸಸಿನೆಗೆಯ್ದು ಕುಜಂಗಳ ತಣ್ಣೆಳಲ್ಗಳೊಳ್
ಕಿಸಲಯದುತ್ತಮಾಸನದೊಳಿರ್ದು ಮರಾಳಮನೊಲ್ದು ನೋಡಿದಂ ೧೦೧

ಎಲ್ಲಿಂದ ಬಂದೆ ದೇಹ
ಕ್ಕೆಲ್ಲಿಯ ಪೊಂಗಱಿಗಳಾದುವೆಲ್ಲಿರ್ಪೆ ಇ

ಪ್ರಜೆಗಳಿಗೆ ಹೋಗುವಂತೆ ಹೇಳಿ ಆ ಮಹಾರಾಜನು ಮೆಲ್ಲನೆ ಮೇಲೆದ್ದು ಹಿಡಿಯಲು ನೆನೆದನು. ವ॥ ಆಗ ೯೯. ಹಂಸೆ ತೀರವನ್ನೇ ಅನುಸರಿಸಿ, ಹೆಜ್ಜೆಯಿಟ್ಟು, ಪುನಃ ಕೊಳದೊಳಗೆ ಹಾರಿ, ನಿಂತು. ಹೆಜ್ಜೆಹೆಜ್ಜೆಗೂ ತಾವರೆಯ ಮೊಗ್ಗನ್ನು ಎಳೆದುಕೊಂಡು ಕಚ್ಚಿ, ಕೆಲಕ್ಕೆ ಸರಿದು, ತನ್ನ ಜೊತೆಯಲ್ಲಿದ್ದ ಹಂಸಗಳಿಗೆ ತಾವರೆಯ ದಂಟನ್ನು ಕೊಟ್ಟು, ಆಯಾಸಗೊಂಡು, ಮಹಾರಾಜನಿಂದ ಹಿಡಿಯಲ್ಪಟ್ಟಿತೆಂಬಂತೆ ಕೊಳದಲ್ಲಿ ಹೆದರಿ ನಿಂತಿತು. ೧೦೦. ಮಹಾರಾಜನು ಎಲ್ಲರನ್ನೂ ಇರಲು ಹೇಳಿ, ಅಲ್ಲಲ್ಲಿಯೇ ನಿಂತು, ಸುಳಿದು, ಕರಪದ್ಮವನ್ನು ಮೆಲ್ಲನೆ ನೀಡಲು ಸಿಕ್ಕಿಬಿದ್ದಿತು. ಉಳಿದ ಹಕ್ಕಿಗಳೆಲ್ಲ (ತಮ್ಮ) ನಿವಾಸಸ್ಥಳಕ್ಕೆ ಓಡಿದುವು. ೧೦೧. ಮಹಾರಾಜನ ಮುಖದಲ್ಲಿ ನಸುನಗೆ ಹೊಮ್ಮಲು, ತನ್ನ ಕೈಗೆ ಸಿಕ್ಕಿದ, ಆಯಾಸದಿಂದ ಬಳಲಿಕೆಗೊಂಡ ಹಂಸದ ಅಧಿಕವಾದ ಹೊಂಬಣ್ಣದ ರೆಕ್ಕೆಯನ್ನು ಕಾಂತಿಯುಕ್ತವಾದ ಕೈಗಳಿಂದ ಮೆಲ್ಲನೆ ಸವರಿ, ಮರಗಳ ತಣ್ಣೆಳಲಿನಲ್ಲಿ ಚಿಗುರಿನ ಉತ್ತಮವಾದ ಪೀಠದಲ್ಲಿ ಕುಳಿತು ಹಂಸವನ್ನು ಪ್ರೀತಿಯಿಂದ ನೋಡಿದನು. ೧೦೨. ಎಲ್ಲಿಂದ ಬಂದೆ ? ಶರೀರಕ್ಕೆ ಹೊಂಗರಿಗಳು ಎಲ್ಲಿಯವು ? ಎಲ್ಲಿರುವೆ ? ಇನ್ನೆಲ್ಲಿಗೆ

ನ್ನೆಲ್ಲಿಗೆ ಪೋದಪೆಯೆನಗಿದ
ನೆಲ್ಲವನೊಲ್ಪುಱಿಪು ಚಿಂತೆಯಂ ಬಿಟ್ಟೀಗಳ್ ೧೦೨

ವ|| ಎಂಬುದುಂ

ಮೇರುಗಿರೀಂದ್ರದಂತಿಕದೊಳಿರ್ಪುದು ಸಂತತಮಪ್ಸರೋಗಣಂ
ವಾರಿವಿನೋದನಕ್ಕೆಳಸಿ ಬರ್ಪೆಡೆ ಹೇಮಮರಾಳ ಹೇಮಪಂ
ಕೇರುಹ ಹೇಮಮಯ್ಯ ಸ್ಥಳಮನಾರತಮಿಪ್ಪೆಡೆ ಕೇಳ್ ಮನೋಹರಾ
ಕಾರದಿನಿಪ್ಪ ಮಾನಸಸರೋವರಮುಜ್ವಲ ತೋಯಪೀವರಂ ೧೦೩

ಅಲ್ಲಿ ಸಮಂತು ಪುಟ್ಟಿ ಬಳೆದಿಂ ಪಡೆದಲ್ಲಿಯ ಪದ್ಮಬೀಜದಿಂ
ದಲ್ಲಿಯ ನಿರ್ಮಳೋದಕದ ಸೇವೆಯಿನೀ ತನು ಹೇಮವರ್ಣಮಾ
ಯ್ತಿಲ್ಲಿಯ ಚೆಲ್ವ ಪೂಗೊಳನನೀಕ್ಷಿಸಲೆಯ್ದಿ ಬಟಲ್ದು ಸಿಕ್ಕಿದೆಂ
ಬಲ್ಲವೊಲೊಲ್ದು ರಕ್ಷಿಸು ಮಹೀಪತಿಯೆನ್ನನಶಿಪ್ರಪನ್ನನಂ ೧೦೪

ಬಂಧುಗಳೊಂದನೀಕವೆನಸುಂ ಪಿತೃಮಾತೃಗಳೆಯ್ದೆ ವೃದ್ಧರೀ
ಬಂಧನವಾರ್ತೆಯಂ ತಿಳಿದರಾದೊಡವರ್ ತನುವಂ ನಿಜಾಪ್ತರಾ
ರುಂ ಧರಿಸಿರ್ಪರಲ್ತದಱಿನೆನ್ನಸುವಂ ಕುಡು ದೇವ ನೀಂ ದಯಾ
ಸಿಂಧು ಕೃಪಾಳು ದಾನಿ ಶರಣಾಗತರಕ್ಷಕನೆಂಬುದೊಪ್ಪದೇ ೧೦೫

ಹೋಗುವೆ ? ಚಿಂತೆಯನ್ನು ಬಿಟ್ಟು ನನಗೆ ಎಲ್ಲವನ್ನೂ ಪ್ರೀತಿಯಿಂದ ತಿಳಿಸು. ವ|| ಎನ್ನಲು, ೧೦೩. ಮೇರುಪರ್ವತದ ಸಾನುಪ್ರದೇಶದಲ್ಲಿ ಮನಸ್ಸನ್ನು ಅಪಹರಿಸುವಂತೆ ಉಜ್ವಲವಾದ ಅಪರಿಮಿತವಾದ ನೀರಿನಿಂದ ಕೂಡಿ ಮಾನಸ ಸರೋವರವಿರುವುದು. ಸರ್ವದಾ ಅಪ್ಸರೆಯರ ಸಮೂಹವು ಜಲಕೇಳಿಯನ್ನು ಬಯಸಿ ಬರುವಲ್ಲಿ, ಚಿನ್ನದ ಹಂಸವೂ, ಚಿನ್ನದ ಪದ್ಮವೂ, ನಿರಂತರವಾಗಿ ಚಿನ್ನವೇ ತಾನಾಗಿರುವ ಸ್ಥಳವೇ ನಾನು ವಾಸಿಸುವ ಸ್ಥಳ.೧೦೪. ಅಲ್ಲಿ ಹುಟ್ಟಿ ಬೆಳೆದಂದಿನಿಂದ ಅಲ್ಲಿರುವ ಪದ್ಮಬೀಜದಿಂದಲೂ ಅಲ್ಲಿನ ಪರಿಶುದ್ಧವಾದ ನೀರನ್ನು ಕುಡಿಯುವುದರಿಂದಲೂ ಈ ಶರೀರ ಹೊಂಬಣ್ಣವಾಯಿತು, ಇಲ್ಲಿರುವ ಚೆಲುವಾದ ಹೂಗೊಳವನ್ನು ನೋಡಲೆಂದು ಬಂದು ಬಳಲಿ ಸಿಕ್ಕಿಬಿದ್ದೆನು. ಎಲೈ ಮಹಾರಾಜನೆ, ಮರೆಹೊಕ್ಕಿರುವ ನನ್ನನ್ನು ನೀನರಿತಂತೆ ಪ್ರೀತಿಸಿ ಸಂರಕ್ಷಿಸು. ೧೦೫. ಸಮಸ್ತ ಬಂಧುವರ್ಗದವರೂ, ವಯೋವೃದ್ಧರಾದ ತಂದೆ ತಾಯಿಗಳೂ, ನನ್ನ ಅಚ್ಚುಮೆಚ್ಚಿನವರೂ ಈ ಬಂಧನದ ಸುದ್ದಿಯನ್ನು ತಿಳಿದಿದ್ದೇ ಆದರೆ ಯಾರೂ ಶರೀರ ಸಹಿತರಾಗಿ ಉಳಿಯುವುದಿಲ್ಲ. ಆದ್ದರಿಂದ ಎಲೈ ಸ್ವಾಮಿಯೆ, ನನಗೆ ಪ್ರಾಣಭಿಕ್ಷೆಯನ್ನು ಕೊಡು. ನೀನು ದಯಾಸಾಗರ, ಕರುಣಾಳು, ದಾನಿ, ಮರೆಹೊಕ್ಕವರನ್ನು ಸಂರಕ್ಷಿಸುವವನು

ಶಿಕ್ಷಿಸುವೊಡೆ ಮುಳಿದಾಂತ ವಿ
ಪಕ್ಷಂಗಳ ಕಾದಿ ಪಿಡಿವುದಲ್ಲದೆ ಮುಳಿಸಿಂ
ಪಕ್ಷಿಗಳಂ ಪಿಡಿವುದು ನಿಜ
ಲಕ್ಷಣಮೇ ಭೂಭುಜರ್ಗೆ ನೃಪಕುಲತಿಲಕಾ ೧೧೬

ದ್ವಿಜರಂ ಪಾಲಿಸುವುದು ಭೂ
ಭುಜರ ಗುಣಂ ತೀರ್ಥವಾಸಿಯಾಗಿರ್ದೆನ್ನಂ
ದ್ವಿಜನಂ ಸೆರೆಗೆಯ್ದೊಡೆ ವಿ
ಶ್ವಜನಂ ನಿಂದಿಸದೆ ನಿನ್ನನವನೀನಾಥಾ ೧೧೭

ಧರಣಿಯ ಪುದುವಿಂ ಬಲ್ಸಂ
ಗರಕೈದುವ ರಾಜಹಂಸರಂ ಪಿಡಿವುದು ಖೇ
ಚರಬಲದ ರಾಜಹಂಸನ
ನರವರಿಸದೆ ಪಿಡಿವರುಂಟೆ ರಾಜಕುಮಾರಾ ೧೧೮

ನಿನಗಾನೇವಾಟ್ತಿಯೆನ್ನಿಂ ಪಸಿವಡಗದು ಹೇಮಪ್ರಭಾದೇಹದಿಂ ಕಾಂ
ಚನಲೋಭಂ ವ್ಯರ್ಥಮಂತಃಪುರಸಮಿತಿಗೆ ಲೀಲಾಶುಕಂ ಸಾರಿಕಾ ಹಂ

ಎಂಬ ಮಾತು ಒಪ್ಪದೆ ಇರಬಲ್ಲುದೆ ? ೧೧೬. ಎಲೈ ಮಹಾರಾಜಶ್ರೇಷ್ಠನೆ ! ಶಿಕ್ಷಿಸಬೇಕೆಂದಿದ್ದರೆ ಕೋಪಗೊಂಡು ಮೇಲೆ ಬೀಳುವ ಶತ್ರುಗಳನ್ನು ಎದುರಿಸಿ ಹಿಡಿಯುವುದನ್ನು ಬಿಟ್ಟು, ಸಿಟ್ಟಿನಿಂದ ಹಕ್ಕಿಗಳನ್ನು ಸೆರೆಹಿಡಿಯುವುದು ಮಹಾರಾಜರಾದವರಿಗೆ ಲಕ್ಷಣವೆ ? ೧೧೭. ಬ್ರಾಹ್ಮಣರನ್ನು ಕಾಪಾಡುವುದು ಮಹಾರಾಜರ ಗುಣ. ಸರೋವರದಲ್ಲಿರುವ ಹಕ್ಕಿಯಾದ ನನ್ನನ್ನು ಸೆರೆಹಿಡಿದರೆ, ಮಹಾರಾಜನೆ, ನಿನ್ನನ್ನು ವಿಶ್ವದ ಜನರೆಲ್ಲ ನಿಂದಿಸದೆ ಇರುವರೆ ? (ಇಲ್ಲಿ 'ದ್ವಿಜ' ಎಂಬ ಶಬ್ದಕ್ಕೆ 'ಬ್ರಾಹ್ಮಣ' ಮತ್ತು 'ಹಕ್ಕಿ' ಎಂದು ಇರುವ ಎರಡು ಅರ್ಥಗಳನ್ನೂ ಬಹಳ ಸ್ವಾರಸ್ಯವಾಗಿ ಕವಿ ಬಳಸಿರುತ್ತಾನೆ.) ೧೧೮. ಎಲೈ ರಾಜಕುಮಾರನೆ ! ಭೂಮಿಯನ್ನು ಪಡೆದ (ಉದ್ದೇಶದಿಂದ) ದೊಡ್ಡ ಯುದ್ಧವನ್ನು ಹೂಡುವ ರಾಜಶ್ರೇಷ್ಠರನ್ನು ಹಿಡಿಯತಕ್ಕುದು (ಉಚಿತ) ಪಕ್ಷಿಸಮೂಹಕ್ಕೆ ಸೇರಿದ ರಾಜಹಂಸವನ್ನು ವಿಚಾರಿಸದೆ ಹಿಡಿಯತಕ್ಕವರುಂಟೆ ? ೧೧೯. ಎಲೈ ರಾಜನೆ ! ನಿನಗೆ ನನ್ನಿಂದ ಏನು ಪ್ರಯೋಜನ ? ನನ್ನಿಂದ (ನಿನ್ನ) ಹಸಿವೆಯೂ ಅಡಗುವುದಿಲ್ಲ. ಹೊಂಬಣ್ಣದ ದೇಹದಿಂದ ಚಿನ್ನದ ಆಸೆಯೂ ವ್ಯರ್ಥ ! (ನಿನ್ನ) ಅಂತಃಪುರಸಮೂಹಕ್ಕೆ ಲೀಲಾಮಯವಾದ ಗಂಡುಗಿಳಿಗಳೂ, ಹೆಣ್ಣುಗಿಳಿಗಳೂ, ಹಂಸಸಮೂಹಗಳೂ ಕೋಟಿ

ಸನಿಕಾಯಂ ಕೋಟಿಯುಂಟಾಗಿ ಕರಸರಸಿಯೊಳ್ ಜೀವಿಯಂ ಬಿಟ್ಟು ಸತ್ಕೀ
ರ್ತನೆಯಂ ಕೂರ್ತೆನ್ನೊಳೀಗಳ್ ಪಡೆವುದು ನಿನಗತ್ಯಂತಲಾಭಂ ನೃಪಾಲಾ ೧೦೯

ಆದಿಯೊಳೊರ್ಬ ದಾನಿ ಶಿಬಿಯೆಂಬ ನೃಪಂ ಪೃಥುಸೇನನೊಂದು ಚೆ
ಲ್ವಾದ ಕಪೋತಮಂ ಪಿಡಿಯಲೆಯ್ದಿದೊಡಾ ಕಿಱುವಕ್ಕಿ ಬೆಂಬೊಗಲ್
ಬೇದವಿದೇಕೆನುತ್ತದಱ ವೈರಿಗೆ ತನ್ನಯ ಮಾಂಸವಿತ್ತದಂ
ಕಾದನದೇಕೆ ಕೇಳ್ದಱಿಯ ಕೇವಳಮೋ ಭಯಭೀತರಕ್ಷಣಂ ೧೧೦

ಗಱಿಗಳ್ ತರಭರವಾದವು
ಪೆಱಗೈ[ದಿ]ಯಂಡಜಂಗಳಂಜುತ್ತಿರ್ಕುಂ
ನೆಱೆಯೆದೆಯಾಱುತ್ತಿದೆ ಬೇ
ಸಱಿಸದೆ ಬಿಡು ದೇವ ನಿನ್ನ ಕಾಲ್ಗೆಱಗಿದಪೆಂ ೧೧೧

ವ॥ ಎಂಬುದುಂ

ಈಗೆ ಕರುಣಾಳುವಪ್ಪ ಗುಣದಿಂ ಶರಣಾಗತಜೀವಹಿಂಸೆಯಂ
ಬಗೆಯದ ದೂಸಱಿಂ ಕೊಳದೊಳಾಗಳೆ ಸಿಕ್ಕಿದ ಪೊನ್ನ ಹಂಸೆಯಂ
ಖಗತತಿ ನೋಡೆ ಬಿಟ್ಟು ಗಱಿ ನೊಂದಪವೆಲ್ಲಿಗೆ ಪೋಪೆಯೆಂದು ಮೆ
ಲ್ಲಗೆ ಪೊಱಪೊಣ್ಮಲಾಗಳದು ಕೈಮುಗಿದೆಂದುದದೊಂದು ಕಾರ್ಯಮಂ ೧೧೨

ಗಟ್ಟಲೆ ಇರುವುದರಿಂದ, ನನಗೆ ಒಲಿದು ಕರಪದ್ಮದಲ್ಲಿರುವ (ಈ) ಜೀವಿಯನ್ನು ಬಿಟ್ಟು ಒಳ್ಳೆಯ ಹೆಸರನ್ನು ಪ್ರೀತಿಯಿಂದ ನನ್ನಿಂದ ಗಳಿಸುವುದು ನಿನಗೆ ಅತ್ಯಧಿಕ ಲಾಭವೇ ಸರಿ ! ೧೧೦. ಪೂರ್ವದಲ್ಲಿ ದಾನಿಯಾದ ಶಿಬಿಯೆಂಬ ರಾಜನು, ಪೃಥುಸೇನನು ಸುಂದರವಾದ ಒಂದು ಪಾರಿವಾಳವನ್ನು ಹಿಡಿಯಲು ಬಂದಾಗ, ಆ ಚಿಕ್ಕ ಹಕ್ಕಿ (ಶಿಬಿಯನ್ನು) ಮರೆಹೊಗಲು, 'ಇದಕ್ಕಾಗಿ ದುಃಖವೇಕೆ ?' ಎಂದು ಅದರ (ಹಕ್ಕಿಯ) ಶತ್ರುವಿಗೆ ತನ್ನ ಮಾಂಸವನ್ನು ನೀಡಿ, ಅದನ್ನು ಕಾಪಾಡಿದುದನ್ನು ಕೇಳಿಲ್ಲವೆ ? ಭಯಭೀತರಾದವರನ್ನು ಸಲಹುವುದು ಸಾಧಾರಣವಾದುದೇ ? ೧೧೧. ರೆಕ್ಕೆಗಳು ಅಸ್ತವ್ಯಸ್ತವಾದುವು. ಹಿಂದೆ ಉಳಿದಿರುವ ಹಕ್ಕಿಗಳು ಅಂಜುತ್ತಿವೆ. ಎದೆಯಾದರೋ ಪೂರ್ತಿಯಾಗಿ ಒಣಗುತ್ತಿದೆ. ಎಲೈ ದೇವನೆ ! ಬೇಸರಪಡದೆ (ನನ್ನನ್ನು) ಬಿಡು. ನಿನ್ನ ಕಾಲಿಗೆ ನಮಸ್ಕರಿಸುವೆನು ವ॥ ಎನ್ನಲು ೧೧೨. ತುಂಬ ದಯಾಳುವಾದ ಗುಣದಿಂದಲೂ, ಮರೆಹೊಕ್ಕವರ ಜೀವಹಿಂಸೆಯನ್ನು ಭಾವಿಸದ ಕಾರಣದಿಂದಲೂ, ಕೊಳದಲ್ಲಿ ಆಗ ಸಿಕ್ಕಿದ ಹೊನ್ನಿನ ಕಾಂತಿಯ ಹಂಸವನ್ನು, ಪಕ್ಷಿಸಂಕುಲವು ನೋಡುತ್ತಿರುವಂತೆಯೇ ಬಿಟ್ಟು ರೆಕ್ಕೆಗಳಿಗೆ ನೋವಾಗಿರುವುದಷ್ಟೆ ? ಎಲ್ಲಿಗೆ ಹೋಗುತ್ತೀಯೆ ? ಎನ್ನಲು ಆ ಹಕ್ಕಿ ಮೆಲ್ಲನೆ ಹೊರಹೊರಟು, ಆಗ ಕೈಮುಗಿದು, ಒಂದು ಕಾರ್ಯವನ್ನು ಕುರಿತು ಹೇಳಿತು.

ವ|| ಅದೆಂತೆನೆ

ಸತ್ಯ ಪರೋಪಕಾರ ಮಹದುನ್ನತಿ ನಿನ್ನದದಾದೊಡಂ ಮನಂ
ಪ್ರತ್ಯುಪಕಾರಮಂ ನಿನಗೊಡರ್ಚುವೆನೆಂದಪುದೆನ್ನ ವಾಕ್ಯಮಂ
ಸತ್ಯಮೆನುತ್ತೆ ಮನ್ನಿಪುದು ಬಿನ್ನವಿಪೆಂ ಚರಣಕ್ಕನಾರತಂ
ಭೃತ್ಯಸಮಂ ರಹಸ್ಯಮನೊಡಂಬಡು ದೂರಿರವೇಟ್ಟುದೆಲ್ಲರಂ ೧೧೩

ವ|| ಅಂತೆಗೆಯ್ಯಲನಂತರಂ

ನಿನಗಾಂ ಮಾಟ್ಪುಪಕಾರಮಾವುದು ಕಳಾಸಂಪನ್ನೆ ಸೌಭಾಗ್ಯವ
ರ್ಧನೆಯಿರ್ಪಳ್ ದಮಯಂತಿ ಕುಂಡಿನಪುರಕ್ಕಾಂ ಬೇಗದಿಂ ಪೋಗಿ ಮಾ
ನಿನಿಯಂ ನಿನ್ನೊಡಗೂಡುವಂತೆಸಗಿ ಮತ್ತಾ ವಾರ್ತೆಯಂ ಪೇಟ್ದ ಸ
ಜ್ಜನನಪ್ಪೆಂ ತೊದಳಿಲ್ಲೆನುತ್ತೆ ನುಡಿದಂ ಹಂಸೋತ್ತಮಂ ಸತ್ಯಮಂ ೧೧೪

ಆ ನುಡಿಗೆ ಮೆಚ್ಚಿ ಭೂಪಂ
ಜ್ಞಾನಿಯೆನಿಪ್ಪಂಚೆಯಂ ಕರಂ ಮನ್ನಿಸಿ ಮ
ನ್ಮಾನಸಮನಱಿದ ನಿನ್ನನ
ದೇನೆಂದುಪಚರಿಪೆನೆಂದದಂ ಬೀಟ್ಕೊಟ್ಟಂ ೧೧೫

ವ|| ಅಂತೊಳ್ಪಿನಿಂ ಬೀಟ್ಕೊಟ್ಟು

ವ|| ಅದು ಹೇಗೆಂದರೆ, ೧೧೩. ಸತ್ಯ ಮತ್ತು ಪರೋಪಕಾರಗಳ ಮಹತ್ತರವಾದ ಉನ್ನತಿ ನಿನ್ನದು. ಆದರೂ, ನಿನಗೆ ಪ್ರತ್ಯುಪಕಾರವನ್ನು ಮಾಡುವೆನೆಂದು ಎನ್ನ ಮನಸ್ಸು ಹೇಳುತ್ತಿದೆ. ನನ್ನ ಮಾತು ಸತ್ಯವೆಂದು ಮನ್ನಿಸುವುದು. ನಿನ್ನ ಪಾದದಲ್ಲಿ ನಿರಂತರವಾದ ಸೇವಕನಂತೆ ವಿಜ್ಞಾಪಿಸಿಕೊಳ್ಳುತ್ತೇನೆ. ಈ ಗುಟ್ಟಿಗೆ ನೀನು ಒಪ್ಪಿಕೋ, ಎಲ್ಲರನ್ನೂ ದೂರವಿರುವಂತೆ ಹೇಳುವುದು. ವ|| ಹಾಗೆಯೇ ಮಾಡಲು ಆ ಬಳಿಕ, ೧೧೪. "ನಿನಗೆ ನಾನು ಮಾಡುವ ಉಪಕಾರವಾದರೂ ಯಾವುದು ? ಕಳಾಸಂಪನ್ನಳೂ, ಸೌಭಾಗ್ಯವನ್ನು ಬೆಳೆಯಿಸುವವಳೂ ಆದ ದಮಯಂತಿರುವಳು. ನಾನು ಕೂಡಲೆ ಕುಂಡಿನಪುರಕ್ಕೆ ಹೋಗಿ ಆ ಮಾನಿನಿಯನ್ನು ನಿನಗೆ ಒಲಿಯುವಂತೆ ಮಾಡಿ, ಪುನಃ ಆ ಸಂಗತಿಯನ್ನು (ನಿನಗೆ) ಹೇಳಿ ಒಳ್ಳೆಯವನಾಗುತ್ತೇನೆ. ಇದರಲ್ಲಿ ಸುಳ್ಳಿಲ್ಲ ಎಂದು ಆ ಹಂಸಶ್ರೇಷ್ಠವು ಸತ್ಯವನ್ನು ಹೇಳಿತು. ೧೧೫. ಮಹಾರಾಜನು ಆ ಮಾತಿಗೆ ಮೆಚ್ಚಿ, ಜ್ಞಾನಿಯಾದ ಹಂಸವನ್ನು ಅತಿಶಯವಾಗಿ ಮನ್ನಿಸಿ, "ನನ್ನ ಮನಸ್ಸನ್ನು ತಿಳಿದುಕೊಂಡ ನಿನ್ನನ್ನು ಅದೇನೆಂದು ಸನ್ಮಾನಿಸಲಿ ?" ಎಂದು ಅದನ್ನು ಕೊಟ್ಟು ಕಳುಹಿಸಿದನು. ವ|| ಹಾಗೆ ಒಳ್ಳಿತಾಗಿ ಕೊಟ್ಟು ಕಳು

ಎತ್ತಣ ಬೇಂಟೆಯೆತ್ತಣ ಸರೋವರವೆತ್ತಣ ಹಂಸೆ ನಾಡೆ ಮ (?)
ಚ್ಚಿತ್ತದ ತಾಪಮಂ ತಿಳಿವುದೆತ್ತಣದೇತೆಜದಿಂ ವಿದರ್ಭೆಯುಂ
ಪತ್ತಿರೆ ತಪ್ಪೆನೆಂಬ ಬಗೆಯೆತ್ತಣದೇದು ನೃಪಂ ಬಟಿಕ್ಕೆ ಲೋ
ಕೋತ್ತಮಮಪ್ಪ ತದ್ವಿಮಳಪಟ್ಟಣಮಂ ಪುಗುತಂದನಟ್ಟಿಯಿಂ ೧೧೬

ತೊಳಗುವ ಪೂರ್ಣಚಂದ್ರಮುಖಮಂಡಲದಿಂದಮದೆಂದು ಚಿತ್ತಮಂ
ಬೆಳಗುವಳೋ ಕುಚಾದ್ರಿಯೊಳದೆಂದು ಮನೋಮೃಗಮಂ ನಿರಂತರಂ
ಸುಳಿಸುವಳೋ ಕಟಾಕ್ಷಮಣಿಹಾರಮದೆಂದು ಮದೀಯ ಕಂಠದೊಳ್
ಕೊಳಿಸುವಳೋ ಸಮಂತು ದಮಯಂತಿಯೆನುತ್ತತಿಚಿಂತಿಪಂ ನೃಪಂ ೧೧೭

ಅತ್ತ ವಿದರ್ಭಭೂಪತಿಯ ಕುಂಡಿನಪಟ್ಟಣದೊಪ್ಪಮಂ ಮುದಂ
ಬೆತ್ತಿರೆ ಪೋಗಿ ಕಂಡದಱ ಪಾರ್ಶ್ವದೊಳಿರ್ಪ ವನಪ್ರದೇಶದೊಂ
ದುತ್ತಮ ಪದ್ಮಷಂಡದೊಳನೇಕ ಜಳಾಂಡಜವಿರ್ದವಲ್ಲಿ ಮ
ಚ್ಚಿತ್ತವಿಳಾಸಮೆಂದು ನಲವಿಂ ನೆಲಸಿರ್ದುದು ಮಾನಸೌಕಸಂ ೧೧೮

ಬಕ್ಕುಗಳಂಚೆ ಕೊಂಚೆ ಜಳವಾಯಸ ಸಂತತಿ ಜಕ್ಕವಕ್ಕಿ ಬೆ
ಳ್ವಕ್ಕಿ ಕರಂಡೆ ಕೋಂಕಬೆ ಮೂಡಿ ಮುಳುಂಗುವನಂಬು ಕುಕ್ಕುಟಂ

ಹಿಸಿ, ೧೧೬. ಎಲ್ಲಿಯ ಬೇಟೆ ? ಎಲ್ಲಿಯ ಸರೋವರ ? ಎಲ್ಲಿಯ ಹಂಸೆ ? ವಿಶೇಷವಾಗಿ (ನನ್ನ) ಮನಸ್ಸಿನ ತಾಪವು ತಿಳಿಯಾಗುವುದೆಂತು ? ಯಾವುದೇ ರೀತಿಯಲ್ಲಾದರೂ ವಿದರ್ಭರಾಜನ ಮಗಳಾದ ದಮಯಂತಿಯನ್ನು ಸಮೀಪಕ್ಕೆ ಕರೆತರುತ್ತೇನೆ ಎನ್ನುವ ಮನಸ್ಸಾದರೂ ಎಲ್ಲಿಯದು ? ಎಂಬುದಾಗಿ ಮಹಾರಾಜನು ಸುಪ್ರಸಿದ್ಧವಾದ ಆ ಶ್ರೇಷ್ಠ ಪಟ್ಟಣದತ್ತ ಪ್ರೀತಿಯಿಂದ ಬರತೊಡಗಿದನು. ೧೧೭. ದಮಯಂತಿ ಚೆನ್ನಾಗಿ ಪ್ರಕಾಶಿಸುವ ಪೂರ್ಣಚಂದ್ರಾನನದಿಂದ (ನನ್ನ) ಮನಸ್ಸನ್ನು ಎಂದು ಬೆಳಗುವಳೋ, ಸ್ತನಗಿರಿಗಳಲ್ಲಿ ನನ್ನ ಮನಸ್ಸೆಂಬ ಜಿಂಕೆಯನ್ನು ಸರ್ವದಾ ಎಂದು ಓಡಾಡಿಸುವಳೋ, (ಆಕೆಯ) ಕಡೆಗಣ್ಣ ನೋಟವೆಂಬ ಮುತ್ತಿನ ಹಾರವನ್ನು ನನ್ನ ಕೊರಳಿನಲ್ಲಿ ಎಂದು ತೊಡಿಸುವಳೋ ಎಂಬುದಾಗಿ ಮಹಾರಾಜನು ವಿಶೇಷವಾಗಿ ಆಲೋಚಿಸುವನು. ೧೧೮. ಅತ್ತ ವಿದರ್ಭರಾಜನ ಕುಂಡಿನಪಟ್ಟಣದ ಅಂದ ಚೆಂದಗಳನ್ನು ಸಂತೋಷಿತನಾಗಿ ಹೋಗಿ ನೋಡಿ, ಅದರ ಪಕ್ಕದಲ್ಲಿದ್ದ ಉದ್ಯಾನವನದ ಉತ್ತಮವಾದ ಪದ್ಮಸರೋವರದಲ್ಲಿ ಅನೇಕ ನೀರ್ವಕ್ಕಿಗಳಿರಲು ಅಲ್ಲಿ ನನ್ನ ಮನೋವಿಹಾರವೆಂದು (ಬಗೆಯಲು) (ಆತನ) ಮಾನಸಪಕ್ಷಿಯು ಸಂತೋಷವಾಗಿ ನೆಲಸಿತ್ತು. ೧೧೯. ಬಕ್ಕುಗಳು (?), ಹಂಸ, ಕ್ರೌಂಚಪಕ್ಷಿ, ನೀರುಕಾಗೆಗಳ ಸಮೂಹ, ಚಕ್ರವಾಕ, ಬೆಳ್ಳಕ್ಕಿ,

ಬಕ್ಕು ಬಳಾಕಿ ಮೀಂಬುಲಿಗನೊಪ್ಪುವ ಸಾರಸವಕ್ಕಿಯೆಂಬ ನೀ
ರ್ವಕ್ಕಿಗಳಿಂ ಮನಂಗೊಳಿಸುತಿರ್ಪುದು ಪೂಗೊಳನಂಬುಜಾವಳಿ ೧೧೯

ದನುಜರ ಭೀತಿಯಿಂದಮೃತರಾಶಿಯನಿಂದ್ರನತಿಪ್ರಯತ್ನದಿಂ
ದನುಜವಿರೋಧಿಯಂಗನೆಯೆನಿಪ್ಪ ಧರಿತ್ರಿಯ ಕಯ್ಯೊಳೊಪ್ಪುಗೊ
ಟ್ಟನೊ ದಿಟವೆಂಬಿನಂ ಮಧುರನಿರ್ಮಳ ಶೀತಳವಾರಿಯಿಂ ಜಗ
ಜ್ಜನದನುರಾಗಮಂ ಪಡೆದುದೊಪ್ಪುವ ಪೂಗೊಳನೂರ್ಮಿಸಂಕುಳಂ ೧೨೦

ಗಗನತಳಂ ನಿಜಾಕೃತಿಯನೀಯದೊಡೆಂತೆಜದಿಂದ ಬಂದವ
ಲ್ಲಿಗೆ ಘನ ಮೀನ ಕರ್ಕಟಕರಾಶಿಗಳುತ್ತಮ ರಾಜಹಂಸಪಂ
ಕ್ತಿಗಳೆನಿಪೊಂದು ಸಂಕೆಯನತೀವ ವಿಶಾಲದಿನೂರ್ಜಿತ ಪ್ರಭಾ
ಳಿಗಳಿನನಾರತಂ ಮೆಜೆವುದುದ್ಧತ ಶೀಕರಮಂಬುಜಾಕರಂ ೧೨೧

ವ॥ ಮತ್ತಮಾ ಸರೋವರಂ ಜಲಕೇಳಿಯನೆಳಸುವ ಲಾವಣ್ಯವತಿಯರ ಲಾವಣ್ಯರಸಮಂ ತನ್ನ ಘನರಸದಿಂ ಪದಿರ್ಮಡಿಸಿಯುಂ, ಶಿಶಿರಶೀಕರಶೀತಳಾಂಬುಸೇವನೆಯಿಂ ಭಾವಭವೋದ್ದೀಪನ ತಾಪಮಂ ಪರಿಲೋಪಿಸಿಯುಂ, ತೆರೆವೊಯ್ಲ ತುಂತುರ್ವನಿಯ ತೆಂಗಾಳಿಯಿಂ ಸಂಗವಿಯೋಗಿಗಳ

ಕರಂಡೆ (?), ಕೋಂಕುಳಲೆ (?), ಮೂಡಿ ಮುಳುಗುವ ನೀರ್ಕೋಳಿ, ಬಕ್ಕು (?) ಬಲಾಕ, ಮೀಂಬುಲಿಗ, ಒಪ್ಪುವಂತಿರುವ ಕೊಕ್ಕರೆ ಎಂಬ ನೀರ್ವಕ್ಕಿಗಳಿಂದ ತಾವರೆಗಳಿರುವ ಹೂಗೊಳವು ಮನಸ್ಸನ್ನು ಸೆಳೆಯುವಂತಿದ್ದಿತು. ೧೨೦. ರಾಕ್ಷಸರ ಭಯದಿಂದ ಇಂದ್ರನು ಅಮೃತರಾಶಿಯನ್ನು ಅತ್ಯಂತ ಪ್ರಯತ್ನದಿಂದ ರಾಕ್ಷಸಶತ್ರುವಾದ ಶ್ರೀಮನ್ನಾರಾಯಣನ ಹೆಂಡತಿಯಾದ ಭೂದೇವಿಯ ಕೈಯಲ್ಲಿ ಒಪ್ಪಿಸಿಕೊಟ್ಟಿದ್ದು ನಿಜವೋ ಎಂಬಂತೆ, ಅಲೆಗಳ ಸಮೂಹದಿಂದ ಕೂಡಿ ಒಪ್ಪುವಂತಿರುವ ಹೂಗೊಳವು ಸಿಹಿಯೂ, ಶುಭ್ರವೂ ಆದ ತಂಪುನೀರಿನಿಂದ ಜಗತ್ತಿನ ಜನರ ಪ್ರೀತಿಯನ್ನು ಗಳಿಸಿತು. ೧೨೧. ಆಕಾಶತಲವು ತನ್ನ ಸ್ವರೂಪವನ್ನು ತೋರಗೊಡದೆ, ಶ್ರೇಷ್ಠವಾದ ಮೀನು, ಮೊಸಳೆಗಳ ಸಮೂಹವು ಹೇಗೆತಾನೆ ಅಲ್ಲಿಗೆ ಬಂದುವು ? (ಇಲ್ಲಿ ಮೀನು, ಕರ್ಕಟಕ ಎಂಬ ಶಬ್ದಗಳು ಆಯಾ ಹೆಸರಿನ ನಕ್ಷತ್ರರಾಶಿಗಳನ್ನು ನಿರ್ದೇಶಿಸುತ್ತವೆ.) ಶ್ರೇಷ್ಠವಾದ ರಾಜಹಂಸಗಳೆಂಬಂತೆ ಭ್ರಾಂತಿಯನ್ನುಂಟುಮಾಡುವ ಅಪಾರವಾದ ಹರವಿನಿಂದಲೂ, ಉನ್ನತವಾದ ಪ್ರಭಾಸಮೂಹಗಳಿಂದಲೂ, ಮೇಲೆದ್ದ ನೀರಿನ ತುಂತುರುಗಳಿಂದಲೂ ತಾವರೆಗೊಳವು ಸರ್ವದಾ ವಿರಾಜಿಸುತ್ತಿರುವುದು. ವ॥ ಮತ್ತೆ, ಆ ಸರೋವರವು ಜಲಕ್ರೀಡೆಯನ್ನು ಬಯಸುವ ಸುಂದರಿಯರ ಲಾವಣ್ಯರಸವನ್ನು ತನ್ನ ನೀರಿನಿಂದ ಹತ್ತುಮಡಿ ಹೆಚ್ಚಿಸುವಂತೆಯೂ, ತಣ್ಣಗಿರುವ ನೀರಿನ ತುಂತುರುಗಳುಳ್ಳ ತಣ್ಣೀರಿನ ಉಪಚಾರದಿಂದ ಮನ್ಮಥನಿಂದ ಉದ್ಭವಿಸುವ ಸಂಕಟವನ್ನು ನಿವಾರಿಸುತ್ತಲೂ

ಸಂಕೋಚಪ್ರಾಣವಂ ಸಪ್ರಾಣಿಸಿಯುಂ, ಕೋಮಳಕಳಹಂಸಕೋಕಕೂಜಿತದಿಂ ಕಾಮಕೋದಂಡ ಟಂಕಾರರವಮಂ ಪರಿಚ್ಛಾದಿಸಿಯುಂ, ಮನೋಹರಾಕಾರದಿಂ ಮೆಱೆವುದಂತುಮಲ್ಲದೆಯುಂ,

ಸ್ಫಟಿಕ ಹಿಮೋಪಲಪ್ರಥಿತ ಕಾಂತಿಯನಿರ್ಕುಳಿಗೊಂಡು ಚಂದ್ರಿಕಾ
ಪಟಲದ ಶೈತ್ಯಮಾರ್ದವಗುಣಕ್ಕೆ ಪದಿರ್ಮಡಿಯಾಗಿ ತೀರ ಸ
ದ್ವಿಟಪಿಗಳೊಳ್ ಕುಕಿಲ್ವ ಮಱಿಗೋಗಿಲೆಯಿಂ ಮೊರ[ಯಿಪ್ಪ ತುಂಬಿಯಿಂ]
ನಟಿಪ ಮಯೂರಿಯಿಂ ಗಿಳಿಯ ಮೆಲ್ನುಡಿಯಿಂದೆಸೆದಿರ್ಪುದಾ ಕೊಳಂ ೧೨೨

ಲಲನೆಯರಾಸ್ಯಮಂ ನಯನಮಂ ಗತಿಯಂ ಮೃದುಕೇಶಪಾಶಮಂ
ಸುಲಲಿತಗಂಧದಿಂ ನಯದಿನೊಪ್ಪದಿನಂಬುದ ನೀಲವರ್ಣದಿಂ
ಸಲೆ ಪೊಸತಾಗಿಸಲ್ ನೆರೆವ ನೀರಜ ಕೈರವರಾಜಹಂಸ ಶೈ
ವಳಲತೆಯಿಂ ಮನಂಗೊಳಿಸುಗುಂ ಮಹಿಮಾಕರಮಂಬುಜಾಕರಂ ೧೨೩

ವಿಜಯಮನೋಭವಂಗೆ ಶರಸಂತತಿಯಂ ಕಡುವಿಲ್ಲನಾರಿಯಂ
ಧ್ವಜಮನಃಪಾಸ್ತಿಗೆಯ್ಯಲವನೀಯಲದೇಕೆನುತ್ತೆ ಕಾಮಭೂ

ಅಲೆಗಳ ಹೊಯ್ದಾಟದ ತುಂತುರುಹನಿಗಳ ತಂಗಾಳಿಯಿಂದ ವಿರಹಿಗಳ ಕೃಶವಾದ ಪ್ರಾಣವನ್ನು ಸಚೇತನಗೊಳಿಸಿಯೂ, ಕೋಮಲವಾದ ಕಳಹಂಸ, ಕೋಗಿಲೆಗಳ ಗಾನ ದಿಂದ ಕಾಮನಬಿಲ್ಲಿನ ಠಂಕಾರಶಬ್ದವನ್ನು ಮುಚ್ಚಿಡುವಂತೆಯೂ ಮನೋಜ್ಞವಾದ ಆಕಾರದಿಂದ ಮೆರೆಯುವುದು. ಅಷ್ಟೇ ಅಲ್ಲದೆ, ೧೨೨. ಆ ಕೊಳವು ಸ್ಫಟಿಕ ಮತ್ತು ಚಂದ್ರಕಾಂತಶಿಲೆಗಳ ಸುಪ್ರಸಿದ್ಧವಾದ ಪ್ರಕಾಶವನ್ನು ಅಪಹರಿಸಿ, ಬೆಳುದಿಂಗಳ ರಾಶಿಯ ತಂಪಾದ ಮೃದುತ್ವಗುಣಕ್ಕೆ ಹತ್ತು ಮಡಿಯಾಗಿ (ಹತ್ತು ಪಟ್ಟು), ದಡದಲ್ಲಿನ ಒಳ್ಳೆಯ ವನಗಳಲ್ಲಿ ಕೂಗುವ ಕೋಗಿಲೆಮರಿಗಳಿಂದಲೂ, ಝೇಂಕರಿಸುವ ದುಂಬಿಗಳಿಂದಲೂ, ನರ್ತಿಸುವ ನವಿಲುಗಳಿಂದಲೂ, ಗಿಳಿಗಳ ಮೆಲ್ನುಡಿಗಳಿಂದಲೂ ತೋರಿಬರುತ್ತಿದ್ದಿತು. ೧೨೩. ಸ್ತ್ರೀಯರ ಮುಖವನ್ನೂ ಕಣ್ಣುಗಳನ್ನೂ ನಡೆಯನ್ನೂ ನುಣುಪಾದ ತಲೆಗೂದಲುಗಳನ್ನೂ ಮನೋಜ್ಞವಾದ ಸುವಾಸನೆಯಿಂದ, ನಯದಿಂದ ಒಪ್ಪುವಿಕೆಯಿಂದ, ಮೋಡದ ಕಪ್ಪುಬಣ್ಣದಿಂದ ವಿಶೇಷವಾಗಿ ಹೊಸತೆನ್ನಿಸುವಂತೆ ತಕ್ಕುದಾದ ತಾವರೆ, ಕನ್ನೈದಿಲೆ, ರಾಜಹಂಸ, ಪಾಚಿಯ ಬಳ್ಳಿಗಳಿಂದ ಮಹಿಮಾಸ್ಪದ ವಾದ ತಾವರೆಗೊಳವು ಮನಸೆಳೆಯುತ್ತದೆ. (ಇಲ್ಲಿ ತಾವರೆ, ಕನ್ನೈದಿಲೆ, ರಾಜಹಂಸ ಮತ್ತು ಪಾಚಿಯ ಬಳ್ಳಿಗಳು ಸ್ತ್ರೀಯರ ಅವಯವಾದಿಗಳನ್ನು ತಮ್ಮ ತಮ್ಮ ಸಹಜ ಗುಣಗಳಿಂದ ಮೀರಿಸುವಂತಿದ್ದುವು ಎಂಬಲ್ಲಿ ಯಥಾಸಂಖ್ಯಾಲಂಕಾರವಿದೆ.) ೧೨೪. ವಿಜಯಶಾಲಿಯಾದ ಮನ್ಮಥನಿಗೆ ಸೇವೆ ಸಲ್ಲಿಸಲು ಬಾಣಗಳ ಸಮೂಹವನ್ನೂ, ಡೊಂಕಾದ ಬಿಲ್ಲಿನ ಹೆದೆಯನ್ನೂ, ಧ್ವಜವನ್ನೂ ನೀಡುವ ಅಗತ ವಾದರೂ ಏನಿತ್ತು

ಭುಜ ಶರಬಾಧೆಯಂ ತನಗೆ ಬಿನ್ನವಿಸಲ್ ಪದೆದೆಯ್ದಿದಂತೆ ವಾ
ರಿಜಮುಖಿಯರ್ ಸರೋವರದ ತೀರದೊಳಿರ್ಪುದು ಘೋರತಾಪದಿಂ ೧೨೪

ತೆರೆಗಳ್ ಮಿಂಚುಗಳಂಡಜಧ್ವನಿ ಘನಧ್ವಾನಂ ಚಲಚ್ಚೀಕರಂ
ಕರಕಂ ಪುಷ್ಪಪರಾಗವೃಂದ ವಿನಮದ್ಬಾಣಾಸನಂ ಶೈವಳಂ
ಹರಿನೀಲದ್ಯುತಿಯಾಗೆ ದರ್ದುರರವಂ ಕೈಗಣ್ಮೆ ಶೈತ್ಯಾನಿಳಂ
ಪರಿಯಲ್ ಕೂಡೆ ಕವಲ್ತು ಕಾರ್ಮುಗಿಲವೊಲ್ ಚೆಲ್ವಾಯ್ತು ಪದ್ಮಾಕರಂ ೧೨೫

ಅದಱೊಳ್ ತಾವರೆವಳ್ಳಿಯ
ಪೊದಱೊಳ್ ಬಿಸನಾಳಸಾರವಂ ಸವಿದು ಸುಖಾ
ಸ್ಪದದಿಂದಿರ್ದುದು ಜಾಂಬೂ
ನದಹಂಸಂ ಮಱೆದು ತನ್ನ ಮಾನಸಸರವಂ ೧೨೬

ವ|| ಅಂತಿರಲ್

ಚಳನಯನಪ್ರಭಾಪಟಳ ಕೌಮುದಿ ಕಾಮುಕ ದೀರ್ಘಲೋಚನೋ
ತ್ಪಲವನಲರ್ಚೆ ಭೂಷಣಮಣಿದ್ಯುಮಣಿದ್ಯುತಿ ಸದ್ಭುಜಂಗ ಹೃ
ಜ್ಜಲಜವಿಕಾಸವಂ ಪಡೆಯೆ ನೂಪುರ ಮೇಘರವಂ ಮನೋಜದೋ
ರ್ವಲ ವನಕೇಕಿಯಂ ಕುಣಿಸೆ ಬಂದುದು ವಾರವಿಳಾಸಿನೀಜನಂ ೧೨೭

ಎಂಬಂತೆ ಕಾಮರಾಜನ ಬಾಣದ ಬಾಧೆಯನ್ನು ತನಗೆ (ಕೊಳಕ್ಕೆ) ಬಿನ್ನವಿಸಲು ಒಡಗೂಡಿ ಬಂದಂತೆ ಸರೋವರದ ತೀರದಲ್ಲಿ ಘೋರಬಾಧೆಗೆ ಈಡಾದ ಕಮಲಮುಖಿಯರಿದ್ದರು. ೧೨೫. ಅಲೆಗಳೇ ಮಿಂಚುಗಳು, ಹಕ್ಕಿಗಳ ಧ್ವನಿಯೇ ಗುಡುಗಿನ ಶಬ್ದ, ಚಲಿಸುವ ತುಂತುರ್ವನಿಗಳೇ ಆಲಿಕಲ್ಲು, ಹೂಗಳ ಕೇಸರಸಮೂಹವೇ ಬಾಗಿದ ಕಾಮನಬಿಲ್ಲು, ಪಾಚಿಯೇ ಹಸುರು ನೀಲಿ ಬೆರೆತ ಕಾಂತಿಯಾಗಲು, ಕಪ್ಪೆಗಳ ವಟ ವಟ ಶಬ್ದ ಮೇರೆ ಮೀರಲು, ತಂಗಾಳಿ ಬೀಸಲು, ಒಡನೆಯೇ ಸುತ್ತುಗಟ್ಟಿಬಂದ ಮಳೆಮೋಡದಂತೆಯೇ ತಾವರೆಗೊಳವು ಮನೋಹರವಾಯಿತು. ೧೨೬. ಆ ಕೊಳದಲ್ಲಿ ತಾವರೆಬಳ್ಳಿಯ ಪೊದೆಯಲ್ಲಿ ತಾವರೆಯ ದಂಟಿನ ಸಾರವನ್ನು ಸವಿದು ಹೊಂಬಣ್ಣದ ಹಂಸವು ತನ್ನ ಮಾನಸಸರೋವರವನ್ನು ಮರೆತು ಸುಖವಾಗಿದ್ದಿತು. ವ|| ಹಾಗಿರಲು ೧೨೭. ಚಂಚಲವಾದ ಕಣ್ಣುಗಳ ಪ್ರಭಾಸಮೂಹದ ಬೆಳದಿಂಗಳು ಕಾಮುಕರ ವಿಸ್ತಾರವಾದ ಕಣ್ಣುಗಳೆಂಬ ಕನ್ನೈದಿಲೆಯನ್ನು ಅರಳಿಸಲು, ಮಣಿಖಚಿತವಾದ ಒಡವೆಗಳ ಸೂರ್ಯ ಪ್ರಕಾಶ ಒಳ್ಳೆಯ ವಿಟರ ಹೃದಯಪದ್ಮವನ್ನು ಅರಳಿಸಲು, ಕಾಲಂದುಗೆಯ ಗುಡುಗಿನ ಶಬ್ದವು ಮನ್ಮಥನ ಬಾಹುಬಲದಂತಿರುವ ನವಿಲುಗಳನ್ನು ನರ್ತಿಸುವಂತೆ

ಮದನನ ಬೈಕೆಯಿಂದು ಪೊಱಪೊಣ್ಮಿತೊ ಕಾಮನ ಬಾಣಸಂಕುಳಂ
ಸುದತಿಯರಾಗಿ ಪುಟ್ಟಿದುದೊ ಮನ್ಮಥನೋಜೆಯ ಜಾಣ್ಮೆ ಮೂರ್ತಿವೆ
ತ್ತುದೊ ನವಪುಷ್ಪಸಾಯಕನ ಶಾಶ್ವತ ರಾಜ್ಯವಿಳಾಸವೊಪ್ಪುತಿ
ರ್ಪುದೊ ತಿಳಿಯಲ್ಕಗೋಚರಮೆನಲ್ ನಡೆದತ್ತಬಲಾಕದಂಬಕಂ ೧೨೮

ಒರ್ಬನೆ ಮನ್ಮಥಂ ನಮಗೆ ಪೊಲ್ಲಮೆಯಂ ಬಗೆಯಲ್ಕೆ ತನ್ನ ದೋ
ರ್ಗರ್ಬವನೆಯ್ದೆ ತನ್ನಿಸುವೆನೆಂದುಱೆ ಲೆಕ್ಕಕಳುಂಬಮಾಗಿ ಸಾ
ಸಿರ್ಬರಪಾಂಗ ಬಾಣಭುಜಪಾಶನಖಾಸಿ ಕುಚಾಗ್ರಖೇಟಕಂ
ಸರ್ಬಮಹಾಯುಧಂಗಳೆನಿಸಲ್ ನಡೆದತ್ತಬಲಾಕದಂಬಕಂ ೧೨೯

ತೊಳಗುವ ಮುತ್ತು ಮಾಣಿಕದ ಕೆತ್ತಣವೊಪ್ಪುವ ಚೆನ್ನಹೊನ್ನ ಜೀ
ರ್ಕೊಳವೆಯನಿಂದುಕಾಂತ ದಿನಕಾಂತದ ಕುಂಜರತುಂಗದಂತದು
ಜ್ವಲಕರಶೃಂಗಮಂ ಪಿಡಿದು ಪೀತಪಟಂಗಳಿನುನ್ನತಸ್ತನಂ
ಗಳನತಿಗಾಢದಿಂ ಬಿಗಿದು ನಿಂದೆಸೆದತ್ತಬಲಾಕದಂಬಕಂ ೧೩೦

ವ॥ ಅವರೊಡನೆ

ಕೆಳದಿಯರಿಕ್ಕೆಲಂಬಿಡಿದು ಬರ್ಪಿನಮಿಕ್ಕುವ ಚಾಮರಂ ತಳ
ತ್ತಳಿಪಿನಮೊಯ್ಯನೊಯ್ಯನಡಿಯಿಟ್ಟು ಸರೋವರಮಂ ನಿಮಿರ್ದ ಕಂ

ಮಾಡಲು ಸೂಳೆಯರ ಸಮೂಹವು (ಅಲ್ಲಿಗೆ) ಬಂದಿತು. ೧೨೮. ಮನ್ಮಥನ ಅಪೇಕ್ಷೆ ಇಂದು ಹೊರಹೊಮ್ಮಿತೋ, ಕಾಮನ ಬಾಣಸಮೂಹವು ಸ್ತ್ರೀಯರಾಗಿ ಜನ್ಮ ತಾಳಿದುವೋ. ಮನ್ಮಥನ ಕ್ರಮಬದ್ಧವಾದ ಬುದ್ಧಿವಂತಿಕೆ ರೂಪದಾಳಿತೋ, ನೂತನ ಮನ್ಮಥನ ರಾಜ್ಯವಿಲಾಸವು ಒಪ್ಪುವಂತಿಹುದೋ ತಿಳಿಯಲು ಅಸಾಧ್ಯ ವೆಂಬಂತೆ ಸ್ತ್ರೀಯರ ಸಮೂಹವು ನಡೆದುಬಂದಿತು. ೧೨೯. ಒಬ್ಬನೇ ಒಬ್ಬ ಮನ್ಮಥನು ನಮಗೆ ಕೇಡನ್ನು ಬಗೆದು ತನ್ನ ಬಾಹುಬಲದಿಂದ ತಾನಾಗಿ ಹೊಡೆಯುವ ನೆಂಬಂತೆ, ವಿಶೇಷವಾದ ರೀತಿಯಲ್ಲಿ ಲೆಕ್ಕಕ್ಕೆ ಅಸಂಖ್ಯಾತವೆನ್ನಿಸಿ ಸಾವಿರ ಜನರ ಕಡೆ ಗಣ್ಣಿನ ನೋಟದ ಬಾಣಗಳು, ಹೆಗಲ ಬಲೆಗಳು, ಉಗುರ ಕತ್ತಿಗಳು, ಮೊಲೆದುದಿಯ ಗುರಾಣಿಗಳು ಸಮಸ್ತ ಮಹಾಯುಧಗಳೆನ್ನಿಸುವಂತ ಸ್ತ್ರೀಯರಸಮೂಹವು ನಡೆದು ಬಂದಿತ್ತು. ೧೩೦. ಹೊಳೆಯುವ ಮುತ್ತು ಮಾಣಿಕ್ಯಗಳನ್ನು ಕೆತ್ತಣೆಸಿ ತೋರಿಬರುವ ಚೆಲುವಾದ ಬಂಗಾರದ ಜೀರ್ಕೊಳವೆಯನ್ನೂ, ಚಂದ್ರಪ್ರಕಾಶ ಸೂರ್ಯಪ್ರಕಾಶಗಳುಳ್ಳ ಆನೆಯ ದೊಡ್ಡದಾದ ದಂತಗಳ ಉಜ್ವಲವಾದ ಕೈಗೊಂಬುಗಳನ್ನೂ ಹಿಡಿದುಕೊಂಡು, ಉಬ್ಬಿದ ಮೊಲೆಗಳನ್ನು ಹಳದಿಬಣ್ಣದ ಬಟ್ಟೆಗಳಿಂದ ಬಲವಾಗಿ ಬಿಗಿದುಕೊಂಡು ಸ್ತ್ರೀಯರ ಸಮೂಹವು ನಿಂತಿದ್ದಿತು. ವ॥ ಅವರೊಂದಿಗೆ ೧೩೧. ಎರಡು ಕಡೆಗಳಲ್ಲಿಯೂ ಕೆಳದಿಯರು ಬರುತ್ತಿರಲು, ಬೀಸುವ ಚಾಮರಗಳು ಹೊಳೆಹೊಳೆಯುತ್ತಿರಲು, ಮೆಲ್ಲ

ಗಳ ಬೆಳಗಿಂ ಪದಿರ್ಮಡಿಸಿ ನಿರ್ಮಳವಾರಿವಿನೋದನಕ್ಕೆ ಕೋ
ಮಳೆ ದಮಯಂತಿ ಬಂದಳೊಲವಿಂದ ಸುಗಂಧಮಯಾಂಗರಾಗದಿಂ ೧೩೧

ಬಾಡದ ಕಲ್ಪವಲ್ಲಿ ಕಱೆಯಿಲ್ಲದ ಪೂರ್ಣಶಶಾಂಕಬಿಂಬವಿ
ರ್ಪೋಡದ ವಿದ್ರುಮಂ ಬಿಡದ ಕರ್ಪೊಡೆಗೊಳ್ಳದ ಕುಂಭವೆಲ್ಲಿಯುಂ
ಪಾಡದ ತುಂಬಿಗಳ್ ನಿಜಶರೀರದೊಳಿರ್ಪವೆನಲ್ಕೆ ಸಂತತಂ
ಗಾಡಿಯೊಳಿರ್ಪ ಕೋಮಳೆಯ ರೂಪು ಮನೋಜನ ವೈಮೆಯಲ್ಲವೇ ೧೩೨

ಪೀನನಿತಂಬೆ ಮೇಳದ ವಿಳಾಸಿನಿಯರ್ಬೆರಸಿಂದುಕಾಂತಸೋ
ಪಾನಮನೊಯ್ಯನೊಯ್ಯನಿೞಿದಂಬುಜರಾಜಿಯನುತ್ಪಲಂಗಳಂ
ತಾನೆ ಕೆಲಕ್ಕೆ ಸಾರ್ಚಿ ನಖದೀಧಿತಿ ರಂಜಿಸೆ ಶೀತಳಾಂಬುವಂ
ಮಾನಿನಿ ಪಾಣಿಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ ೧೩೩

ಸತಿ ತದನಂತರಂ ಕನಕಶೃಂಗದಿನಂಬುಜಗಂಧವಾರಿಯಂ
ಕತಿಪಯವೆಂಬಿನಂ ಮೊಗೆದು ಕಾಂತೆಯನೋರ್ವಳ ಬೆನ್ನನೊಡ್ಡೆನು
ತ್ತತುಳ ಮನೋಮುದಂ ಬೆರಸಿ ಪೊಯ್ಯೆ ತುಷಾರವನೊತ್ತಿದಂತಿರಾ
ಯ್ತತಿಲಘುಹಸ್ತವಲ್ಲದಬಲಾಜನದೊಳ್ ಬಲವುಂಟೆ ಭಾವಿಸಲ್ ೧೩೪

ಮೆಲ್ಲಗೆ ಹೆಜ್ಜೆಯಿಟ್ಟು ಸರೋವರವನ್ನು ತೆರೆದ ಕಣ್ಣುಗಳ ಕಾಂತಿಯಿಂದ ಹತ್ತುಪಟ್ಟು (ಬೆಳಸಿ) ಪರಿಶುದ್ಧವಾದ ಜಲಕ್ರೀಡೆಗಾಗಿ ಕೋಮಲೆಯಾದ ದಮಯಂತಿ ಸುವಾಸನಾ ಯುಕ್ತವಾದ ಲೇಪನಾದಿಗಳಿಂದ ಪ್ರೀತಿಪೂರ್ವಕವಾಗಿ ಬಂದಳು. ೧೩೨. ಬಾಡದ ಕಲ್ಪವೃಕ್ಷ, ಕಳಂಕವಿಲ್ಲದ ಪೂರ್ಣಚಂದ್ರ, ತಂಪು ಕಂದದ ಕೆಂದಳಿರು, ಶಾಶ್ವತವಾದ ಕಪ್ಪು, ಅಂತರಕ್ಕೆ ಅವಕಾಶವಿಲ್ಲದ ಕೊಡ(ಗಳು), ಎಲ್ಲಿಯೂ ಹಾಡದ ತುಂಬಿಗಳು ತನ್ನ ದೇಹದಲ್ಲಿಯೋ ಎಂಬಂತೆ ಸರ್ವದಾ ಸುಂದರವಾಗಿರುವ ಕೋಮಲೆಯ ಸ್ವರೂಪ ಮನ್ಮಥನ ಮಹಿಮೆಯಲ್ಲದೆ ಮತ್ತೇನು ? ೧೩೩. ತುಂಬುತೊಡೆಯಾಕೆ ಜೊತೆ ಗಾತಿಯರಾದ ರಮಣಿಯರೊಂದಿಗೆ ಚಂದ್ರಕಾಂತಶಿಲೆಯಿಂದ (ನಿರ್ಮಿತವಾದ) ಮೆಟ್ಟಿಲು ಗಳನ್ನು ಮೆಲ್ಲಮೆಲ್ಲನೆ ಇಳಿದು ತಾವರೆಯ ಸಮೂಹಗಳನ್ನೂ, ಕನ್ನೈದಿಲೆಗಳನ್ನೂ ತಾನೇ ಕೆಲಕ್ಕೆ ಸರಿಸಿ, ಉಗುರಿನ ಕಾಂತಿ ಬೆಳಗಲು ಆ ಹೆಣ್ಣು, ಚಿಗುರಿನಂತಹ ಕೈಗಳಿಂದ ಎಲ್ಲರ ಮೇಲೂ ತಂಪಾದ ನೀರನ್ನು ಚೆಲ್ಲಾಡಿದಳು. ೧೩೪. ಆ ಹೆಂಗಸು, ಆ ಬಳಿಕ, ಚಿನ್ನದ ಕೊಂಬಿನಿಂದ ಸುವಾಸನಾಯುಕ್ತವಾದ ನೀರನ್ನು ಸ್ವಲ್ಪವೇ ಸ್ವಲ್ಪವೆಂಬಂತೆ ತುಂಬಿಕೊಂಡು, ಒಬ್ಬ ಹೆಂಗಸಿನ ಬೆನ್ನನ್ನು ಒಡ್ಡು ಎನ್ನುತ್ತ ಅಪಾರವಾದ ಸಂತೋಷ ದಿಂದ ಹೊಡೆಯಲು ಮಂಜಿನಿಂದ ಒತ್ತಿದಂತೆ ಆಯಿತು ! ಅತ್ಯಂತ ಮೃದುವಾದ

ವ|| ಅಲ್ಲಿಯೊರ್ವಳ್

ತಿಳಿಗೊಳದೊಳ್ ನಿಜಾಸ್ಯಕಮಲಂ ಪ್ರತಿಬಿಂಬಿಸೆ ಕಂಡು ಮುಗ್ಧೆ ನೀ
ರೊಳೆ ಮುಳುಗಿರ್ದನಕ್ಕ ತೆಗೆಯೆಂದು ಕರಾಗ್ರವನೆತ್ತಿ ನಕ್ಕು ಕೋ
ಮಳೆ ಪೆಱರೊರ್ವಳೆನ್ನೊಡನೆ ಪೇಟ್ವವರಾರ್ ಮುಳುಗಿರ್ದರಾರೆನಲ್
ತಳವೆಳಗಾಗಿ ಲಜ್ಜೆಯಿನವಳ್ ತಲೆಗುತ್ತಿದಳೊಂದು ತಾಣದೊಳ್ ೧೩೫

ಜಲರುಹಷಂಡದೊಳ್ ಜಲವಿನೋದರವಂ ತಲೆಗಣ್ಮುವನ್ನೆಗಂ
ಜಲವಿಹಗವ್ರಜಂ ಬೆದಱಿ ಮಂಡಲ ಮಂಡಲವಾಗಿ ಪಾಱೆ ಕಂ
ಡಲಘುನಿತಂಬೆಯೊರ್ವಳೆಲೆ ಪೂಗೊಳನಾಗಳೆ ಪಾಱಿಪೋಯ್ತು ನೋ
ಡೆಲಗೆ ಎನುತ್ತವರ್ಗವರ್ಗೆ ತೋಱೆ ತೊಲಂಗಿದಳೊಂದು ತಾಣದೊಳ್ ೧೩೬

ತಾವರೆವೂಗಳೊಳ್ ಪಲವು ತುಂಬಿಯ ಗಾವರಮುಣ್ಮೆ ಕೇಳ್ದು ಲೀ
ಲಾವತಿಯೊರ್ವಳಂಬುಜವನಂ ಕರಿದಪ್ಪುದೆನುತ್ತೆ ಪೋಗೆ ಭೃಂ
ಗಾವಳಿ ತನ್ನ ಸುಯ್ಯ ನಱುಗಂಪನುಣಲ್ ಮುಸುಱಲ್ಕೆ ಬಂದವಂ
ಸೋವ ಬೞಲ್ಕೆಯಲ್ಲವೆಡೆಯುಂಟೆ ಸರೋವರಕೇಳಿಗಾವಗಂ ೧೩೭

ಕೈಯಲ್ಲದೆ ಭಾವಿಸಿ ನೋಡಲು ಅಬಲೆಯರಲ್ಲಿ ಬಲವುಂಟೆ ? ವ|| ಅಲ್ಲಿ ಒಬ್ಬಳು ೧೩೫. ತಿಳಿನೀರಿನ ಕೊಳದಲ್ಲಿ ತನ್ನ ಮುಖಪದ್ಮವು ಪ್ರತಿಬಿಂಬಿಸಲು ನೋಡಿ ಮುಗ್ಧೆಯಾದವಳು "ಅಕ್ಕ ! ನೀರಿನಲ್ಲಿ ಮುಳುಗಿರುವೆನು ಮೇಲಕ್ಕೆತ್ತು" ಎಂದು ಕೈಗಳನ್ನು ಎತ್ತಲು, (ಅನಂತರ) ನಗುವುಂಟಾಗಿ, 'ಕೋಮಳೆ ಬೇರೊಬ್ಬಳಿರುವಳೆ ? ಎನ್ನೊಡನೆ ಹೇಳುವರಾರು ? ಮುಳುಗಿರುವರಾರು ?' ಎಂದು ಆಶ್ಚರ್ಯಗೊಂಡು, ನಾಚಿಕೆಯಿಂದ ಆಕೆ ಒಂದೆಡೆ ತಲೆತಗ್ಗಿಸಿದಳು. ೧೩೬. ತಾವರೆಗೊಳದಲ್ಲಿ ನೀರಿನ ಸಂತೋಷದ ಧ್ವನಿ ತುತ್ತತುದಿಯನ್ನು ಮುಟ್ಟಲು (?), ನೀರ್ವಕ್ಕಿಗಳ ಸಮೂಹವು ಬೆದರಿ ಗುಂಪುಗುಂಪಾಗಿ ಹಾರಲು, ಅದನ್ನು ತೋರದೊಡೆಯಾಕೆಯೊಬ್ಬಳು ಕಂಡು "ಎಲೇ, ಹೂವಿನ ಕೊಳವಾಗಲೆ ಹಾರಿಹೋಯಿತು ನೋಡೆ" ಎನ್ನುತ್ತ ಅವರವರಿಗೆ ತೋರಿ ಒಂದೆಡೆ ತೆರಳಿದಳು. ೧೩೭. ತಾವರೆಹೂವುಗಳಲ್ಲಿ ಹಲವು ತುಂಬಿಗಳ ಧ್ವನಿಯು ಪೊರಹೊಮ್ಮಲು ಕೇಳಿ, ಲೀಲಾವತಿಯೊಬ್ಬಳು (ಮನೋಹರಳಾದವಳು) ತಾವರೆಯ ಕೊಳವು ಕಪ್ಪಗಾಗುತ್ತದೆಯೆಂದು ಹೋಗಲು, ದುಂಬಿಗಳ ಸಮೂಹವು ತನ್ನ ನಿಟ್ಟುಸಿರಿನ ಹೊಸವಾಸನೆಯನ್ನು ಸವಿಯಲೆಂದು ಮುತ್ತಿಕೊಳ್ಳಲು, ಹಾಗೆ ಬಂದವುಗಳನ್ನು ಅಟ್ಟುವ ಆಯಾಸವಲ್ಲದೆ, ಸರೋವರಕ್ರೀಡೆಗೆ ಯಾವಾಗಲೂ

ಮುಂದಡಿಯಿಟ್ಟು ಜಿ.ಕಿರ್ಗೊಳವೆಯಿಂ ಜಲಧಾರೆಗಳೆಚ್ಚು ಪಾಯುಲಾ
ನಂದದಿನೊತ್ತಲೊರ್ವಳ ಲಸನ್ಮುಖದೊಳ್ ದಮಯಂತಿ ನೋಡಲೊ
ಳ್ಪಿಂದೆಸೆದತ್ತು ರಾಹು ನಿಡುನಾಲಗೆಯಿಂ ಮಿಗೆ ನೀಡಿದಂತೆ ಪೂ
ರ್ಣೇಂದುವ ಮಂಡಲಕ್ಕೆ ದಿಟವೆಂಬಭಿಶಂಕೆಯಸಂಬುಕೇಳಿಯೊಳ್ ೧೩೮

ತಾವರೆಗಿಂಡು ಬಲ್ಪಿಗೆ ಮುದಂ ಮಿಗೆ ಕೈಗೊಳಗಾದುವೆಂಬಿನಂ
ಭಾವಕಿ ಶೋಣಪದ್ಮಕರಪಲ್ಲವದೊಳ್ ಕರಿದಂತಶೃಂಗಮಂ
ತೀವಿದ ನಿರ್ಮಲಾಂಬುಸಹಿತಂ ಪಿಡಿದೆಲ್ಲಿಗೆ ಪೋಪೆ ತಂಗಿಯೆಂ
ದೋವದೆ ಪೊಯ್ದಳಾ ಜಲವನೊರ್ವಳ ಮೇಲೆ ನವಾಂಬುಕೇಳಿಯೊಳ್ ೧೩೯

ವಾರಿಯನೊಪ್ಪೆ ಸೂಸೆ ಪೆಱಮೆಟ್ಟುವ ತಪ್ಪಿಸಿಕೊಳ್ವ ನಿಲ್ವ ನೀ
ರ್ಧಾರೆಗೆ ಕಯ್ಯನೊಡ್ಡುವ ಕೆಲಕ್ಕೆ ನುಸುಳ್ವ ಮಗುಳ್ವ ಮುಂದೆ ಮುಂ
ದೋರಡಿಯಿಟ್ಟು ಲಂಘಿಸುವ ತಪ್ಪಿಸಿಕೊಳ್ವ ಬಳಲ್ದುನಿಲ್ವ ವಿ
ಸ್ತಾರವಗುರ್ವಿಸಲ್ ಸಲಿಲಕೇಳಿಯೊಳಿರ್ದುದು ಕಾಮಿನೀಜನಂ ೧೪೦

ವ॥ ಅಂತು ತಮತಮಗೆ ಕಮಳ ಕೈರವ ಕಲ್ಹಾರಪತ್ರದಿಂ ಕಟ್ಟಿದ ಪೊಟ್ಟಣವನ್ನಿಟ್ಟ ಟ್ಟಾಡುತ್ತಂ ಕರಿದಂತಕಾಂತತುಂಗಶೃಂಗದಿಂ ಮುನ್ನಿಡುವಂತಂಗೈಸಿ ಪಾಯ್ದು ಪೊಯ್ದು ಪಿಂಗುತ್ತಂ ನವ

ಆಸ್ಪದವಿದೆಯೆ ? ೧೩೮. ದಮಯಂತಿ ಮುಂದೆ ಹೆಜ್ಜೆಯನ್ನಿಟ್ಟು ಒಬ್ಬಾಕೆಯ ಹೊಳೆಯುವ ಮುಖದತ್ತ ಜೇಕಿರ್ಗೊಳವೆಯಿಂದ (ಪಿಚಕಾರಿಯಿಂದ) ಜಲಧಾರೆಗಳನ್ನು ಬಿಡಲೆಂದು ಹಾಯ್ದು ಆನಂದದಿಂದೊತ್ತಲು, ಅದನ್ನು ನೋಡಿದಲ್ಲಿ ರಾಹು ತನ್ನ ನೀಳವಾದ ನಾಲಗೆಯನ್ನು ಪೂರ್ಣಚಂದ್ರನ ಮಂಡಲಕ್ಕೆ ವಿಶೇಷವಾಗಿ ಚಾಚಿದ್ದು ನಿಜವೋ ಎಂಬ ಆತಂಕವು ಜಲಕ್ರೀಡೆಯಲ್ಲಿ ಚೆನ್ನಾಗಿ ತೋರಿಬಂದಿತು. ೧೩೯. ತಾವರೆಯ ಗಿಂಡು (?) ಗಟ್ಟಿಯಾಗಲು ಸಂತೋಷವು ಮೀರಿ ಕೈಗೆ ವಶವಾದುವೋ ಎನ್ನುವಂತೆ ಒಬ್ಬ ಭಾವಕಿ ಕೆಂಪಾದ ತಾವರೆಯಂತಹ ಕೈಚಿಗುರಿನಲ್ಲಿ ಸ್ವಚ್ಛವಾದ ನೀರನ್ನು ತುಂಬಿದ ಆನೆಯ ದಂತದಕೊಂಬನ್ನು ಹಿಡಿದು, ಎಲ್ಲಿಗೆ ಹೋಗುವೆಯೆ ತಂಗಿ ಎಂದು ತಪ್ಪದೆ (?) ಆ ನೀರನ್ನು ಜಲಕ್ರೀಡೆಯಲ್ಲಿ ಒಬ್ಬಳ ಮೇಲೆ ಚೆಲ್ಲಾಡಿದಳು. ೧೪೦. ನೀರನ್ನು ಒಪ್ಪುವಂತೆ ಸೂಸಲು, ಹಿಂದೆ ಉಳಿಯುವ (ಹಿಮ್ಮೆಟ್ಟುವ), ತಪ್ಪಿಸಿಕೊಳ್ಳುವ, ನಿಲ್ಲುವ, ನೀರಿನ ಧಾರೆಗೆ ಕೈಯನ್ನು ಒಡ್ಡುವ, ಪಕ್ಕಕ್ಕೆ ನುಸುಳುವ, ಹಿಂತಿರುಗಿ ಬರುವ, ಮುಂದೆ ಮುಂದೆ ಒಂದೊಂದೆ ಹೆಜ್ಜೆಯಿಟ್ಟು ಹಾರುವ, ತಪ್ಪಿಸಿಕೊಳ್ಳುವ, ಬಳಲಿ ನಿಲ್ಲುವ ವಿಸ್ತಾರವು ಹೆಚ್ಚಾಗಲು ತರುಣಿಯರ ಸಮೂಹವು ಜಲಕೇಳಿಯಲ್ಲಿ ಮಗ್ನವಾಗಿದ್ದಿತು. ವ॥ ಹಾಗೆ ತಮತಮಗೆ ಕಮಲ ಕನ್ನೈದಿಲೆ ಕಣಗಿಲೆಯ ಎಲೆಗಳಿಂದ ಕಟ್ಟಿದ ಪೊಟ್ಟಣವನ್ನು ಒಬ್ಬರ ಮೇಲೆ ಒಬ್ಬರೆಸೆದು ಆಡುತ್ತಲೂ, ಆನೆಗಳ ದಂಡೆಗಳ

ಮಣಿಗಣದ ಕೇವಣದಿಂ ಕೌತುಕಂಬಡೆದ ಪೊನ್ನ ತೋರ್ಕೆಯ ಜೇರ್ಕೊಳವೆಯುಮನೊತ್ತೊತ್ತಿ ಪತ್ತೆ ಸಾರುತ್ತುಂ ಸೇಳ್ಪುಗುರ ಬೆಳಗು ಪಲ್ಲವಿಸೆ ಪಲ್ಲವಕರದಿನೆಲ್ಲರ ಮೇಲೆ ಚಲ್ಲಿ ಚಲ್ಲಿ ನಿಲ್ಲದಿರುತ್ತುಂ, ತೆರೆದುರುಗಲ ತಿಂತಿಣಿಯೊಳೊರ್ವರುಂ ನೋಂಕಿ ನಸುನಗುತ್ತುಂ, ಕಮಲನಾಳಂಗಳಂ ಕಿಬ್ಬಿ ಕಿಬ್ಬಿ ಕೊರಲ್ಗೆ ತೊಡಂಕಿಸಿ ನೀರೊಳ್ ಕೆಡಪಿ ಸಾರುತ್ತುಂ, ಪೆಱಗಣಿಂ ಬಂದು ಕಣ್ಗಳಂ ಮುಚ್ಚಿ ಸುೞಿಗಳೊಳ್ ಮುೞುಂಗಿಸಿ ಮೆಯ್ದೆಗೆಯುತ್ತಿರ್ಪ ವಿಳಾಸಿನೀಜನದ ನಡುವೆಯುಮಂತುಮಲ್ಲದೆಯುಂ

ತನು ರೋಮಾಂಚನವಪ್ಪುಕೆಯ್ಯ್ಕಲಧರಂ ಬೆಳ್ಪಾಗಲಂಗಂ ಸಕಂ
ಪನದಿಂ ರಂಜಿಸಲಕ್ಷಿಗಳ್ ತೊಳಗಲಂಭೋಬಿಂದುಗಳ್ ಕರ್ಕಶ
ಸ್ತನದೊಳ್ ತುಂಬಿರಲಂದಪೂರ್ವಜಲಕೇಳೀರಾಗದಿಂ ಚಿತ್ತಕಾಂ
ತನ ಸಂಗಂಬಡೆದಂತೆ ಮೈಮೆವಡೆದಳ್ ವೈದರ್ಭಿ ವಿಶ್ರಾಂತಿಯಿಂ ೧೪೧

ನಾರಿ ಮಗುೞ್ದು ಪೂಗೊಳನ ಪಕ್ಷಿಗಳೊಪ್ಪುವನೀಕ್ಷಿಸುತ್ತಿರಲ್
ದೂರದೊಳಿರ್ದುದಲ್ಲಿ ತಪನೀಯ ಪತತ್ರದ ಚೆನ್ನ ಹಂಸೆ ಚಂ
ತಾರಸಮಂಗದೊಳ್ ಪಸರಿಸಿರ್ದವೊಲೊಯ್ಯನೆ ಮುಚ್ಚಿ ಕಂಗಳಂ
ಪಾರಿಜಪತ್ರದೊಳ್ ನೆಲಸಿ ವರ್ಣಪರಾಯಣನಾಗಿ ರಾಗದಿಂ ೧೪೨

ಕಾಂತಿಯುಕ್ತವಾದ ಉನ್ನತವಾದ ಕೊಂಬಿನಿಂದ ಮುಂಜೆಯೇ ಹೊಡೆಯುವಂತೆ ಒಟ್ಟು ಗೂಡಿ ಹಾಯ್ದು ಹಾಯ್ದು ಹಿಮ್ಮೆಟ್ಟುತ್ತಲೂ, ಹೊಸತಾದ ಮಣಿಸಮೂಹದ ಕೇವಣ ದಿಂದ ಆಶ್ಚರ್ಯವನ್ನುಂಟುಮಾಡುವ ಚಿನ್ನದಿಂದ ವ್ಯಕ್ತವಾಗುವ ಜೇರ್ಕೊಳವೆಯನ್ನು (ಪಿಚಕಾರಿಯನ್ನು) ಒತ್ತೊತ್ತಿ ಹತ್ತಿರ ಬರುತ್ತಲೂ, ಕೋಮಲವಾದ ಉಗುರಿನ ಬೆಳಕು ಚಿಗುರೊಡೆಯಲು ಚಿಗುರಿನಂತಹ ಕೈಯಿಂದ ಎಲ್ಲರ ಮೇಲೂ ಚೆಲ್ಲಿ ಚೆಲ್ಲಿ ನಿಲ್ಲದೆ ಇರುತ್ತಲೂ, ತೆರೆಸಮೂಹದ ರಾಶಿಯಲ್ಲಿ ಒಬ್ಬರನ್ನು ನೂಕಿ ನೂಕಿ ನಸುನಗುತ್ತಲೂ, ಕಮಲ ನಾಳಗಳನ್ನು ಕಿತ್ತು ಕಿತ್ತು ಕೊರಳಿಗೆ ಕಟ್ಟಿ ನೀರಿನಲ್ಲಿ ಕೆಡಹಿ ಸಾರಿ ಬರುತ್ತಲೂ, ಹಿಂದಿ ನಿಂದ ಬಂದು ಕಣ್ಣುಗಳನ್ನು ಮುಚ್ಚಿ ಸುಳಿಗಳಲ್ಲಿ ಮುಳುಗಿಸಿ ಮೈಮಾಚುತ್ತಿರುವ ರಮಣಿ ಯರ ನಡುವೆಯೂ, ಅಷ್ಟೇ ಅಲ್ಲದೆ, ೧೪೧. ಶರೀರವು ಪುಳಕಿತವಾಗಲು, ಕೆಳದುಟಿಯು ಬಿಳುಪಾಗಲು, ಶರೀರವು ನಡುನಡುಗುತ್ತ ಹೊಳೆಯಲು, ಕಣ್ಣುಗಳು ಪ್ರಕಾಶಿಸಲು, ನೀರ ಹನಿಗಳು ಗಟ್ಟಿಯಾದ ಮೊಲೆಗಳ ಮೇಲೆಲ್ಲ ತುಂಬಿರಲು, ಅಂದು ಅಪೂರ್ವವಾದ ಜಲ ಕ್ರೀಡಾಭಿಲಾಷೆಯಿಂದ ಇಷ್ಟಪ್ರಿಯನ ಮಿಲನವನ್ನು ಪಡೆದಂತೆ ವಿದರ್ಭರಾಜನ ಮಗ ಳಾದ ದಮಯಂತಿ ವಿಶ್ರಾಂತಿಯಿಂದ ಮಹಿಮೆಯನ್ನು ಪಡೆದಳು. ೧೪೨. ಹೆಂಗಸು ಹಿಂತಿರುಗಿ ಬಂದು ಹೂಗೊಳದ ಹಕ್ಕಿಗಳ ಸೌಂದರ್ಯವನ್ನು ನೋಡುತ್ತಿರಲು, ಹೊಂಬಣ್ಣದ ರೆಕ್ಕೆಗಳುಳ್ಳ ಮನೋಹರವಾದ ಹಂಸವು ಶರೀರದಲ್ಲಿ ಚಿಂತಾರಸವು ಪ್ರವಹಿಸಿದಂತೆ ಒಂದೇ ಸಮನೆ ಕಣ್ಣುಗಳನ್ನು ಮುಚ್ಚಿ ತಾವರೆಯ ಎಲೆಗಳ ಮಧ್ಯೆ ನೆಲಸಿ

ಇದು ಚಿತ್ರಮೆಂದು ವಿಗೆ ನೋ
ಡಿದಳಾ ದಮಯಂತಿ ಪೊನ್ನ ಹಂಸೆಯ ಸೊಬಗಂ
ಮುದದಿಂದ ವಿಾಜೆ ಲೋಕ
ಕ್ಕಿದಱಿಂದಂ ಪೊಸತೆನುತ್ತೆ ಬೆಱಗಾಗಿರ್ದಳ್ ೧೪೩

ಅಂತಿರ್ದ ರಾಜಹಂಸನ
ನೆಂತಾನುಂ ಪಿಡಿಯಲೆಂದು ಮನದೊಳ್ ಬಗೆದಾ
ಕಾಂತೆ ನೆರೆದಿರ್ದ ಕೆಳದಿಯ
ರಂ ತಡೆದಿರಿಮೆಂದು ಪಿಂದೆ ನಿಲಿಸಿದಳಾಗಳ್ ೧೪೪

ವ॥ ಅಂತೆಲ್ಲರಂ ನಿಲಿಸಿ

ಉಕ್ಕೆವದಿಂ ತಟಂಬಿಡಿದು ಕಾಂತೆ ಬರುತ್ತಿರೆ ಮಾನಸೌಕಸಂ
ಪಕ್ಕವನೊಯ್ಯನೋದಿನಿಸು ಬಿಚ್ಚಿ ತಳರ್ನಡೆಯೊಪ್ಪಲೀಗ ಕೈ
ಸಿಕ್ಕಿತು ಸಿಕ್ಕಿತೆಂಬ ತೆಱದಿಂದದು ಮೆಲ್ಲನೆ ಪೋಗಿ ಪೋಗಿಯೊಂ
ದೆಕ್ಕಟಿಗೊಯ್ದುದೊಲ್ದು ದಮಯಂತಿಯನೇನತಿ ನೀತಿಮಾರ್ಗಿಯೋ ೧೪೫

ವ॥ ಅಂತಿರ್ದು

ಎನ್ನನದೆಂತು ನೀಂ ಪಿಡಿಯಲಾರ್ಪೆ ನಳಂ ಮನವೊಲ್ದು ಸಾಕಿದಂ
ಮನ್ನಣೆಯಿಂ ಮಹಾಕರುಣ ಧಾರ್ಮಿಕನಂಗಜರೂಪಸನ್ನಿಭಂ

ಪ್ರೀತಿಯಿಂದ ವರ್ಣಪರಾಯಣನಾಗಿ (ಜಪಿಸುತ್ತ) ದೂರದಲ್ಲಿದ್ದಿತು. ೧೪೩. ಇದು ಆಶ್ಚರ್ಯಕರವೆಂದು ಹೊಂಬಣ್ಣದ ಹಂಸದ ಸೌಂದರ್ಯವನ್ನು ಆ ದಮಯಂತಿ ಅತಿಶಯವಾಗಿ ನೋಡಿದಳು. ಸಂತೋಷವು ಹೆಚ್ಚಾಗಲು ಇದರ ಚೆಲುವು ಲೋಕಕ್ಕೆ ಹೊಸತಾದುದೆಂದು ಬೆರಗಾಗಿದ್ದಳು. ೧೪೪. ಹಾಗಿದ್ದ ರಾಜಹಂಸವನ್ನು ಹೇಗಾದರೂ ಮಾಡಿ ಹಿಡಿಯಬೇಕೆಂದು ಮನಸ್ಸಿನಲ್ಲಿಯೇ ಆಲೋಚಿಸಿ, ಆ ಹೆಂಗಸು ಅಲ್ಲಿ ಸೇರಿದ್ದ ಗೆಳತಿಯರನ್ನು 'ಸ್ವಲ್ಪ ತಡೆಯಿರಿ' ಎಂದು ಆಗ ಹಿಂದೆ ನಿಲ್ಲಿಸಿದಳು. ವ॥ ಹಾಗೆ ಎಲ್ಲರನ್ನೂ ನಿಲ್ಲಿಸಿ, ೧೪೫. ಉತ್ಸಾಹದಿಂದ ದಡವನ್ನೇ ಅನುಸರಿಸಿ ಬರುತ್ತಿರಲು ಮಾನಸ ಸರೋವರದಲ್ಲಿನ ಆ ಹಂಸವು ರೆಕ್ಕೆಯನ್ನು ಮೆಲ್ಲನೆ ಸ್ವಲ್ಪ ಮಾತ್ರವೇ ಬಿಚ್ಚಲು, ತಡೆತಡೆದು ನಡೆಯುವ ನಡೆ ಒಪ್ಪಲು, ಇದೀಗ ಕೈಗೆ ಸಿಕ್ಕಿತು ಸಿಕ್ಕಿತೆಂಬ ರೀತಿಯಲ್ಲಿ ಅದು ಮೆಲ್ಲನೆ ಹೋಗಿ ಹೋಗಿ, ಒಲಿಸುತ್ತ ದಮಯಂತಿಯನ್ನು ಒಂದು ಏಕಾಂತಸ್ಥಳಕ್ಕೆ ಕರೆದೊಯ್ದಿತು. ಅದೇನು ನೀತಿಮಾರ್ಗಿಯೋ ? ವ॥ ಹಾಗಿದ್ದು, ೧೪೬. "ನನ್ನನ್ನು ಅದು ಹೇಗೆ ತಾನೆ ನೀನು ಹಿಡಿಯಲು ಶಕ್ತಳಾಗಿರುವೆ ? ನಳನು ಮನಮೆಚ್ಚಿ ಮನ್ನಣೆಯಿಂದ ಸಲಹಿದನು. (ಆತನು) ಮಹಾದಯಾಳು, ಧಾರ್ಮಿಕ

ನನ್ನಿಯ ಮಾತನಲ್ಲದಱಿಯಂ ಸುಚರಿತ್ರಪವಿತ್ರನೆಂದುಮಾ
ಕನ್ನೆಯ ಕೈಗೆ ಸಿಕ್ಕಿ ಮೆಱೆದಿರ್ದುದು ಹಂಸೆ ಮನೋನುರಾಗದಿಂ ೧೪೭

ಕೆಳದಿ ದಮಯಂತಿ ಕೇಳಾಂ
ನಳನೃಪನರಮನೆಯ ವನದೊಳಿಪ್ಪೆನೆನುತ್ತಂ
ಕಳಹಂಸಂ ಪೇೞಲ್ ಕೋ
ಮಳೆ ಪೂರ್ವಸ್ಮರಣದಿಂದೆ ತಳವೆಳಗಾದಳ್ ೧೪೭

ಎಲ್ಲಿಯ ನಳನೆಲ್ಲಿಯ ನೀ
ನೆಲ್ಲಿಯಳಾನಿಲ್ಲಿಗೇಕೆ ಬಂದೀಗಳ್ ಮ
ದ್ವಲ್ಲಭನಂ [ನೆನೆಗೊಂ]ಡಪೆ
ಯೆಲ್ಲವ ನೀಂ ಸಹಜವಾಗಿ ಪೇೞ್ಗೆಲೆ ಹಂಸಾ ೧೪೮

ರಣಧೀರಂ ಸಾರ್ವಭೌಮಂ ನಿಷಧಪತಿ ಮಹಾವೀರಸೇನಾತ್ಮಜಂ ಸ
ದ್ಗುಣವಂತಂ ಸಾಧುಸಂಗಂ ವಿತರಣವಿಭವಂ ನೀತಿ ಸನ್ಮಾನಿ ಭೂಪಾ
ಗ್ರಣಿ ಪುಣ್ಯಶ್ಲೋಕನಾದ್ಯಂ ನಳನೃಪನಿದು ಸತ್ಯಂ ತ್ರಿಲೋಕೈಕಚೂಡಾ
ಮಣಿ ಕೇಳ್ ನಿನ್ನಂದಮಂ ಕೇಳ್ದಱಿವನೆನಗೆ ಮಿತ್ರಂ ಸಿತಾಂಭೋಜನೇತ್ರೇ ೧೪೯

ಧೀರೋದಾತ್ತಂ ಜಲಧಿಗ
ಭೀರಂ ಶರಣಾಗತ ಪ್ರತಿಷ್ಠಾಪಕನು

ಮನ್ಮಥರೂಪ ಸಮಾನನು, ಸತ್ಯವೊಂದನ್ನುಳಿದು ಬೇರೇನೂ ತಿಳಿದವನಲ್ಲ, ಸಚ್ಚರಿತ್ರ ಪವಿತ್ರನು" ಎಂಬುದಾಗಿ ಆ ತರುಣಿಯ ಕೈಗೆ ಸಿಕ್ಕಿಬಿದ್ದು ಹಂಸವು ಮನಃಪ್ರೀತಿಯಿಂದ ಶೋಭಾಯಮಾನವಾಗಿದ್ದಿತು. ೧೪೭. "ಎಲೈ ಕೆಳದಿ ದಮಯಂತಿಯೇ! ಕೇಳು, ನಾನು ನಳಮಹಾರಾಜನ ಅರಮನೆಯ ವನದಲ್ಲಿರುವೆನು" ಎಂದು ಕಳಹಂಸವು ನುಡಿಯಲು, ಕೋಮಲೆ ಪೂರ್ವಸ್ಮೃತಿಯಿಂದ ತಳಮಳಿಸಿದಳು. ೧೪೮. "ಎಲ್ಲಿಯ ನಳ? ನೀನೆಲ್ಲಿಯವನು? ನಾನೆಲ್ಲಿಯವಳು? ಇಲ್ಲಿಗೇಕೆ ಬಂದೆ? ಈಗ ನನ್ನ ಪ್ರಿಯನನ್ನು ನೆನೆಯಿಸುತ್ತಿರುವೆ. ಹಂಸಪಕ್ಷಿಯೇ ಎಲ್ಲವನ್ನೂ ನೀನು ಸಹಜವಾಗಿ ತಿಳಿಸು." ೧೪೯. "ಎಲೈ, ಬೆಳ್ದಾವರೆಯಂತೆ ಕಣ್ಣುಳ್ಳವಳೆ! ನಳಮಹಾರಾಜನು ರಣಧೀರ, ಚಕ್ರವರ್ತಿ, ನಿಷಧದೇಶಾಧಿಪತಿ, ಮಹಾವೀರಸೇನನ ಮಗ, ಒಳ್ಳೆಯ ಗುಣಶಾಲಿ, ಸಜ್ಜನರ ಸಹವಾಸವುಳ್ಳವನು, ವಿತರಣ ವೈಭವವುಳ್ಳವನು, ನೀತಿ ಮರ್ಯಾದಸ್ಥ, ರಾಜಶ್ರೇಷ್ಠ, ಪವಿತ್ರ ಕೀರ್ತಿಯುಳ್ಳವನು, ಮೊದಲಿಗ, ಸತ್ಯಸಂಧ, ಮೂರು ಲೋಕಗಳಿಗೂ ಏಕಮಾತ್ರ ಚೂಡಾಮಣಿ, ಕೇಳು, ನಿನ್ನ ಸೌಂದರ್ಯವನ್ನು ಕೇಳಿಬಲ್ಲವನು, ನನಗೆ ಸ್ನೇಹಿತ. ೧೫೦. ಆ ಪವಿತ್ರಾಧಿಪನು ಧೀರೋದಾತ್ತ, ಸಮುದ್ರಗಾಂಭೀರ್ಯವುಳ್ಳವನು, ಶರಣಾ

ಗ್ರಾರಿಕುಲಕಮಲವನಮದ
ವಾರಣನರ್ಕಪ್ರಕಾಶನಾ ವಿಮಳೇಶಂ ೧೫೦

ಅತುಳ ವಿಜಯಪ್ರತಾಪಂ
ಸತತಂ ಭೂಭುವನ ಭವನ ಮಣಿಮಯ ದೀಪಂ
ಚತುರ ವನಿತಾಮನೋಜಂ
ವಿತರಣಗುಣನ್ಯೆಜನಧಿಕನಾ ಯುವರಾಜಂ ೧೫೧

ನಯನಾಭಿರಾಮದೇಹಂ
ನಿಯತೇಂದ್ರಿಯನಖಿಳ ಧರ್ಮಮಣಿಸನ್ನಾಹಂ
ನಯವಿನಯ ನಿತ್ಯಶೀಲಂ
ಜಯಕಾಂತಾಕಾಂತನಲ್ತೆ ನಳಭೂಕಾಂತಂ ೧೫೨

ಕಾರುಣ್ಯ ಸುಧಾಸಾರಂ
ನಾರೀಜನಚಿತ್ತವಶ್ಯಮದನಾಕಾರಂ
ಭೂರಮಣೀಕುಚಹಾರಂ
ಸಾರಜ್ಞಂ ಧೀರವೀರಸೇನಕುಮಾರಂ ೧೫೩

ನಿಷಧವಿಷಯಾಧಿನಾಥಂ
ವಿಷಯೇಂದ್ರಿಯನಿಯತನಖಿಳ ಪಾವನನಾಥಂ

ಗತರನ್ನು ಸ್ಥಾಪಿಸತಕ್ಕವನು (ಸಂರಕ್ಷಿಸುವವನು), ಭಯಂಕರ ಶತ್ರುಕುಲವೆಂಬ ತಾವರೆ ವನಕ್ಕೆ ಮದಿಸಿದ ಆನೆಯಂತಿರುವವನು, ೧೫೧. ಆ ಯುವರಾಜನು ಅಸದೃಶ ವಿಜಯ ಪರಾಕ್ರಮಿ, ಸರ್ವದಾ ಭೂಲೋಕವೆಂಬ ಮನೆಗೆ ಮಣಿಖಚಿತವಾದ ದೀಪ, ನಿಪ್ಣಾತರಾದ ಸ್ತ್ರೀಯರಿಗೆ ಮನ್ಮಥಸಹಜವಾದ ದಾನಗುಣವುಳ್ಳವನು, ಶ್ರೇಷ್ಠನು. ೧೫೨. ನಳ ಮಹಾರಾಜನು ಕಣ್ಣಿಗೆ ಮನೋಹರವಾದ ದೇಹವುಳ್ಳವನು, ಸಂಯಮ ಇಂದ್ರಿಯ ವುಳ್ಳವನು, ಸಮಸ್ತ ಧರ್ಮಮಣಿಯಿಂದ ಸಜ್ಜಿತನಾದವನು, ನಯವಿನಯಾದಿ ಗುಣ ಗಳಿಂದ ಒಳ್ಳೆಯ ನಡೆಯುಳ್ಳವನು, ಜಯವಧುವಿನ ಒಡೆಯನಲ್ಲವೆ ? ೧೫೩. ಶೂರ ನಾದ ವೀರಸೇನಕುಮಾರನು ದಯಾಮೃತಸಾರವುಳ್ಳವನು, ಸ್ತ್ರೀಸಮೂಹದ ಮನ ಸ್ಸನ್ನು ವಶಪಡಿಸಿಕೊಳ್ಳುವ ಮನ್ಮಥಾಕೃತಿಯುಳ್ಳವನು, ಭೂದೇವಿಯ ಸ್ತನಕ್ಕೆ ಹಾರ ದಂತಿರುವವನು, ರಸವತ್ತಾದುದನ್ನು ತಿಳಿದವನು, ೧೫೪. ನಿಷಧದೇಶದ ಒಡೆಯ, ಇಂದ್ರಿ ಯಾಭಿಲಾಷೆಗಳನ್ನು ಗೆದ್ದವನು, ಸಮಸ್ತ ಪವಿತ್ರ ವಸ್ತುಗಳ ಒಡೆಯ, ಧುರಾಭರಣೆ

ವಿಷಮ ಚರಿತ್ರವಿದೂರಂ
ಝಷಕೇತನಮೂರ್ತಿ ಸಕಲ ಭುವನಾಧಾರಂ ೧೫೪

ಕ್ಷತ್ರಿಯಕುಲವಂಶಪವಿತ್ರಂ
ದ್ವಾತ್ರಿಂಶಲ್ಲಕ್ಷಣಾನ್ವಿತಂ ಸುಚರಿತ್ರಂ
ಸ್ತೋತ್ರೈಕಪಾತ್ರಕಾಯಂ
ಶತ್ರುವ್ರಜವಿಜಯನೀತಿ ವಿವಿಧೋಪಾಯಂ ೧೫೫

ಸಕಲ ದಿಶಾವಿಜಯಧರಂ
ಪ್ರಕಟಯಶೋವಿಭವನಧಿಕ ಸುಕೃತ ಶರೀರಂ
ಸುಕವಿಸ್ತುತ ಗುಣವಂತಂ
ಪ್ರಕಾಶಸನ್ಮಾರ್ಗವರ್ತಿ ನಳಭೂಕಾಂತಂ ೧೫೬

ನಳನ ಗುಣಪ್ರಭಾವಮನದೇಂ ಬೆಸಗೊಂಡಪೆ ಪೇಳ್ವೆನೆತ್ತ ದೋ
ರ್ವಲದೊಳರಾತಿಯುಂ ತವಿಸಿ ಸಜ್ಜನರಂ ಪರಿಪಾಲಿಸುತ್ತೆ ಸು
ಕುಳ ಮಹದಧ್ವರಂಗಳನಶೇಷಮನುಕ್ತವೆನಲ್ಕೆ [ಮಾಡಿ] ಭೂ
ತಳದೊಳತಿಪ್ರಸಿದ್ಧಿವಡೆದಿರ್ದಪನಲ್ತೆ ಮಹಾನುಭಾವದಿಂ ೧೫೭

ಆತಂ ನಿನ್ನ ಗುಣಪ್ರ
ಖ್ಯಾತಿಯನೆಲ್ಲರ ಮುಖಂಗಳಿಂ ಕೇಳ್ದತಿಸಂ
ಪ್ರೀತಿಯಿನೆನ್ನಂ ಕಳುಪಿದ
ನೀತೆಜದಿಂ ಬಂದೆನಿಲ್ಲಿಗಬ್ಜದಳಾಕ್ಷೀ ೧೫೮

ಯಿಂದ ದೂರನಾದವನು, ಮನ್ಮಥಾಕಾರವುಳ್ಳವನು, ಸಮಸ್ತ ಪ್ರಪಂಚಕ್ಕೂ ಆಧಾರ ನಾದವನು, ೧೫೫. ಕ್ಷತ್ರಿಯಕುಲಶ್ರೇಷ್ಠ, ಮೂವತ್ತೆರಡು ಲಕ್ಷಣಗಳಿಂದ ಕೂಡಿದವನು, ಸದಾಚಾರವುಳ್ಳವನು, ಕೊಂಡಾಡಲು ತಕ್ಕ ಶರೀರವುಳ್ಳವನು, ಶತ್ರುಗಳ ಸಮೂಹವನ್ನು ಗೆಲ್ಲುವ ವಿವಿಧ ನೀತಿಗಳ ಉಪಾಯವನ್ನು ಅರಿತವನು. ೧೫೬. ನಳ ಮಹಾರಾಜನು ಸಮಸ್ತ ದಿಕ್ಕುಗಳನ್ನೂ ಜಯಿಸಿರತಕ್ಕವನು, ಸುಪ್ರಸಿದ್ಧವಾದ ಯಶೋವೈಭವವುಳ್ಳವನು, ವಿಶೇಷವಾದ ಪುಣ್ಯಸ್ವರೂಪಿ, ಸತ್ಕವಿಗಳಿಂದ ಸ್ತುತನಾದ ಗುಣಶಾಲಿ, ಸನ್ಮಾರ್ಗನಿರತನಾದ ತೇಜಸ್ವಿ. ೧೫೭. ನಳನ ಗುಣಪರಿಣಾಮವನ್ನು ಅದೇನೆಂದು ಪೇಳಲಿ ? ಕೀರ್ತಿಶಾಲಿಯಾದ ಬಾಹುಬಲದಿಂದ ಶತ್ರುಗಳನ್ನು ಸಂಹರಿಸಿ, ಒಳ್ಳೆಯವರನ್ನು ಕಾಪಾಡಿ, ದೊಡ್ಡ ಯಾಗಗಳ ಸಮೂಹವನ್ನು ಹೇಳಲು ಅಸಾಧ್ಯವೆಂಬಂತೆ ಅನಂತವಾಗಿ ಮಾಡಿ ಮಹಾಮಹಿಮೆಯಿಂದ ಭೂಮಂಡಲದಲ್ಲಿ ಅತಿಪ್ರಖ್ಯಾತಿಯನ್ನು ಪಡೆದಿರುವನಲ್ಲವೆ ? ೧೫೮. ಆತನು ನಿನ್ನ ಗುಣಕೀರ್ತಿಯನ್ನು ಎಲ್ಲರ ಬಾಯಿಂದಲೂ ಕೇಳಿ ತುಂಬ ಅಭಿಮಾನದಿಂದ ನನ್ನನ್ನು ಕಳುಹಿಸಿದನು. ಎಲೈ ತಾವರೆಯ ಎಸಳಿನಂತಹ

ದಮಯಂತಿಯೆಂಬ ನಾಮಂ
ಸಮಸ್ತ ದೇಶಪ್ರಕಾಶವಾದುದು ಧಾತ್ರೀ
ರಮಣ ನಳನೃಪನ ಕೀರ್ತಿಯ
ಸಮವೆನಲಿದನರಿದು ಬಂದೆನಬ್ಜದಳಾಕ್ಷೀ ೧೪೯

ವ॥ ಎಂದು ಹಂಸಂ ನಳನ ಗುಣಸ್ತುತಿಯಂ ಮಾಡಲದಂ ದಮಯಂತಿ ಕೇಳ್ದು

ಇಂದನುಕೂಲವಾಯ್ತೆನಗೆ ದೇವತೆ ಕೇಳೆಲೆ ರಾಜಹಂಸ ನೀಂ
ಬಂದುದರಿಂ ನೃಪಂ ಸುಖದಿನಿರ್ದಪನೇ ದಮಯಂತಿಯೆಂಬಳಾ
ರೆಂದರೆ ಕೇಳ್ವನೇ ಕರುಣದಿಂ ಬೆಸಗೊಂಬನೆ ಮತ್ಪ್ರಪಂಚವಿಾ
ಯಂದವನೆಲ್ಲವಂ ತಿಳಿಯೆ ಪೇಳ್ ಕಿವಿ ತೀವಿರೆ ವಾಕ್ಸುಧಾರಸಂ ೧೫೦

ಮನದೊಳನಾರತಂ ನಿಜಗುಣಂಗಳನೊಳ್ನುಡಿಯಂ ಸ್ವರೂಪಮಂ
ನೆನೆನೆನೆದೆಯ್ದೆ ನಿನ್ನ ಮಯವಾದನಿತುಂ ಸುಖಮಲ್ಲದುಂಟೆ ಮ
ತ್ತಿನ ಸುಖಮುರ್ವಿಪಂಗೆ ನಿನಗಂ ತನಗಂ ಸ್ಮರನೆಂದು ಸಂಗಮಂ
ಮುನಿಯದೆ ಮಾಳ್ಪನೆಂದು ಸುಖಮಚ್ಚರಿಯಲ್ತೆ ಸರೋರುಹೇಕ್ಷಣೇ ೧೫೧

ಕಣ್ಣುಗಳುಳ್ಳವಳೆ, ಈ ರೀತಿಯಾಗಿ ಇಲ್ಲಿಗೆ ಬಂದೆನು. ೧೪೯. ಭೂಪಾಲಕನಾದ ನಳಮಹಾರಾಜನ ಯಶಸ್ಸಿಗೆ ಸಮನಾಗಿ ದಮಯಂತಿಯೆಂಬ ಹೆಸರು ಎಲ್ಲ ದೇಶಗಳಲ್ಲಿಯೂ ಪ್ರಕಾಶಿಸುತ್ತಿದೆ. ಎಲೈ ತಾವರೆಯ ಎಸಳಿನಂತಹ ಕಣ್ಣುಗಳುಳ್ಳವಳೆ, ಇದನ್ನು ತಿಳಿದು ಬಂದೆನು" ವ॥ ಎಂಬುದಾಗಿ ಹಂಸವು ನಳನ ಗುಣಗಾನವನ್ನು ಮಾಡಲು, ಅದನ್ನು ದಮಯಂತಿ ಕೇಳಿ, ೧೫೦. "ಎಲೈ ರಾಜಹಂಸವೆ ಕೇಳು, ನೀನು ಬಂದಿದ್ದರಿಂದ ಇಂದು ದೇವತೆ ನನಗೆ ಅನುಕೂಲವಾಯಿತು. ಮಹಾರಾಜನು ಸುಖವಾಗಿರುವನೆ ? ದಮಯಂತಿಯೆನ್ನುವವಳು ಯಾರೆಂದು ವಿಶೇಷವಾಗಿ ಕೇಳುತ್ತಾನೆಯೆ ? ನನ್ನ ಪ್ರಚಂಡ ಈ ಅಂದ ಚೆಂದಗಳನ್ನೆಲ್ಲ ವಿಶ್ವಾಸದಿಂದ ಕೇಳುತ್ತಾನೆಯೆ ? ಮಾತಿನ ಅಮೃತರಸವು ಕಿವಿಯನ್ನು ತುಂಬುವಂತೆ ತಿಳಿಯ ಹೇಳು." ೧೫೧. "ಮನಸ್ಸಿನಲ್ಲಿ ಯಾವಾಗಲೂ ನಿಜಗುಣಗಳನ್ನು ಒಳ್ನುಡಿಯನ್ನು ಸ್ವರೂಪವನ್ನು ನೆನೆದು ವಿಶೇಷವಾಗಿ ನಿನ್ನನ್ನೇ ಪರಿಭಾವಿಸಿದಷ್ಟೂ ಮಹಾರಾಜನಿಗೆ ಹೆಚ್ಚಾದ ಸುಖವಲ್ಲದೆ ಬೇರೆ ಸುಖವುಂಟೆ ? ಎಲೈ ತಾವರೆಗಣ್ಣುಳ್ಳವಳೆ, ನಿನಗೂ ಮನ್ಮಥನು ಎಂದು ಸಮಾಗಮವನ್ನು ಕೋಪಿಸಿಕೊಳ್ಳದೆ ಮಾಡುತ್ತಾನೆಯೋ ಅಂದು ಉಂಟಾಗುವ ಸುಖವು ಆಶ್ಚರ್ಯಕರವಾದುದಲ್ಲವೆ (ಎಂದುಕೊಳ್ಳುವನು)

ನಿನ್ನಯ ವಾರ್ತೆಯಂ ಬಯಸಿ ಕೇಳ್ದ ದಿನಂ ಮೊದಲಾಗಿ ಭೂಭುಜಂ
ತನ್ನ ಸುಖಂಗಳಂ ಮಱೆದು ಮೆಲ್ಲೆಲರೀ ಕಡೆಯಿಂದ ಬಂದೊಡಂ
ಮನ್ನಿಸುವಂ ತದಾವಯವ ಕಾರ್ಶ್ಯದಿನಂಗಜಬಾಣವಹ್ನಿದಾ
ಹಂ ನೆಲೆಗೊಂಡುದೆಂದಱಿದು ಚಿಂತಿಸುವರ್ ಸಕಲಾಪ್ತಬಂಧುಗಳ್ ೧೬೨

ನಿಸದಂ ಸುಯ್ವೆಂಕೆಯಿಂದಂ ಕೊರಗಿದ ವದನಂ ಕಾಮಸಂತಾಪದಿಂ ಶೋ
ಷಿಸಿದಂಗಂ ತನ್ನನಾರೆಂದ[ಱುವ]ಱಿಯದ ಚಿತ್ತಂ ಸಮಸ್ತಾಪ್ತರಂ ಮ
ನ್ನಿಸದುಕ್ತಿಭ್ರಾಂತಿ ತನ್ನೊಳ್ ನೆಲಸಿದ ನಳಭೂಪಾಳನಂ ನೋಡ[ಲಾತಂ]
ಪೊಸರೂಪಂ ತಾಳ್ದಿದಂ ಮನ್ಮಥನೃಪನ ಮಹಾನಾಟಕಕ್ಕೆಂಬ ಚಿತ್ರಂ ೧೬೩

ನಿನ್ನಧರಾಮೃತಕ್ಕೆಳಸಿ ತನ್ನ ನೃಪನನ್ನವನಂಘನೊರ್ಮೆಯುಂ
ನಿನ್ನಯ ಸಂಗಮಕ್ಕೆಳಸಿ ಮಾಣ್ದನತೀವ ಸುಖಪ್ರಸಂಗಮಂ
ನಿನ್ನನುರಾಗಮಂ ಬಯಸಿ ಬಿಟ್ಟನನೇಕ ಜನಾನುರಾಗಮಂ
ನಿನ್ನಯ ನೇಹಮಂ ಬಯಸಿ ನಿಂದಿಸುವಂ ಘನ ರಾಜ್ಯಮೋಹಮಂ ೧೬೪

ಚಂದನದಣ್ಪಿನೊಳಿರ್ದುಂ
ನಂದದು ನೃಪವರಂಗೆ [ಮನಸಿಜ]ತಾಪಂ ತಾ
ನೆಂದುಂ ನೀರೊಳಗಿರ್ದುಂ
ನಂದದು ವಡವಾಗ್ನಿಯಂತದೇಂ ವರ್ಣಿಪುದೋ ೧೬೫

೧೬೨. ನಿನ್ನ ಸುದ್ದಿಯನ್ನು ಬಯಸಿ ಕೇಳಿದ ದಿನದಿಂದ ಮೊದಲ್ಗೊಂಡು, ಮಹಾರಾಜನು ತನ್ನ ಸುಖವನ್ನೆಲ್ಲ ಮರೆತು, ಮೆಲುಗಾಳಿ ಈ ಕಡೆಯಿಂದ ಬಂದರೂ (ಅದನ್ನು) ಮನ್ನಿಸುವನು. ಆತನ ಅಂಗಾದಿಗಳು ಕಠಿನವಾಗಿ (ಪರಿಣಮಿಸಿರುವುದರಿಂದ) ಮನ್ಮಥನ ಬಾಣಾಗ್ನಿಯ ಉರಿಯು ನೆಲೆಸಿತೆಂದು ತಿಳಿದು ಸಮಸ್ತ ಬಂಧುಗಳೂ ಚಿಂತಿಸುವರು. ೧೬೩. ನಿಜವಾಗಿಯೂ ನಿಟ್ಟುಸಿರ ಬೆಂಕಿಯಿಂದ ಕೊರಗಿದ ಮುಖ, ಕಾಮದ ಬೇಗೆಯಿಂದ ಬತ್ತಿದ ಶರೀರ, ತಾನು ಯಾರೆಂದು ತಿಳಿಯದ ಮನಸ್ಸು, ಎಲ್ಲ ಇಷ್ಟಮಿತ್ರರನ್ನೂ ಮನ್ನಿಸದ ಮಾತು, ತನ್ನಲ್ಲಿ ಭ್ರಾಂತಿ ನೆಲಸಿರುವ ನಳಮಹಾರಾಜನನ್ನು ನೋಡಲು ಆತನು ಮನ್ಮಥಮಹಾರಾಜನ ನಾಟಕಕ್ಕೆ ಹೊಸ ಸ್ವರೂಪವನ್ನು ಧರಿಸಿದ ಚಿತ್ರದಂತಿದ್ದನು. ೧೬೪. ನಿನ್ನ ಕೆಳದುಟಿಯ ಅಮೃತವನ್ನು ಬಯಸಿ, ಆ ಮಹಾರಾಜನು ಒಮ್ಮೆಯಾದರೂ ಅನ್ನವನ್ನು ತಿನ್ನಲೊಲ್ಲನು ; ನಿನ್ನ ಮಿಲನಕ್ಕೆ ಬಯಸಿ ಅತ್ಯಧಿಕವಾದ ಸುಖಸಂದರ್ಭಗಳನ್ನು ತೊರೆದನು ; ನಿನ್ನ ಪ್ರೇಮವನ್ನು ಬಯಸಿ ಅನೇಕ ಜನರ ಪ್ರೀತಿ ವಿಶ್ವಾಸಗಳನ್ನು ಕೈಬಿಟ್ಟನು, ನಿನ್ನ ಸ್ನೇಹವನ್ನು ಬಯಸಿ ಶ್ರೇಷ್ಠವಾದ ರಾಜ್ಯದಾಸೆಯನ್ನೇ ದೂಷಿಸುವನು ೧೬೫. ಶ್ರೀಗಂಧದ ತಂಪನ್ನು ಪಡೆದಿದ್ದರೂ ನೃಪಶ್ರೇಷ್ಠನಿಗೆ ಮನ್ಮಥನ ತಾಪವು ನಿವಾರಣೆಯಾಗದು ಬಡಬಾಗ್ನಿಯು ಸರ್ವದಾ ನೀರೊಳಗಿದ್ದೂ ತಣ್ಣಗಾಗದು. ಅದನ್ನು

ಮೆಟ್ಟಿದೊಡೆ ದೂವೆಯಿಡುವುದು
ಸುಟ್ಟುಂಬೆಯ ಕೂಡೆಯುರಿ ನಿಮಿರ್ವುದು ಭೂಪಂ
ಮುಟ್ಟಿದೊಡೆ ಪೊತ್ತಿ ಹೊಗೆವುದು
ಕಟ್ಟುಗ್ರಂ ವಿರಹತಾಪದಂಗಜಕೋಪಂ ೧೬೬

ವಿರಹದವಾನಳಂ ನೃಪನ ಹೃದ್ವನದೊಳ್ ಮಿಗೆ ಪರ್ವಿ ಧೈರ್ಯಭೂ
ಧರವನಡರ್ವವೊಲ್ ವಿವಿಧ ಸಾಧ್ವಸಬುದ್ಧಿ ಮೃಗಂಗಳು ಪೊದ
ಟ್ಟುರಿಗಳಿನೆಬ್ಬೆ ಪೂರ್ಣತನುಕಾಂತಿ ಲತಾವನ ಪಲ್ಲವಾಳಿ ಸೀ
ಕರಿಗರೆವಂತಳುರ್ವುದು ಮನೋಜರಸಂ ಕುದಿದುಕ್ಕುವನ್ನೆಗಂ ೧೬೭

ಎಲೆ ದಮಯಂತಿ ಪಾವಕನಳುರ್ವ ನಿಜೇಶನ ಚಿತ್ತದಲ್ಲಿ ನೀಂ
ನೆಲಸಿದ ಭಂಗಿಯಿಂದ[ವನದಂ] ತಿಳಿದೆಂ ಮೊದಲೊಳ್ ವಿಚಾರಿಸಲ್
ಸಲೆ ಶುಚಿಯಾವ ನೀಂ ನಳನ ವಲ್ಲಭೆಯೆಂಬುದನಲ್ಲದಂದು ಪೇಟಿ
ನಳಹೃದಯಾಗ್ನಿಯಿಂದುಳಿದ ಕಾರಣವೇಂ ತರಳಾಯತೇಕ್ಷಣೇ ೧೬೮

ಗಾಳಿಯನೊಲ್ಲದಿಂಧನಮನೊಲ್ಲದೆ ಕರ್ಬೊಗೆಯುರ್ವದಿಂ ತಳಂ
ಬೀಳದೆ ನೀಳ್ದ ದಳ್ಳುರಿಗಳೇಳದೆ ಪರ್ಬುವ ಶಂಬರಾರಿ ಬಾ

ಧೆಯನೆಂದು ವರ್ಣಿಸುವುದೋ ! ೧೬೬. ಅಗಲಿಕೆಯ ತಾಪವನ್ನು ಉಂಟುಮಾಡುವ ಮನ್ಮಥನ ಕೋಪವು ಅತಿಭಯಂಕರವಾದುದೇ ಸರಿ ! ಅದನ್ನು ಮೆಟ್ಟಿದ್ದೇ ಆದರೆ ಹೊಗೆಯೇಳುವುದು. ತೋರುಬೆರಳಿನೊಂದಿಗೆ ಉರಿ ಮೇಲೇಳುವುದು. ಮಹಾರಾಜನು ಮುಟ್ಟಿದರೆ ಹೊತ್ತಿ ಉರಿಯುವುದು. ೧೬೭. ವಿರಹದಾವಾಗ್ನಿ ಮಹಾರಾಜನ ಹೃದಯವೆಂಬ ವನದಲ್ಲಿ ವಿಶೇಷವಾಗಿ ಹಬ್ಬಿ, ಧೈರ್ಯಪರ್ವತವನ್ನು ಅಮರುವಂತೆ, ನಾನಾ ಬಗೆಯಾದ ಭಯಚಕಿತ ಬುದ್ಧಿಮೃಗಗಳನ್ನು ಆವರಿಸಿ, ಮೇಲೆಬ್ಬಿಸಲು, ಸಮಗ್ರವಾದ ಶರೀರದ ಕಾಂತಿ ಮತ್ತು ಬಳ್ಳಿಗಳಿರುವ ವನದ ಚಿಗುರೆಲ್ಲವೂ ಕರಿಕಾಗುವಂತೆ ಮನ್ಮಥನ ರಸವು ಕುದಿದು ಉಕ್ಕುವವರೆಗೆ ಎಲ್ಲೆಲ್ಲಿಯೂ ವ್ಯಾಪಿಸುವುದು. ೧೬೮. ಎಲೈ ದಮಯಂತಿಯೆ ! ಮೊದಲಾಗಿ ವಿಚಾರಿಸಿದಲ್ಲಿ, ಅತ್ಯಂತ ಶುಚಿಯಾದ ನೀನು ನಳನ ಪ್ರಿಯೆಯೆನ್ನುವುದನ್ನು ಬೆಂಕಿಯು ಆವರಿಸಿರುವ ನಿನ್ನ ರಮಣನ ಚಿತ್ತದಲ್ಲಿ ನೀನು ನೆಲಸಿರುವ ನಿಲುವಿನ ರೀತಿಯಿಂದಲೇ ಗ್ರಹಿಸಿದೆನು. ಹಾಗಿಲ್ಲದಿದ್ದಲ್ಲಿ, ಎಲೈ ಚಂಚಲವೂ ವಿಸ್ತಾರವೂ ಆದ ಕಣ್ಣುಳ್ಳವಳೇ, ನಳನ ಹೃದಯಾಗ್ನಿಯಿಂದ [ನೀನು] ಉಳಿದಿರಲು ಬೇರೆ ಕಾರಣವಾದರೂ ಏನಿದೆ ? ೧೬೯. ಗಾಳಿಯನ್ನು ಆಶಿಸದೆ, ಕಟ್ಟಿಗೆಯನ್ನು ಬಯಸದೆ, ಕಪ್ಪುಹೊಗೆಯು ವ್ಯಾಪಿಸುವಿಕೆಯಿಂದ ಕೆಳಗುರುಳದೆ, ಚಾಚಿರುವ

ಕಾಳಿಯ ಕಿಚ್ಚು ತನ್ನೃಪನ ಚಿತ್ತದೊಳುಣ್ಮೆ ತದೀಯ ಸಾಧ್ವಸೋ
ನ್ಮೂಲವನೆಯ್ದೆಮಾಡದು ನೆಱೆ ನಂದಿಪ್ಪಪಾಯಮನಾರೊ ಬಲ್ಲವರ್ ೧೯೯

ತಿಳಿಗೊಳದೊಳ್ ಕುಳಿರ್ವ ವಿಷಮೆಯ್ದೆ ವಿಷಂ ಸತತಂ ವನಾಂತದೊಳ್
ತಳಿರೆಸೆವಾಮ್ರನಾಮದ ಕುಜಾತಿಗಳೆಯ್ದೆ ಕುಜಾತಿಯಾವಗಂ
ಗಳಪುವ ಕೀರಕೋಕಿಳ ವಿಜಾತಿಗಳೆಯ್ದೆ ವಿಜಾತಿಯೆಂದು ಸಂ
ಚಲಿಸಿ ಕರಂ ಕರಂ ಭ್ರಮಿಸುವಂ ಸ್ಮರತಾಪದಿನಾ ನೃಪಾಲಕಂ ೧೭೦

ಮದನಾನಳ ಘನತಾಪಂ
ಸುದತಿಯ ಲಾವಣ್ಯರಸದ ಸೇಚನದಿಂದ
ಲ್ಲದೆ [ತಣಿಯದು] ಮಿಕ್ಕುಪಚಾ
ರದಿನದು ಮಿಗಿಲಾಗದಿರ್ಕುಮೇ ಅನವರತಂ ೧೭೧

ಮನಸಿಜನಾರ್ಪಿನಿಂ ನೃಪತಿಯಂ ಗೆಲಲಾಱೆನೆನುತ್ತ ಭೀಮನಂ
ದನೆಯ ಸಹಾಯಮಂ ಪಡೆದು ಪೂಗಣೆಯಿಂ ಪೊಸಜೊನ್ನದಿಂ ಪಿಕ
ಧ್ವನಿಗಳನಾಮ್ರದಿಂ ಸುೞಿವ ಮೆಲ್ಲೆಲರಿಂ ತವೆಗೆಲ್ವೆನೀತಿದಂ
ಗನೆಯ ಸಹಾಯದೊಳ್ಪೊ ಕುಸುಮಾಸ್ತ್ರನ ಬಲ್ಪೊ ಕರಂ ವಿಚಾರಿಸಲ್ ೧೭೨

ಧಗಧಗಿಸುವ ಜ್ವಾಲೆಗಳು ಏಳದೆ, ಹಬ್ಬುವ ಮನ್ಮಥನ ಬಾಣಸಮೂಹದ ಕಿಚ್ಚು ಆ ಮಹಾರಾಜನ ಮನಸ್ಸಿನಲ್ಲಿ ಹೊಮ್ಮಲು, ನಿನ್ನ ಅಂಜಿಕೆಯನ್ನು ನಿರ್ಮೂಲ ಮಾಡಲು ಪೂರ್ತಿಯಾಗಿ ನಿವಾರಿಸುವ ಉಪಾಯವನ್ನು ಯಾರುತಾನೆ ಬಲ್ಲರು ? ೧೭೦. ತಿಳಿಗೊಳದಲ್ಲಿನ ತಂಪಾದ ನೀರೆಲ್ಲವನ್ನೂ ವಿಷವೆಂದೂ, ಸರ್ವದಾ ವನದ ತೀರದಲ್ಲಿ ಚಿಗುರಿನಿಂದ ಕೂಡಿ ತೋರಿಬರುವ ಮಾವಿನ ಹೆಸರಿನ ಗಿಡಗಳೆಲ್ಲವನ್ನೂ ಕನಿಷ್ಠಜಾತಿಯವುಗಳೆಂದೂ, ಯಾವಾಗಲೂ ಕೂಗುತ್ತಿರುವ ಗಿಳಿ, ಕೋಕಿಲೆಯೇ ಮೊದಲಾದ ಪಕ್ಷಿಸಮೂಹಗಳನ್ನೆಲ್ಲ ಜಾತಿಬಾಹಿರವಾದುವೆಂದೂ ಆ ಮಹಾರಾಜನು ಮನ್ಮಥನ ತಾಪಕ್ಕೆ ಗುರಿಯಾಗಿ ವಿಶೇಷವಾಗಿ ತಲ್ಲಣಿಸಿ, ಅತಿಯಾಗಿ ಭ್ರಾಂತಿಪರವಶನಾಗಿರುವನು. (ಈ ಪದ್ಯದಲ್ಲಿ ವಿಷ, ಕುಜಾತಿ ಮತ್ತು ವಿಜಾತಿಗಳೆಂಬ ಶಬ್ದಗಳನ್ನು ದ್ವಂದ್ವಾರ್ಥ ಬರುವಂತೆ ಪುನರುಕ್ತಿ ಮೂಲಕವಾಗಿ ಕವಿ ಬಳಸಿರುವನು) ೧೭೧. ಮನ್ಮಥಾಗ್ನಿಯ ಉಜ್ವಲವಾದ ಬೇಗೆಯು ಯುವತಿಯ ಸೌಂದರ್ಯರಸದ ಸಿಂಪಡಿಸುವಿಕೆಯಿಂದಲ್ಲದೆ ನಿವಾರಣೆಯಾಗದು. ಉಳಿದ ಶೈತ್ಯೋಪಚಾರಗಳಿಂದ ಅದು ಸರ್ವದಾ ಹೆಚ್ಚಾಗದೆ ಇರುವುದೆ ? ೧೭೨ ಮನ್ಮಥನು ಸ್ವಸಾಮರ್ಥ್ಯದಿಂದ ಮಹಾರಾಜನನ್ನು ಜಯಿಸಲಾರೆನು. ಒಟ್ಟಾಗಿ ಭೀಮಪುತ್ರಿಯ ಸಹಾಯವನ್ನು ಪಡೆದು, ಪುಷ್ಪಬಾಣದಿಂದಲೂ, ಹೊಸತಾದ ಬೆಳುದಿಂಗಳಿನಿಂದಲೂ ಕೋಗಿಲೆಗಳ ಧ್ವನಿಗಳಿಂದಲೂ, ಮಾವಿನಿಂದಲೂ, ಸುಳಿಯುವ ಮೆಲುಗಾಳಿಯಿಂದಲೂ, ತಪ್ಪದೆ ಗೆಲ್ಲುವೆನೆಂದು (ಇದ್ದಾನೆ). ವಿಚಾರಿಸಿ ನೋಡಲು, ಈತಿದು ಹೆಂಗಸಿನ ಸಹಾಯದ

ಉಕ್ಕಿವವೆನ್ನದಿರಂಗನೆ
ಮಿಕ್ಕವರಂತಲ್ತು ವಿರಹತಾಪಂ ಭೂಪಂ
ಹೊಕ್ಕೆರಿ ಬತ್ತುವಂತಾ
ಯ್ತುಕ್ಕಜವಸಮಾಸ್ತ್ರದುಗ್ರತಾಪಂ ನೃಪನೊಳ್ ೧೭೩

ನಿನಗಾತಂ ಪ್ರಾಣನಾಥಂ ಬಗೆಯೊಳಿತರ ಕನ್ಯಾಕುಲಂ ಬಾಳ್ತೆಯಲ್ತಾ
ತನೊಳೀಗಳ್ ನಿನ್ನ ರೂಪಂ ನಿಜಗುಣಪತಿಯಂ ಕಂಡುದಕ್ಕುರ್ವಿಯೊಳ್ ಮ
ತ್ತಿನ ಭೂಪರ್ ಬಾಳ್ತೆಯೇ ಕಾಮಿನಿ ನಿನಗೆನಲಾಗಳ್ ಮನೋಜಾಸ್ತ್ರಜಾಳಂ
ತನುವಂ ತಟ್ಟುರ್ಚಿದಂತಾಯ್ತಬಲೆ ಮದನ ಸಂತಾಪದಿಂ ಮೂರ್ಛೆವೋದಳ್ ೧೭೪

ಎಡೆವಿಡದೆ ರಾಜಹಂಸನ
ನುಡಿಯಂ ಕೇಳಲ್ಕೆ ಮೂರ್ಛೆ ತಿಳಿದಾಕೆ ಪದಿ
ರ್ಮಡಿಸಲನುರಾಗದಿನ್ನೀ
ಯೆಡೆಗಾವುದುಪಾಯಮುಟಿದ ತೆಜನೇನೆಂದಳ್ ೧೭೫

ಈ ತೆಜನನಾತನೊಳ್ ಪಡೆ
ಮಾತಂ ಪೇಟ್ದಿನ್ನ ಸುಖದಿನಿರ್ದಪೆನೆಂದಂ (?)
ದಾ ತರುಣಿಯಿಂದ ಬೀಟ್ಕೊಂ
ಡಾತುರದಿಂ ಹೊನ್ನಹಂಸೆ ಪೋದುದಲಂಪಿಂ ೧೭೬

ಮೇಲ್ಮೆಯೋ, (ಇಲ್ಲವೇ) ಮನ್ಮಥನ ಬಲ್ಮೆಯೋ ? ೧೭೩. ಎಲೈ ವನಿತೆಯೆ ! ಇದು ಮೋಸವೆಂದು ಭಾವಿಸದಿರು. ಮಹಾರಾಜನ ವಿರಹತಾಪವು ಉಳಿದವರಂತಲ್ಲ. ಅದು ಮಹಾರಾಜನನ್ನು ಆವರಿಸಿಕೊಂಡು ಸುಡುವಂತಾಯಿತು. ಪಂಚಬಾಣಗಳ ತೀವ್ರ ತಾಪವು ಆಶ್ಚರ್ಯವೇ ಸರಿ. ೧೭೪. ನಿನಗೆ ಆತನೇ ಪ್ರಾಣವಲ್ಲಭ. (ಆತನ) ಮನಸ್ಸಿನಲ್ಲಿ ಇತರ ಕನ್ಯಾಸಮೂಹವು ಬಾಳುವಂತಿಲ್ಲ. ಈಗ ನಿನ್ನ ರೂಪವು ಆತನಲ್ಲಿ ಗುಣಶಾಲಿಯಾದ ಗಂಡನನ್ನು ಕಂಡಂತಾಯಿತು. ಎಲೈ ತರುಣಿಯೆ ಈ ಭೂಮಂಡಲದಲ್ಲಿ ಇತರ ಮಹಾರಾಜರು ನಿನ್ನ ಬಾಳಿಗೆ ಒಪ್ಪುವರೆ ?'' ಎನ್ನಲು ಮನ್ಮಥನ ಬಾಣವು (ಆಕೆಯ) ಶರೀರವನ್ನು ಹೊಕ್ಕು ಚುಚ್ಚಿದಂತಾಯಿತು. ಆ ಯುವತಿ ಮನ್ಮಥನ ಬೇಗೆಯಿಂದ ಮೂರ್ಛೆಹೋದಳು. ೧೭೫. ರಾಜಹಂಸನ ಮಾತುಗಳನ್ನು ತಪ್ಪದೆ ಕೇಳಲು, ಆಕೆ ಮೂರ್ಛೆಯಿಂದೆದ್ದು ಪ್ರೇಮವು ಹತ್ತುಮಡಿಯಾಗಲು, ''ಈ ಸಮಯದಲ್ಲಿ ಉಪಾಯವಾದರೂ ಏನು ? ಮಿಕ್ಕ ಕ್ರಮವಾದರೂ ಯಾವುದು ?'' ಎಂದಳು. ೧೭೬. ಈ ಬಗೆಯಾದ ಸಮಾಚಾರವನ್ನು ಆತನಲ್ಲಿ ವಿಜ್ಞಾಪಿಸಿಕೊಂಡು ನಾನಾದರೂ ಸುಖವಾಗಿರುವೆನೆಂಬುದಾಗಿ, ಅಂದು ಆ ತರುಣಿಯನ್ನು ಬೀಳ್ಕೊಟ್ಟು ! ಒಡನೆಯೇ ಹೊನ್ನ ಹಂಸವು

ದಮಯಂತಿಯ ತಾಪದನು
ಕ್ರಮಮಂ ತವೆತಿಳಿದು ನಲಿದು ಪೊನ್ನಂಚೆ ಧರಾ
ರಮಣನ ಪದಕಮಲಪರಾ
ಗಮನೀಂಟಲ್ ಸಾರ್ದು ಪೇೞ್ದುದಾಕೆಯ ತೆಱನಂ ೧೭೭

ಏಕೆ ಸರೋವರಕ್ಕೆಳಸಿ ಪೋದೆನೊ ಹಂಸೆಯುದೇಕೆ ಬಂದುದಾ
ನೇಕದನಟ್ಟಿ ಮುಟ್ಟಿ ಪಿಡಿದೆನ್ನೆದೆಗಿಚ್ಚಿನ ಮಾತುಗಳ್ಗೆ ನಿಂ
ತೇಕೆ ಕೆರಳ್ಚಿಕೊಂಡೆನೊ ಮನೋಜನನೆಂದನುತಾಪದಿಂ ಮಗು
ೞ್ದಾಕೆ ನಿಜಾಲಯಕ್ಕೆ ಸಖಿಯರ್ ಬೆರಸೊಯ್ಯನೆ ಬಂದಳಾಕ್ಷಣಂ ೧೭೮

ವ|| ಆ ಸಮಯದೊಳ್

ದಿವಸಶ್ರೀಸಹಿತಂ ಪ್ರಭಾವತಿಯುಮಂ ತಾನುಂ ಮನೋರಾಗದಿಂ
ದಿವಿಜಾಶಾವಧು ಪೋಗಿ ಬನ್ನಿಮೆನೆ ಪೆಂಪಿಂದಂ ಜಳಕ್ರೀಡೆಗು
ತ್ಸವದಿಂ ಚಿತ್ತಮನಿತ್ತು ಪಶ್ಚಿಮದಿಶಾಂಭೋರಾಶಿ ಪದ್ಮಾಕರ
ಕ್ಕೆ ವಿಳಾಸಂಬಿಡದೆಯ್ದಿದಂ ತವಕದಿಂ ಪಂಕೇಜನೀವಲ್ಲಭಂ ೧೭೯

ಸಂಕಲ್ಪಸಿದ್ಧಿಯಾದುದು
ಸಂಕೆಯನುೞಿ ನಳನೃಪಾಲ ತದ್ವಧು ಸಲೆ ನಿ
ನ್ನಂಕದೊಳಿರ್ದಪಳೆಂದಱಿ
ಯಾಂ ಕಳುಹಿಸಿಕೊಂಡು ಪೋಪೆನೆಂದುದು ಹಂಸಂ ೧೮೦

ಹಿಗ್ಗಿನಿಂದ ಹೊರಟಿತು. ೧೭೭. ದಮಯಂತಿಯ ಬೇಗೆಯ ರೀತಿಯನ್ನು ಚೆನ್ನಾಗಿ ಗ್ರಹಿಸಿ, ಸಂತೋಷಿಸಿ, ಆ ಸುವರ್ಣ ಹಂಸಮಹಾರಾಜನ ಪಾದಪದ್ಮದ ಪರಾಗವನ್ನು ಸವಿಯಲು ತೆರಳಿ, ಆಕೆಯ ಸ್ಥಿತಿಯನ್ನು ಹೇಳಿತು. ೧೭೮. 'ಸರೋವರಕ್ಕೆ ಯಾಕೆ ಬಯಸಿ ಹೋದೆನೊ, ಹಂಸವಾದರೂ ಯಾಕೆ ಬಂದಿತೋ, ನಾನೇಕೆ ಅದನ್ನು ಮುಟ್ಟಿ ಹಿಡಿದೆನೋ ಎದೆಗಿಚ್ಚಿನ ಮಾತುಗಳನ್ನು ಆಲಿಸಿ ಯಾಕಾದರೂ ಮನ್ಮಥನನ್ನು ಕೆರಳಿಸಿದೆನೊ' ಎಂದು, ಸಂಕಟದಿಂದ ಹಿಂತಿರುಗಿ ಆಕೆ (ದಮಯಂತಿ) ಗೆಳತಿಯರೊಂದಿಗೆ ಕೂಡಿ, ಒಡನೆಯೇ ತನ್ನ ಮನೆಗೆ ಬಂದಳು. ವ|| ಆ ಸಮಯದಲ್ಲಿ, ೧೭೯. ಪೂರ್ವ ದಿಗ್ವಧು ಹೋಗಿ ಬನ್ನಿ ಎನ್ನಲು, ತಾವರೆಯ ಒಡೆಯನಾದ ಸೂರ್ಯನು, ದಿನಲಕ್ಷ್ಮೀಸಮೇತನಾಗಿ ಪ್ರಭಾವತಿಯರೂ ತಾನೂ ಮನಸ್ಸಂತೋಷದಿಂದ ಹೆಮ್ಮೆಯಿಂದ ಜಲಕ್ರೀಡೆಗಾಗಿ ವೈಭವದಿಂದ ಮನವಾರೆ, ಪಶ್ಚಿಮದಿಶಾಸಮುದ್ರವೆಂಬ ತಾವರೆಗೊಳಕ್ಕೆ ತಪ್ಪದೆ ಬೇಗನೆ ಹೊರಟುಬಂದನು. ೧೮೦. "ಎಲೈ ನಳಮಹಾರಾಜನೆ, ಸಂಕಲ್ಪಸಿದ್ಧಿಯಾಯಿತು. ಶಂಕೆಯನ್ನು ಬಿಡು. ಆ ಯುವತಿ ನಿನ್ನ ವಶದಲ್ಲಿರುವಳೆಂದು ತಿಳಿ. ನಾನು ನಿನ್ನ (ಅನುಮತಿಯಿಂದ) ಹೋಗಿ

ಎಮ್ಮ ಮುಖಪ್ರಸನ್ನಮಳಿದುಂ ನಿಜಜೀವನದಾಸೆಯುಂದದಿಂ
ದುಮ್ಮಳಿಸಲ್ಕೆ ಚಿಂತೆ ಕರಿಗಟ್ಟಿದ ಚಿತ್ತದೊಳೆಲ್ಲಮಾಡಿರುಳ್
ತಮ್ಮ[ಯು]ಲರ್ಗಳಂ ಮುಗಿದು ಮೆಯ್ಯಲಸಲ್ ತಲೆವಾಗಿ ಕಾಲದಿಂ
ಹಮ್ಮೈದವೋಗಲಿರ್ದುದತಿ ಮಿತ್ರವಿಯೋಗದಿನಬ್ಜಸಂಕುಳಂ (?) ೧೮೧

ಅಗಲ್ದೆಮ್ಮನಪರದಿಕ್ಕಾಂ
ತೆಗೆ ಕೂರ್ತಿನನಿನಯನೆಯ್ದಿಪನೆಂದೀಗಳ್
ನಗೆಗೆಡೆಯಾದಪೆನುತ್ಪಲಿ
ನಿಗೇದು ತಲೆವಾಗಿತಬ್ಜಿನೀನಿಕುರುಂಬಂ ೧೮೨

ನೀಲಿಯ ದಟ್ಟಿಯನಿಳೆಗೆ ದಿ
ಶಾಲಂಬನಮಾಗೆ ಕವಿದನಸುರಾರಿಯೆನ
ಲ್ಕಾಲೋಕನಕ್ಕೆ ಭಯಮುಮಂ
ಸಾಲಿಡುತಂ ತಂದಸುಧಕಾರಾಕಾರಂ ೧೮೩

ಇರುಳೆಮ್ಮ ರಾಜ್ಯಮೆಂದಸು
ರರ ಪಡೆ ಕವಿದೆಸುತ ಪಡುವಣಿಂ ಬರಲಾಗಳ್
ಸುರಪತಿಯೊಡ್ಡಿದ ಪಳುಕಿನ
ಹರಿಗೆಯೆನಲ್ ಮೂಡಿದತ್ತು ಹಿಮಕರಬಿಂಬಂ ೧೮೪

ಬರುವೆನು" ಎಂದು ಹಂಸವು ಹೇಳಿತು. ೧೮೧. ಸೂರ್ಯನ ಅಗಲಿಕೆಯಿಂದ ತಾವರೆಗಳ ಸಮೂಹವು ತಮ್ಮ ಮುಖದ ಹರ್ಷವನ್ನೆಲ್ಲ ಕಳೆದುಕೊಂಡು, ತಾವು ಬದುಕುವ ಆಸೆಯ ಕ್ರಮವೇನೆಂದು ದುಃಖಿಸುತ್ತಿರಲು (ಇಲ್ಲಿ 'ಜೀವನ' ಎಂಬ ಶಬ್ದದಲ್ಲಿ ತಾವರೆಗೆ ಅನ್ವಯಿಸುವಂತೆ 'ನೀರು' ಎಂಬ ಅರ್ಥವೂ ಹುದುಗಿದೆ.) ಚಿಂತೆ ಕಪ್ಪುಗಟ್ಟಿದ ಮನಸ್ಸಿನಿಂದ ಆ ರಾತ್ರಿಯೆಲ್ಲ ತಮ್ಮ ಎಸಳುಗಳನ್ನು ಮುಚ್ಚಿ ಶರೀರಕ್ಕೆ ಬೇಸರವಾಗಲು ತಲೆತಗ್ಗಿಸಿ ಕಾಲವಶದಿಂದ ಮೂರ್ಛಾಗತವಾಗತೊಡಗಿದುವು. ೧೮೨. ಪ್ರಿಯನಾದ ಸೂರ್ಯನು ನಮ್ಮನ್ನು ಅಗಲಿ, ಪಶ್ಚಿಮ ದಿಗ್ವನಿತೆಗೆ ಒಲಿದು ತೆರಳಿರುವನೆಂಬುದಾಗಿಯೂ, ಈಗ ಕನ್ನೈದಿಲೆಯ ಅಪಹಾಸ್ಯಕ್ಕೆ ಗುರಿಯಾದೆವು ಎಂಬುದಾಗಿಯೂ ತಾವರೆಗಳ ಸಮೂಹವು ತಲೆ ತಗ್ಗಿಸಿದುವು. ೧೮೩. ರಾಕ್ಷಸರ ಶತ್ರುವಾದ ಭಗವಂತನು ದಿಕ್ಕುಗಳು ಆಸರೆಯಾಗಲು, ಕಪ್ಪುಬಟ್ಟೆಯನ್ನು ಭೂಮಂಡಲಕ್ಕೆ ಮುಚ್ಚಿದನೋ ಎಂಬಂತೆ ನೋಡುವುದಕ್ಕೆ ಭಯವನ್ನು ಸಾಲಿಡುತ್ತ ರಾತ್ರಿಯ ಆಕೃತಿಯನ್ನು ಬರಮಾಡಿದನು. ೧೮೪. ರಾತ್ರಿ ತಮ್ಮ ರಾಜ್ಯವೆಂದು ರಾಕ್ಷಸರ ಪಡೆ ಆವರಿಸಿ ಹೊಡೆಯುತ್ತ ಪಶ್ಚಿಮದಿಂದ ಬರಲು, ಆಗ ದೇವೇಂದ್ರನು ಅಡ್ಡವಾಗಿಟ್ಟ ಸ್ಫಟಿಕದ

ಕ್ಷೀರಾಂಬುಧಿ ಪೆರ್ಚೀಗಳ್
ಮೇರೆಯನುಱೆ ಮೀಱಿ ಧರೆಯನಾವರಿಸಿತ್ತೆಂ
ದೋರಂತೆಲ್ಲರ್ ಬಗೆಯಲ್
ಭೋರನೆ ಪಸರಿಸಿತು ಪೊಚ್ಚಪೊಸವೆಳ್ದಿಂಗಳ್ ೧೮೫

ಶಶಿಯೋ ಕಾಯ್ವರ್ಕನೊ ಪೆ
ರ್ಬಿಸಿಲೋ ಬೆಳ್ದಿಂಗಳೋ ವಿಭೇದಿಸಲಱಿದೆಂ
ದಸಮಶರವಹ್ನಿಯಿಂ ಸಂ
ಕಿಸುವಳ್ ದಮಯಂತಿ ವಿರಹಮೇಂ ಕೇವಳಮೇ ೧೮೬

ಏನೆಂಗುಮೊ ಹಂಸಂ ನೃಪ
ನೇನೆಂಬನೊ ಪೂರ್ವಭವದ ಮದ್ಭಾಗ್ಯಂ ತಾ
ನೇನಕ್ಕುಮೊ ಜನಕಂ ತಾ
ನೇನೆಂಬನೊ ಪೆಱ್ನುತ್ತ ಪಲವು ಬಗೆದಳ್ ೧೮೭

ಎಲ್ಲಿಯವಳೆಂಬನೋ ಕರುಣದಿಂ ಬೆಸಗೊಂಬನೊ ಹಂಸನಂ ನೃಪಂ
ಮೆಲ್ಲಿದನಪ್ಪನೋ ಬಗೆಯದಿರ್ಪನೊ ಕೂರ್ಪನೊ ಮತ್ಪ್ರಪಂಚಮಂ
ತೆಲ್ಲವನೊಲ್ದು ಕೇಳ್ವನೊ ವಿಡಂಬಿಸಿ ನಿಲ್ವನೊ ಮತ್ಪ್ರಸಾದವೆ
ನ್ನಲ್ಲಿಗೆ ಸಾರ್ಗುಮೋ ಸುಖದಿನಿರ್ಕುಮೊ ತನ್ನೊಡಗೂಡಿ ಸಂತತಂ ೧೮೮

ಗುರಾಣಿಯೋ ಎಂಬಂತೆ ಚಂದ್ರಬಿಂಬವು ಮೂಡಿತು. ೧೮೫. ಹಾಲ್ಗಡಲು ಹೆಚ್ಚಿ ಇದೀಗ ಮೇರೆಯನ್ನು ಮೀರಿ ಭೂಮಂಡಲವನ್ನೆಲ್ಲ ಆವರಿಸಿತ್ತು ಎನ್ನುವಂತೆ ಒಂದೇ ಸಮನಾಗಿ ಎಲ್ಲರೂ ಭಾವಿಸಲು ಹೊಚ್ಚ ಹೊಸ ಬೆಳ್ದಿಂಗಳು ಒಂದೇ ಸಮನೆ ವ್ಯಾಪಿಸಿತು. ೧೮೬. ಚಂದ್ರನೋ, ಸುಡುವ ಸೂರ್ಯನೋ, ಅತಿಬಿಸಿಲೋ, ಬೆಳ್ದಿಂಗಳೋ ಎಂಬುದನ್ನು ಪ್ರತ್ಯೇಕಿಸಲು ಅಸಾಧ್ಯವೆಂದು, ಮನ್ಮಥನ ಬೆಂಕಿಯಿಂದ ದಮಯಂತಿ ಶಂಕಿಸುವಳು. ವಿರಹವೇನು ಸಾಮಾನ್ಯವಾದುದೇ ? ೧೮೭. ಹಂಸವು ಏನೆನ್ನುತ್ತದೆಯೋ, ಮಹಾರಾಜನು ಏನೆನ್ನುತ್ತಾನೆಯೋ, ಪೂರ್ವಜನ್ಮದ ನನ್ನ ಭಾಗ್ಯವು ತಾನು ಏನಾಗುತ್ತದೆಯೋ, ತಂದೆಯಾದವನು ಏನೆನ್ನುತ್ತಾನೆಯೋ ಹೇಳೆಂಬುದಾಗಿ ಪಲವಾರು ಬಗೆಗಳಲ್ಲಿ ಚಿಂತಿಸಿದಳು. ೧೮೮. ಎಲ್ಲಿಯವಳೆಂದು ಕೇಳುವನೋ, ಹಂಸವನ್ನು ದಯೆಯಿಂದ ವಿಚಾರಿಸುವನೋ, ಮಹಾರಾಜನು ಮೃದುವಾಗುವನೋ, ಭಾವಿಸದೆ ಹೋಗುವನೋ, ಪ್ರೀತಿಸುವನೋ, ನನ್ನ ಈ ಪ್ರಪಂಚವನ್ನೆಲ್ಲ ಮೆಚ್ಚಿ ಕೇಳುವನೋ, ಕುಹಕದಿಂದ ನಿಲ್ಲುವನೋ ನನ್ನ ಭಾಗ್ಯ ನನ್ನಲ್ಲಿಗೆ ಬರುವುದೆ, ನನ್ನೊಂದಿಗೆ

ನೃಪನೆನ್ನಂ ಬಗೆದಿರ್ಕುಮೋ ಕರುಣದಿಂ ಕೈಸಾರ್ಗುಮೋ ಪೇೞೆಮೆಂ
ದುಃಪತಾಪಂ ಮಿಗೆ ಸುಯ್ದು ಕುಂದಿ ತನುಧಾಮಂ ಕುಂದಿಯಾಹಾರಮೆಂ
ಬ ಪದಂಗೇಳದೆ ಲಜ್ಜೆಯಂ ಮಱೆದು ಮೌನಂಬೆತ್ತು ಕಣ್ಮುಚ್ಚಿ ಶಂ
ಕಿಪಳಂ ಮೆಲ್ಲನೆ ಸಾರ್ದು ಸಾರ್ದು ಸಖಿಯರ್ ಪೊಂಬಾೞೆಯಿಂ ಬೀಸುವರ್ ೧೮೯

ಏಕೆ ದಮಯಂತಿ ಹಂಸೆಯೊ
ಳೇಕಾಂತವನೆಸಗಿ ಬೞಲ್ವೆಯೆಂದೊಡೆ ಚಿತ್ತ
ವ್ಯಾಕುಳವಾಗದೆ ವಲ್ಲಭ
ರಾಕಾಂಕ್ಷೆಯಿನೆಂದು ಕಾಂತೆ ಮೆಯ್ಮಱೆದಿರ್ದಳ್ ೧೯೦

ತಾವರೆನೂಲ ನಾರಿಯೊ(ಯೆ ?)ಳೆ ಕಬ್ಬಿನ ಬಿಲ್ಲಲರಂಬು ಮೆಲ್ಲೆಲರ್
ಮಾವು ಶುಕಾಳಿ ತುಂಬಿ ಮಱಿಗೋಗಿಲೆ ತಿಂಗಳ ಉಲ್ಲಸಂಗಳಂ
ಭಾವಭವಂ ಗಡಂ ಬಗೆಯೆ ತಾಂ ಭುವನತ್ರಿತಯಂಗಳಂ ಗೆಲಲ್
ಕೋವಿದನೆಂಬ ಬಲ್ನುಡಿಗಳಿಂದು ಪರೀಕ್ಷೆಗೆ ಬಂದವೀಕೆಯೊಳ್ ೧೯೧

ಪಾಸುವಶೋಕೆಯೊಳ್ದಳಿರಲರ್ಗಳ ನೀರ್ದಳಿಪಬ್ಜಪತ್ರಮಂ
ಬೀಸುವ ಮೆಲ್ಲೆಲರ್ ಕುಳಿರ್ವ ಚಂದನದಣ್ಪು ಲಸತ್ತುಷಾರಮಂ

ಕೂಡಿ ಸುಖವಾಗಿ ಇರುವುದೆ ? ೧೮೯. ಮಹಾರಾಜನು ನನ್ನನ್ನು ಭಾವಿಸುವನೆ, ದಯೆಯಿಂದ ನನ್ನ ವಶನಾಗುವನೆ ಹೇಳಿರೆಂದು (ಕೋರಿ) ಉದ್ವೇಗವು ಮೇರೆ ಮೀರಲು ನಿಟ್ಟುಸಿರನ್ನು ಬಿಟ್ಟು, ಬಾಡಿ, ಶರೀರವೆಂಬ ಗೃಹವು ಕುಗ್ಗಿ, ಆಹಾರವೆಂಬ ಮಾತನ್ನು ಆಲಿಸದೆ, ನಾಚಿಕೆಯನ್ನು ಮರೆತು, ಮೌನದಿಂದ ಕೂಡಿ, ಕಣ್ಮುಚ್ಚಿ, ಶಂಕಿಸುತ್ತಿರುವವಳನ್ನು ಮೆಲ್ಲಗೆ ಹತ್ತಿರ ಹೋಗಿ ಗೆಳತಿಯರು ಹೊಂಬಾಳೆಯ ಎಲೆಯಿಂದ ಗಾಳಿ ಬೀಸುವರು. ೧೯೦. 'ಹಂಸೆಯೊಡನೆ ಏಕಾಂತ ಬೆಳೆಸಿ ಯಾಕೆ ಬಳಲುವೆ ದಮಯಂತಿ ?' ಎನ್ನಲು, 'ಇನಿಯರ ಬಯಕೆಯಿಂದ ವ್ಯಾಕುಲವಾಗದೆ ಇರುವುದೆ ?' ಎಂದು ತರುಣಿ ಮೈಮರೆತಿದ್ದಳು. ೧೯೧. ತಾವರೆನೂಲಿನ ಹೆದೆ, ಎಳೆಕಬ್ಬಿನ ಬಿಲ್ಲು, ಹೂವಿನ ಬಾಣ, ಮೃದುವಾದ ಗಾಳಿ, ಮಾವು, ಗಿಳಿಗಳ ಗುಂಪು, ತುಂಬಿ, ಕೋಗಿಲೆಮರಿಗಳು, ಚಂದ್ರನ ಹರ್ಷೋತ್ಸಾಹಗಳನ್ನು ಮನ್ಮಥನು ಭಾವಿಸಿದ್ದೇ (ಆದರೆ) ತಾನು ಮೂರು ಲೋಕಗಳನ್ನೂ ಜಯಿಸಲು ಶಕ್ತನೆಂಬ ಬಲವಾದ ಮಾತುಗಳು ಇಂದು ಈಕೆಯ (ವಿಷಯದಲ್ಲಿ) ಪರೀಕ್ಷೆಗೆ ಬಂದಂತಾದುವು. ೧೯೨. ಹಾಸಿರುವ ಅಶೋಕೆಯ ಚಿಗುರು, ಹೂಗಳ ನೀರನ್ನು ಚಿಮುಕಿಸುವ ತಾವರೆಯ ಎಲೆ, ಬೀಸುತ್ತಿರುವ ಮೃದುವಾದ ಗಾಳಿ, ತಂಪಾದ ಶ್ರೀಗಂಧದ ಲೇಪನ, ಪ್ರಕಾಶಮಾನವಾದ ನೀರಿನ ತುಂತುರನ್ನು

ಸೂಸುವ ಯಂತ್ರವುಜ್ಜ್ವಳಿಪ ಮಲ್ಲಿಗೆಮಂಟಪಮಚ್ಛ ಪುಷ್ಕರಾ
[ವಾಸಮಿವೆಲ್ಲವೇಂ] ಸರಿಸಲಾರ್ಪುವೆ ಕಾಂತೆಯ ದೇಹದಾಹಮಂ ೧೯೨

ಇಂತತಿರೇಕವಾದ ನೃಪಚಿಂತೆಯಿನಂಗನೆ ನೋಡಿ ನೋಡಿ ದಿ
ಗ್ಭ್ರಾಂತಿಯನೊಂದಿ ಮೇಳದವರೊಳ್ ನುಡಿಯಿಲ್ಲದೆ ಕಾಮತಾಪವ
ತ್ಯಂತವಗುರ್ಬಿಸಲ್ ಬೆದಱಿ ಮೆಯ್ಮಱೆಯುತ್ತಱಿಯುತ್ತ ಚಿತ್ತವಿ
ಭ್ರಾಂತಿಯನೊಂದಿರಲ್ ಕೆಳದಿಯರ್ ನೆಗೞ್ದರ್ ಶಿಶಿರೋಪಚಾರಮಂ ೧೯೩

ಇಂದುಶಿಲಾತಳಂ ಕುಳಿರ್ವ ಕಟ್ಟುಮವಾದ ಲತಾಂತಗೇಹದಿಂ
ಚಂದನಪಂಕದಿಂ ಒಱಿದು ಕಪ್ಪುರದಣ್ಕೆಯ ರಂಗವಲ್ಲಿಯಿಂ
ದಂದವೆನಲ್ ಪುದುಂಗೊಳಿಸಿ ಕೆಂದಳಿರ್ದೊಂಗಲ ತೋರಣಂಗಳಿಂ
ಚಂದವೆನಿಪ್ಪ ಸೆಜ್ಜೆವನೆ ಮಾಟ್ಕುಮೆ ಕಾಂತೆಗೆ ತಾಪಶಾಂತಿಯಂ ೧೯೪

ರಗಳೆ ‖ ಇಂತು ಕಾಂತೆಯ ಕಾಮತಾಪಮಚ್ಚರಿಯಾಗೆ
ಕಂತುವಿನ ಬಾಣವಾಕೆಗೆ ಪದಿರ್ಮಡಿಯಾಗೆ

ಕೆಳದಿಯರ್ ಪಾಸುವೆಳೆಮಾವಿನ ತಳಿರ್ಗಳಿಂ
ಪೊಳೆವ ಪೊಂಬಾಳೆಯೆಲೆಯಿಂ ಬೀಸುವೆಲರ್ಗಳಿಂ

ಬಾವನ್ನಮಂ ಕದಡಿ ಸಿಂಪಿಸುವ ಛಳೆಯುದಿಂ
ಸೇವಂತಿಗೆಯ ಮೃಣಾಳದ ಹಾರವಳಯುದಿಂ

ಚೆಲ್ಲುವ ಯಂತ್ರ, ರಾರಾಜಿಸುವ ಮಲ್ಲಿಗೆಯ ಮಂಟಪ, ಸ್ವಚ್ಛವಾದ ಕೊಳದ ನೆಲೆ ಇವುಗಳೆಲ್ಲ ತರುಣಿಯ ಶರೀರದ ತಾಪವನ್ನು ನಿವಾರಿಸಲು ಸಾಧ್ಯವೆ ? ೧೯೩. ಈ ರೀತಿ ಅತಿಶಯವಾದ ಮಹಾರಾಜನ ವ್ಯಾಕುಲದಿಂದ ತರುಣಿ ನೋಡಿ ನೋಡಿ ದಿಕ್ಕುಗೆಟ್ಟವಳಾಗಿ ಕೆಳದಿಯರೊಂದಿಗೆ ಮಾತಾಡದೆ ಕಾಮತಾಪವು ಅತ್ಯಧಿಕವಾಗಿ ಉಕ್ಕೇರಲು ಹೆದರಿ ಮೈಮರೆತು, ಎಚ್ಚತ್ತು ಚಿತ್ತವ್ಯಾಕುಲಿತಳಾಗಿರಲು ಗೆಳತಿಯರು ಶೈತ್ಯೋಪಚಾರವನ್ನು ಮಾಡಿದರು. ೧೯೪. ಚಂದ್ರಕಾಂತಶಿಲೆಯ ತಳದಿಂದಲೂ, ತಂಪಾದ ನೆಲಗಟ್ಟಿನಿಂದಾದ ಪುಷ್ಪವಾಟಿಕೆಯಿಂದಲೂ, ಶ್ರೀಗಂಧದ ಸಾರವನ್ನು ಲೇಪಿಸಿ ಕರ್ಪೂರಮಿಶ್ರಿತವಾದ ರಂಗವಲ್ಲಿಯಿಂದಲೂ, ಸೊಬಗುಂಟುಮಾಡುವಂತೆ ಒಟ್ಟುಗೂಡಿಸಿದ ಕೆಂಪಾದ ಚಿಗುರಿನ ಸಮೂಹದ ತೋರಣಗಳಿಂದಲೂ ಅಂದವಾದ ಶಯ್ಯಾಗೃಹ ತರುಣಿಗೆ ಬೇಗೆಯಿಂದ ನಿವಾರಣೆಯನ್ನು ಮಾಡಲಾಗುತ್ತದೆಯೆ ? ೧೯೫. ರಗಳೆ‖ ಹೀಗೆ ತರುಣಿಯ ಕಾಮತಾಪವು ಆಶ್ಚರ್ಯವುಂಟುಮಾಡಲು, ಮನ್ಮಥನ ಬಾಣವು ಆಕೆಗೆ ಪತ್ತು ಮಡಿಯಾಗಲು, ಗೆಳತಿಯರು ಹಾಸುವ ಎಳೆಮಾವಿನ ಚಿಗುರುಗಳಿಂದಲೂ, ಹೊಳೆಯುವ ಹೊಂಬಾಳೆಯ ಎಲೆಯಿಂದ ಬೀಸುವ ಗಾಳಿಗಳಿಂದಲೂ, ಗಂಧವನ್ನು ಕದಡಿ ಚಿಮುಕಿಸುವುದರಿಂದಲೂ, ಸೇವಂತಿಗೆಯ ಒಳನೂಲಿನ ಗುಂಡಗಿರುವ ಹಾರದಿಂದಲೂ,

ಕುಳಿರ್ವ ಪುಗಮುಗಿಪ ಪನ್ನೀರ ಪರಿಕಾಲ್ಗಳಿಂ
ಹೊಳೆವ ಶಶಿಕಾಂತದ ಗಳಂತಿಕೆಯ ಸಾಲ್ಗಳಿಂ

ಸುತ್ತಲುಂ ಪಸರಿಸಿದ ಕತ್ತುರಿಯ ಧೂಳಿಯಿಂ
ಕತ್ತಲಿಸುವಂತು ಮಾಡಿದ ಲತೆಯ ಶಾಲೆಯಿಂ

ತಾವರೆಯ ನೂಲ ಸೀರೆಗಳ ಮೇಲ್ಕಟ್ಟನಿಂ
ನೇವರಿಸಿ ಬಿಗಿದ ಲಾಮಚದ ಕೇರ್ಗಟ್ಟನಿಂ

ಅಲಿಗೋಡುವ ಶೀತಜಲದ ಸಿಂಪಣಗಳಿಂ
ಮೇಲೆ ಸೂಸುವ ತುಷಾರವನಂಬುವಳೆಗಳಿಂ

ಕೌಮುದಿಯೊಳೋಲಾಡಿಸುವ ವಿಳಾಸಿನಿಯರಿಂ
ತಾಮರಸದೆಸಳನುೞಿ ಸುರಿವ ಕಾಮಿನಿಯರಿಂ

ವಿರಹತಾಪಂ ಪೆರ್ಚಿ ಮೂರ್ಚೆ ತಲೆದೋಱುತಿರೆ
ನಿರವಧಿಯ ಕಾಮಬಾಣಾಗ್ನಿ ಕೈಮಿಾಱುತಿರೆ

ಪೂಗಳೊತ್ತೊತ್ತೆಯಿಂ ತನು ಕಂದಿ ಕುಂದುತಿರೆ
ಪೂಗಣೆಯ ಬಾಧೆಯಿಂ ಧೈರ್ಯಮುೞಿ ನಂದುತಿರೆ

ಚಂದನದ್ರವವ ತೆಗಳಿಗೆ ಮೆಯ್ಗೆ ಬಟಿಯುತಿರೆ
ಕಂದರ್ಪನೈದಂಬು ಪಲವಾಗಿಯುಲೆಯುತಿರೆ

ಕೊರೆಯುವ ಘಮಘಮಿಸುವ ಪನ್ನೀರ ಕಾಲುವೆಗಳಿಂದಲೂ, ಪ್ರಕಾಶಿಸುವ ಚಂದ್ರಕಾಂತ ಶಿಲೆಯ ಧಾರಾಪಾತ್ರೆಯ ಸಾಲುಗಳಿಂದಲೂ, ಸುತ್ತಲೂ ಹಬ್ಬಿದ ಕಸ್ತೂರಿಯ ಪುಡಿಯಿಂದಲೂ, ಮಬ್ಬು ಕವಿಯುವಂತೆ ಮಾಡಿದ ಎಲೆವನೆಯಿಂದಲೂ, ತಾವರೆಯ ನೂಲಿನ ಬಟ್ಟೆಗಳ ಮೇಲ್ಕಟ್ಟಿನಿಂದಲೂ, ನೇರ್ಪಡಿಸಿ ಬಿಗಿದ ಲಾಮಂಚದ ಗೋಡೆಗಳಿಂದಲೂ, ಹಿಮಕಣದಂತೆ ಶೀತವಾದ ತಣ್ಣೀರಿನ ಚಿಮುಕಿಸುವಿಕೆಯಿಂದಲೂ, ಮೇಲೆ ಚೆಲ್ಲುವ ಹಿಮಬಿಂದುವಿನ ಸೀರ್ಮಳೆಗಳಿಂದಲೂ, ಬೆಳುದಿಂಗಳಿನಲ್ಲಿ ಆಡ್ಡಾಡುವ ಸ್ತ್ರೀಸಮೂಹದಿಂದಲೂ, ತಾವರೆಯದಳವನ್ನು ವಿಶೇಷವಾಗಿ ಸುರಿಯುವ ಕಾಮಿನಿಯರಿಂದಲೂ. ವಿರಹಾಗ್ನಿ ಹೆಚ್ಚಿ ಮೂರ್ಛೆ ತಲೆದೋರುತ್ತಿರಲು, ಎಲ್ಲೆಯಿಲ್ಲದ ಮನ್ಮಥನ ಬಾಣಾಗ್ನಿ ಮೇರೆ ಮೀರುತ್ತಿರಲು, ಹೂವುಗಳ ರಾಶಿಯಿಂದ ಶರೀರ ಕಂದಿ ಕೃಶವಾಗುತ್ತಿರಲು, ಪುಷ್ಪಬಾಣದ ಯಾತನೆಯಿಂದ ಧೈರ್ಯವು ವಿಶೇಷವಾಗಿ ಬಾಡುತ್ತಿರಲು, ಗಂಧದ ದ್ರವವನ್ನು ಶರೀರದ ರೋಮಗಳಿಗೆ ಲೇಪಿಸುತ್ತಿರಲು, ಮನ್ಮಥನ ಪಂಚಬಾಣಗಳು ಹಲವುಮಡಿ.

ಸುೞಿದರಂ ನಳನೆಂದು ನೋಡಿ ಹಂಬಲಿಸುವಳು
ನೆೞಲ ಕಂಡಡೆ ನಳನ ನೆನೆವುತಾಗುಳಿಸುವಳು

ಲಾಮಂಚದ ಕಂದಲಂ ನಳದ(?)ವೆಂದಪ್ಪುವಳು
ಭೂಮಿನಡ್ವಳ ನಳಸಮೇತವೆಂದಪ್ಪುವಳು(?)

ಬೆಳುದಿಂಗಳಂ ಕಂಡು ಕಂಗಳಂ ಮುಚ್ಚುವಳು
ಸುೞಿವ ತೆಂಕಣಗಾಳಿಗಂಜಿ ಕಡು ಬೆಚ್ಚುವಳು

ಮಱಿಗೋಗಿಲೆಯ ದನಿಗೆ ಕಂಪಿಸುತ ಬೞಲುವಳು
ಪಱಮೆಗಳ ಗಾವರಕೆ ಸುಯ್ದು ಸುಯ್ದುೞಲುವಳು

ನೀವಿರ್ದು ಫಲವಾವುದೆಂಬಳಾ ಸಖಿಯರಂ
ಭಾವಭವನಲೆಗೆ ಸೈರಿಸದಿಂದುಮುಖಿಯರಂ ೧೯೫

ಮದನನ ಬಾಣದಿಂದನಳನಾಗಿ ನಳಂ ಮಿಗೆ ಕಾಡುತಿರ್ದಪಂ
ಸುದತಿಯನಿಂತಿದಚ್ಚರಿ ನಳಂ ನಿನಗಿಂದನಳಂ ದಿಟಕ್ಕೆನಲ್
ಮದನದವಾಗ್ನಿಯೊಳ್ ತನುವನಾಗಳೆ ನೀಗುವಳೆಂದು ಪರ್ಚಿ ಪೇ
ೞದೆ ಸಖಿಯರ್ ಸಮಂತು ದಮಯಂತಿಗೆ ಮಾೞ್ಪರನೇಕ ಶೈತ್ಯಮಂ ೧೯೬

ನಾರಿಯನೆಚ್ಚನಾದೊಡಲರಂಬು ಮುರುಂಟುಗುಮೆಂದು ಮನ್ಮಥಂ
ದೂರದೊಳಿರ್ಪನೋ ವಿಧು ಮರಾಳ ಮಯೂರ ಶುಕಾಳಿ ಭದ್ರಕಾ

ಯಾಗಿ ಪೀಡಿಸುತ್ತಿರಲು, ಸುಳಿದವರನ್ನು ನಳನೆಂದು ನೋಡಿ ಮರುಗುವಳು, ನೆರಳನ್ನು ಕಂಡರೆ ನಳನನ್ನು ನೆನೆಯುತ್ತ ಆಕಳಿಸುವಳು ; ಲಾಮಂಚದ ಗಡ್ಡೆಯನ್ನು ನಳನೆಂದು ತಬ್ಬಿಕೊಳ್ಳುವಳು....................(?) ಬೆಳುದಿಂಗಳನ್ನು ನೋಡಿ ಕಣ್ಣುಗಳನ್ನು ಮುಚ್ಚುವಳು, ಬೀಸುವ ತೆಂಕಣಗಾಳಿಗೆ ಬೆದರಿ ವಿಶೇಷವಾಗಿ ಬೆಚ್ಚುವಳು, ಕೋಗಿಲೆಯ ಮರಿಯ ಧ್ವನಿಗೆ ಕಂಪಿಸುತ್ತ ಬಳಲುವಳು, ದುಂಬಿಗಳ ಝೇಂಕಾರಕ್ಕೆ ನಿಟ್ಟುಸಿರು ಬಿಟ್ಟು ದುಃಖಿಸುವಳು, ಮನ್ಮಥನ ಕಾಟವನ್ನು ಸಹಿಸದೆ ಚಂದ್ರಮುಖಿಯರಾದ ಸಖಿಯರನ್ನು ನೀವಿದ್ದು ಫಲವೇನು ಎನ್ನುವಳು. ೧೯೬. ಮನ್ಮಥನ ಬಾಣದಿಂದ ನಳನು ಅನಳನಾಗಿ (ಎಂದರೆ, ಬೆಂಕಿಯಾಗಿ) ಹೆಂಗಸನ್ನು ವಿಶೇಷವಾಗಿ ಕಾಡುತ್ತಿರುವನು. ಇದು ಆಶ್ಚರ್ಯವೇ ಸರಿ ! ನಳನು ನಿನಗೆ ನಿಜವಾಗಿಯೂ ಇಂದು ಅನಳನಾಗಿರುವನು ಎನ್ನಲು, ಮನ್ಮಥನ ದಾವಾಗ್ನಿಯಲ್ಲಿ ಶರೀರವನ್ನು ಕೂಡಲೆ ನೀಗುವಳು ಎಂದು ತಮ್ಮ ತಮ್ಮಲ್ಲಿಯೇ ಮಾತಾಡಿಕೊಂಡು ಸಖಿಯರು (ಆಕೆಗೆ) ಹೇಳದೆ ದಮಯಂತಿಗೆ ಅನೇಕ ಶೈತ್ಯೋಪಚಾರಗಳನ್ನು ಚೆನ್ನಾಗಿ ಮಾಡುವರು. ೧೯೭. ಹೆಂಗಸಿಗೆ (ದಮಯಂತಿಗೆ) ಗುರಿಯಿಟ್ಟು ಹೊಡೆಯಲು ಪುಷ್ಪಬಾಣವು ಮುದುಡಿಕೊಳ್ಳುವುದೆಂದು ಮನ್ಮಥನು ದೂರದಲ್ಲಿಯೇ ಇರುವನೋ ಏನೋ ! ಚಂದ್ರ, ಹಂಸ, ನವಿಲು, ಗಿಳಿಗಳು, ಮಂಗಳಪ್ರದವಾದ ಸರೋ

ಸಾರವಪಾಂತರಕ್ಕೆ ಬಿಱುತೋಡಿದವಾಳಿಯರಾಪ್ತಭಕ್ತಿಯಿಂ
ದಾರುಣ ತಾಪಮಂ ಬಗೆಯರೇಂ ಪಿರಿದೋ ಸತಿಗಂಗಜಾನಳಂ ೧೯೭

ನಳನೃಪನಲ್ಲದನ್ಯ ಪುರುಷರ್ ಪಿತರೆಂಬವೊಲಾಕೆ ಮೆಯ್ಗುಡಳ್
ಮಳಯಸಮೀರಣಂಗೆ ಶಶಿಯಂ ಮಱೆದೀಕ್ಷಿಸಲಟ್ಟುವಂಗಜಂ
ಗೊಳಗುಗಿದಳ್ ನಿತಾಂತಮತಿಮೌನದೊಳಿರ್ಪಳೆನುತ್ತ ಭೀತಿಯಿಂ
ಕೆಳದಿಯರೊರ್ವ[ರೊರ್ವ]ರೊಳಗುರ್ವಿಸಿ ಚಿಂತಿಸುವರ್ ನಿರಂತರಂ ೧೯೮

ನಳನಳಿಸುವ ಕಂದಳಿರೆನೆ
ನಳನಳಿಸುವ ಪೂತಲತೆಗಳೆನೆ ಸಖಿಯರ್ ಕೋ
ಮಳೆ ಬೆಚ್ಚುತೆರ್ದು ಪೆಂಪಿನ
ನಳನೆಲ್ಲಿದನೆಂದು ನೋಟ್ಪಳೆಲ್ಲಾ ದೆಸೆಯಂ ೧೯೯

ಮಳಯಜಪಂಕಂ ಕೊಗ್ಗಿಯ
ಗುಳುವೆನೆ ಘನಸಾರರೇಣು ಪುದಿದಿಕ್ಕಿದ ನು
ಣ್ಮಳಲೆನೆ ತಾಪಂ ಕಡುವೆ
ಗ್ಗಳಮಾದುದು ಭಾವಿಸಲ್ಕೆ ಭೀಮಾತ್ಮಜೆಯಾ ೨೦೦

ಪೂಗಣೆಯುರ್ಚೆ ನೋವ ದಮಯಂತಿಯನೀಕ್ಷಿಸಲಾಱದೆಲ್ಲರುಂ
ಕೋಗಿಲೆ ಕಾಗೆ ಕರ್ಚೆ ದನಿಗುಂದುಗೆ ಚಂದ್ರಮನಂ ವಿಧುಂತುದಂ

ವರ, ವನಗಳ ಮಧ್ಯಕ್ಕೆ ಹೆದರಿ ಓಡಿದುವು. ಸೇವಕಿಯರು ಆಪ್ತಭಕ್ತಿಯಿಂದ ತೀಕ್ಷ್ಣವಾದ ತಾಪವನ್ನು ಗ್ರಹಿಸಲಾರರು. ಮನ್ಮಥಾಗ್ನಿಯು ಹೆಂಗಸಿಗೆ ಎಷ್ಟು ಹಿರಿದಾದುದೋ ! ೧೯೮. ನಳಮಹಾರಾಜನನ್ನು ಹೊರತು ಇತರ ಗಂಡಸರು (ತನ್ನ) ತಂದೆಯೋ ಎಂಬಂತೆ ಆಕೆ ಮಲಯಮಾರುತನಿಗೂ ಮೈಯೊಡ್ಡುವುದಿಲ್ಲ ; ಮರೆತಾದರೂ ನೋಡಲೆಂದು ಚಂದ್ರನನ್ನು ಕಳುಹಿಸುವ ಮನ್ಮಥನಿಗೆ ಒಳಗಿಂದೊಳಗೇ ಅಳುಕುವಳು ; ಸರ್ವದಾ ಗಾಢ ಮೌನದಿಂದ ಇರುವಳು ಎನ್ನುತ್ತ ಭಯದಿಂದ ಗೆಳತಿಯರು ತಮ್ಮ ತಮ್ಮಲ್ಲಿಯೇ ಸರ್ವದಾ ಅತ್ಯಧಿಕವಾಗಿ ಆಲೋಚಿಸುವರು. ೧೯೯. ಸಖಿಯರು ನಳನಳಿಸುವ ಕಂದಳಿರೆನ್ನಲು, ನಳನಳಿಸುವ ಹೂಬಿಟ್ಟ ಬಳ್ಳಿಗಳೆನ್ನಲು, ಕೋಮಳೆ ಹೆದರುತ್ತ ಎದ್ದು ಕೀರ್ತಿಶಾಲಿಯಾದ ನಳನು ಎಲ್ಲಿರುವನೆಂದು ಎಲ್ಲಾ ದಿಕ್ಕುಗಳನ್ನು ನೋಡುವಳು. ೨೦೦. ಗಂಧದ ಕೆಸರು ಹೊಲಸಿನ ಮುದ್ದೆ (?) ಯೆಂಬಂತೆಯೂ, ಕರ್ಪೂರದ ರೇಕುಗಳು ಹುರಿದಿಟ್ಟ ನುಣುಪಾದ ಮಳಲೆಂಬಂತೆಯೂ, ಭಾವಿಸಿನೋಡಲು ಭೀಮರಾಜನ ಮಗಳಾದ ದಮಯಂತಿಗೆ (ಮನ್ಮಥನ) ತಾಪವು ಅತ್ಯಧಿಕವಾಯಿತು. ೨೦೧. ಪುಷ್ಪಬಾಣಗಳು ನಾಟಿ ನೋಯುವ ದಮಯಂತಿಯನ್ನು ನೋಡಲಾರದೆ ಆಕೆಯ ಆಪ್ತಸಖಿಯರೆಲ್ಲರೂ

ನೀಗುಗೆ ಮಂದಮಾರುತನನೀಗಳೆ ಪೀರ್ಗುಗೆ ಭೋಗಿಗಳ್ ಕರಂ
ಬೇಗೆಯನೆಯ್ದುಗಾವುವನಮೆಂದುಜಿ ಬೇಸಜುವರ್ ನಿಜಾಳಿಯರ್ ೨೦೧

ವ|| ಅದಲ್ಲದೆಯುಂ

ಏಕೆಲೆ ಚಂದ್ರ ನಿನ್ನ ಪೆಸರೆನ್ನ ಮೊಗಂ ನಿಜಕಾಂತೆ ಕೈರವ
ಶ್ರೀ ಕೆಳೆಯೆನ್ನ ಕಣ್ಮಲರ್ಗೆ ನೀಂ ಕಿಸುಗಣ್ಣ ಕನಲ್ವಕಾರಣಂ
ಕೋಕನದಂಗಳಂ ಚರಣದಿಂ ಸೆಜೆಗೆಯ್ದನಿದಕ್ಕೆ ಕೂರ್ತ್ಪ ಮ
ದ್ವ್ಯಾಕುಳ ಚಿತ್ತಮುಂ ಸಸಿನಗೆಯ್ಕೆ ಗುಣಪ್ರಕರಕ್ಕೆ ತಕ್ಕುದೇ ೨೦೨

ವ|| ಎಂಬುದಂ ಸಖಿಯರ್

ನಯಮಿಲ್ಲದರೊಳ್ ನಯಮಂ
ಬಯಸಲ್ಕೇಂ ಬಪ್ಪದುಂಟೆ ರಜನೀನಾಥಂ
ಕ್ಷಯರೋಗಿ ನಿನಗೆ ತನುತು
ಷ್ಟಿಯನೀಯಲ್ ಬಲ್ಲರಿಂತುವೇಟ್ಪುದನುಚಿತಂ ೨೦೩

ಒಡಹುಟ್ಟಿದಳಾಲಯಮುಂ
ಕಿಡಿಸುವವಂ ಮಿತ್ರನಧಿಕ ಸಂಪದಮಂ ಕಂ
ಡೊಡಲಿಂ ಕ್ಷಯಮೆಯ್ದುವವಂ
ಜಡದೇಹಂ ನಿನಗೆ ಹಿತಮನಾಚರಿಸುವನೇ ೨೦೪

ಕಾಗೆಯು ಕಚ್ಚಿ ಕೋಗಿಲೆಯ ಧ್ವನಿ ಕುಗ್ಗಲಿ, ರಾಹು ಕೇತುಗಳು ಚಂದ್ರನನ್ನು ನುಂಗಿ ಹಾಕಲಿ, ಹಾವುಗಳು ಮಂದಮಾರುತವನ್ನು ಈಗಲೆ ಹೀರಲಿ, ಮಾವಿನಮರಗಳು ಬೆಂಕಿಯ ಪಾಲಾಗಲಿ ಎಂದು ತುಂಬ ಬೇಸರಗೊಂಡರು. ವ|| ಅಷ್ಟೇ ಅಲ್ಲದೆ, ೨೦೨. ಎಲೈ ಚಂದ್ರನೆ ! ನನ್ನ ಮುಖಕ್ಕೆ ನಿನ್ನ ಹೆಸರಾದರೂ ಏಕೆ ? ಎಲೈ, ನೈದಿಲೆಯೆಂಬ ಹೆಣ್ಣೆ ! ನನ್ನ ಕಣ್ಣೆಂಬ ಹೂವುಗಳಿಗೆ ನೀನು ಕೆಂಗಣ್ಣಿನಿಂದ ಕನಲುವ ಕಾರಣದಿಂದ ನಿನ್ನ ಸ್ನೇಹ ವಾದರೂ ಏಕೆ ? ತಾವರೆಗಳನ್ನು (ನನ್ನ) ಕಾಲುಗಳಿಂದ ಸೆರೆಹಿಡಿದಿರುವೆನೇಕೆ ? ಇವುಗಳಿ ಗೊಲಿದು ತಳಮಳಗೊಂಡ ನನ್ನ ಮನಸ್ಸನ್ನು ಸರಿಪಡಿಸಲು (ಅವುಗಳ) ಗುಣರಾಶಿಗೆ ಸಾಧ್ಯವಾದೀತೆ ? (ಸ್ತ್ರೀಸೌಂದರ್ಯಕ್ಕೆ ಸಾದೃಶ್ಯಗಳಾಗಿರುವ ಚಂದ್ರ, ಕನ್ನೈದಿಲೆ ಮತ್ತು ಕೆಂದಾವರೆಗಳಿಂದ ಆಕೆಯ ಸಂಕಟವು ಪರಿಹಾರವಾಗದೆಂದು ಮುಖ್ಯ ತಾತ್ಪರ್ಯ) ವ|| ಹೀಗೆನ್ನಲು. (ಆಕೆಯ) ಗೆಳತಿಯರು ೨೦೩. ನಯವಿಲ್ಲದವರಲ್ಲಿ ನಯವನ್ನು ಬಯ ಸಲು ಬರುವುದುಂಟೆ ? ಇರುಳೊಡೆಯನಾದ ಚಂದ್ರನು ಕ್ಷಯರೋಗಿ. (ಇಂಥವರು) ನಿನಗೆ ಶರೀರಪುಷ್ಟಿಯನ್ನು ಕೊಡಬಲ್ಲರೆ ? ಹೀಗೆ ಹೇಳುವುದು ಅನುಚಿತವೇ ಸರಿ. ೨೦೪. ಒಡಹುಟ್ಟಿದವಳಿಂದ ಲಕ್ಷ್ಮಿಯ ನೆಲೆವನೆಯನ್ನು (ತಾವರೆಯನ್ನು) ಹಾಳುಮಾಡು ವವನು ಸ್ನೇಹಿತನೆ ? ಅಪಾರವಾದ ಸಂಪತ್ತನ್ನು ಕಂಡು ಶರೀರ ಕುಂದುವ ಅವನು

ವಿಷದೊಡಹುಟ್ಟಿದಂಗೆ ಸತತಂ ಕ್ಷಯರೋಗಿಗೆ ಪಾತಕಂಗೆ ಮಾ
ನಸದ ಕಳಂಕಮ[ನು]ಳ್ಳ ಕುಟಿಳಂಗೆ ಜಗಂ ನಗಲಬ್ಜನಾಗಿಯುಂ
ಪೆಸರೆಸೆವಬ್ಜಮಂ ಬಟಲಿಪಂಗೆ ಸುಧಾಕರನಾಮಮಮಂ ವಿಚಾ
ರಿಸದೆ ವಿಧಾತ್ರನಿಂತು ಕುಡಲಕ್ಕುಮೆ ರಾಜಸಗರ್ವದೇಟ್ಗೆಯಂ ೨೦೫

ವನಜಜನಮವಾಸೆಯನನು
ದಿನವಿರಿಸದದೇಕೆ ಹುಣ್ಣಮೆಯನೆಸಗಿದನೆಂ
ದನುತಾಪದಿಂ ಸರೋಜಾ
ನನೆ ಭೀಮತನೂಜೆ ಇಂದುವಂ ನಿಂದಿಸುವಳ್ ೨೦೬

ನುಂಗದೆ ರಾಹು ಹೇಸಿಯುಗುಟಿಟ್ಟೆಂಜಲನತ್ರಿಯ ಕಣ್ಣಹಕ್ಕನೇ
ಣಂ ಗತಿಗೆಟ್ಟ ಪೆರ್ಮೊಲನನಾರತವಾಡುವ ಕಾಡನಿಂದುವೆಂ
ದಂಗನೆಯೇಕೆ ಬಣ್ಣಿಸುವೆ ನಿರ್ದಯನಂ ಬಿಡು ನಿನ್ನ ಪುಣ್ಯದಿಂ
ದಂಗಜಸನ್ನಿಭಂ ನಳನೃಪಂ ದಯುಗೆಯ್ವೊಡಿದೊಂದು ಲೆಕ್ಕವೇ ೨೦೭

ಸುರರಂಜಿ (ಜೆ ?) ಕೋಪದಿಂದಂ
ಸ್ಮರನಂ ಸುಡುವಂದು ಹರನ ಹಣೆಗಣ್ಣಿನ ಕೇ

ಜಡದೇಹಿ. (ಅವನು) ನಿನಗೆ ಹಿತವನ್ನು ಉಂಟುಮಾಡುವನೆ ? ೨೦೫. ವಿಷದೊಂದಿಗೆ ಹುಟ್ಟಿದವನಿಗೆ, ಸರ್ವದಾ ಕ್ಷಯರೋಗಿಯಾದವನಿಗೆ, ಪಾತಕನಿಗೆ, ಮನಸ್ಸಿನ ಕಳಂಕವನ್ನುಳ್ಳ ಕುಟಿಲನಿಗೆ, ಸ್ವತಃ ಅಬ್ಜನಾಗಿಯೂ ಸಮುದ್ರಮಥನದಲ್ಲಿ (ಹುಟ್ಟಿದವನು) ಅಬ್ಜವೆಂಬ ಹೆಸರುಳ್ಳ ತಾವರೆಯನ್ನು ಬಳಲಿಸುವವನಿಗೆ ಜಗತ್ತೇ ನಗುವಂತೆ, ಬ್ರಹ್ಮನು ವಿಚಾರಿಸದೆ, ಸುಧಾಕರನೆಂಬ ಹೆಸರನ್ನೂ, ರಜೋಗುಣದ ಅಹಂಕಾರದಿಂದ ಅಭಿವೃದ್ಧಿಗೊಳ್ಳುವುದನ್ನೂ ನೀಡಿರುವುದು ಯುಕ್ತವೆನ್ನಿಸುವುದೆ ? (ಚಂದ್ರನಿಗೆ ರಾಜ ಎಂಬ ಹೆಸರಿರುವುದರಿಂದ, ಕವಿ 'ರಾಜಸ' ವೆಂಬ ಶಬ್ದದ ಮೂಲಕ ವಿಡಂಬನೆ ಮಾಡುತ್ತಿರಬಹುದೆಂದು ತೋರುತ್ತದೆ.) ೨೦೬. ಪದ್ಮೋದ್ಭವನಾದ ಬ್ರಹ್ಮನು ಪ್ರತಿನಿತ್ಯವೂ ಅಮಾವಾಸ್ಯೆಯನ್ನು ಸೃಷ್ಟಿಸದೆ ಅದೇಕೆ ಹುಣ್ಣಮೆಯನ್ನು ಮಾಡಿದನೋ ಎಂಬುದಾಗಿ ಪದ್ಮಾನನೆಯೂ ಭೀಮರಾಜನ ಮಗಳೂ ಆದ ದಮಯಂತಿಯು ವಿಷಾದದಿಂದ ಚಂದ್ರನನ್ನು ಹಳಿಯುವಳು. ೨೦೭. ಎಲೈ ತರಳೆಯೆ ! ರಾಹು ನುಂಗಲಾರದೆ ಜುಗುಪ್ಸೆಯಿಂದ ಉಗುಳಿದ ಎಂಜಲನ್ನು, ಅತ್ರಿಯ ಕಣ್ಣಿನ ಪಿಸರನ್ನು, ದಿಕ್ಕುಗೆಟ್ಟ ಜಿಂಕೆ, ದೊಡ್ಡ ಮೊಲಗಳು ಸದಾ ಆಡುವ ಕಾಡನ್ನು ಚಂದ್ರನೆಂಬುದಾಗಿ ಏತಕ್ಕೆ ವರ್ಣಿಸುವೆ ? ಆ ನಿರ್ದಯನನ್ನು ಬಿಡು. ನಿನ್ನ ಪುಣ್ಯದಿಂದ ಮನ್ಮಥಸದೃಶನಾದ ನಳಮಹಾರಾಜನು ಕೃಪೆಯನ್ನು ತೋರಲು ಇದೊಂದು ಲೆಕ್ಕವೇ ? ೨೦೮. ದೇವತೆಗಳು ಭಯಪಡುವಂತೆ ಕೋಪದಿಂದ ಮನ್ಮಥನನ್ನು ಸುಡುವಾಗ ಹರನ ಹಣೆಗಣ್ಣಿನ ಕೆಂಪು ಉರಿ ತಟ್ಟಿ

ಸುರಿ ತಾಗಿ ಭಸ್ಮವಾಗದೆ
ಶರೀರದಿಂದುೞಿದನೀದು ಮದ್ದುಷ್ಕರ್ಮಂ ೨೦೮

ವ|| ಎಂದು ಮತ್ತೆ

ಎಲೆ ಕುಸುಮಾಸ್ತ್ರ ನಿನ್ನ ಪೊಸಮೂಡಿಗೆಗೆನ್ನ ವನಂಗಳುಳ್ಳಲ
ರ್ದಲರ್ಗಳನೀವೆನೆನ್ನ ಜಲಕೇಳಿಯ ಪೊಗೊಳನಂಚೆಯಂ ರಥ
ಕ್ಕಲಸದೆ ಪೂಡುವಂತು ಕೊಡುವೆಂ ಪೊರೆದೆನ್ನ ಶುಕಾಳಿ ನನ್ನ ಬೆಂ
ಬಲವೆನಲಟ್ಟುವೆಂ ಮದನ ಬಲ್ಮುಳಿಸಂ ಬಿಡು ಬೇಡಿಕೊಂಡಪೆಂ ೨೦೯

ಹಾವಿಂಗೆ ಹಾಲೆಱೆದೊಡೆ
ತೀವಿದ ವಿಷವಪ್ಪುದಲ್ಲದಂಗಜನಂ ಸಂ
ಭಾವಿಸಿದೊಡೆ ಕೋಮಳೆಯರ
ಜೀವಕೆ ತಗಟಗೆಯನೀವನೆಂಬುದು ಪುಸಿಯೇ ೨೧೦

ಅಂಗವಿಹೀನನಾಗಿ ಭುವನತ್ರಯಮಂ ಕೊಱಚಾಡುತಿರ್ಪನಿ
ನ್ನಂಗಮದುಳ್ಳೊಡೇನನೆಸಗಂ ಖಳ ಮನ್ಮಥನೆಂದು ಸುಯ್ಕೆ ಸು
ಯ್ಲಿಂ ಗಱಿಸೀದುವಿರ್ದೆಸೆಯ......ಸೋಗೆಯ ಚೆಲ್ವ ಪಾರಿವಾ
ಳಂಗಳ ಬಣ್ಣಿಸಲ್ ನೆಱೆವರಾರ್ ದಮಯಂತಿಯ ದೇಹದಾಹಮಂ ೨೧೧

ಬೂದಿಯಾಗದೆ ಇಂದಿಗೂ ನಳನರೂಪಿನಲ್ಲಿ ಸಶರೀರನಾಗಿ ಉಳಿದಿರುವುದು ನನ್ನ ದುಷ್ಕರ್ಮವೇ ಸರಿ. ವ|| ಎಂಬುದಾಗಿ ನುಡಿದು, ಪುನಃ ೨೦೯. ಎಲೈ ಮನ್ಮಥನೆ ! ನಿನ್ನ ಹೊಸಬತ್ತಳಿಕೆಗೆ ನನ್ನ ವನಗಳಲ್ಲಿ ಅರಳಿದ ಹೂವುಗಳನ್ನು ಕೊಡುವೆನು. ನನ್ನ ಜಲಕ್ರೀಡೆಯ ಹೂಗೊಳದಲ್ಲಿನ ಹಂಸವನ್ನು ಬೇಸರಿಸದೆ ರಥಕ್ಕೆ ಹೂಡುವಂತೆ ಕೊಡುವೆನು. ನಾನು ಸಾಕಿದ ಗಿಳಿಗಳನ್ನು ನಿನಗೆ ಬೆಂಗಾವಲಾಗಿ ಕಳುಹಿಸುವೆನು. ಎಲೈ ಮನ್ಮಥನೆ ! ನಿನ್ನ ಕೋಪವನ್ನು ಬಿಡು, ಬೇಡಿಕೊಳ್ಳುತ್ತೇನೆ. ೨೧೦. ಹಾವಿಗೆ ಹಾಲೆರೆದರೆ ತುಂಬಿದ ವಿಷವಾಗುವುದಲ್ಲದೆ, ಮನ್ಮಥನನ್ನು ಗೌರವಿಸಿದರೆ ಹೆಂಗಸರ ಜೀವಕ್ಕೆ ತಳಮಳವನ್ನು ಉಂಟುಮಾಡುವನೆಂಬುದು ಸುಳ್ಳಾದೀತೆ ? ೨೧೧. ನೀಚನಾದ ಮನ್ಮಥನು ಶರೀರವಿಲ್ಲದೆಯೇ ಮೂರು ಲೋಕಗಳನ್ನೂ ಹೀಯಾಳಿಸುತ್ತಿರುವನು; ಇನ್ನು ಶರೀರವಿದ್ದಲ್ಲಿ ಏನನ್ನು ತಾನೆ ಮಾಡದೆ ಬಿಡನು ಎಂಬುದಾಗಿ ನಿಟ್ಟುಸಿರನ್ನು ಬಿಡಲು, ಆ ಬಿಸಿಯ ಉಸಿರಿನಿಂದ......ನವಿಲಿನ, ಅಂದವಾದ ಪಾರಿವಾಳಪಕ್ಷಿಗಳ ಎರಡೂ ಕಡೆಗಳ ರೆಕ್ಕೆಗಳೂ ಕರಿಕಾದುವು. ದಮಯಂತಿಯ ದೇಹದ ಬೇಗೆಯನ್ನು ಕೊಂಡಾಡಲು ಯಾರು

ಮಾನಿಲ್ಲದಿರಂ ಮಧುವಂ
ತಾನೆಂದುಂ ಬಿಡನದಲ್ಲದೆಲ್ಲರ ಬಗೆಯಿಂ
ನಾನಾ ತೆಱದಿಂ ಪುಟ್ಟುವ
ನೇನೆಂಬುದು ಮದನನಿರವನದು ನಗೆಯಲ್ತೇ ೨೧೨

ಸುಟ್ಟು ಮಗುಟ್ದು ಮೆಯ್ಮಱಗಿ ಶಂಭು ದುರಾತ್ಮನನೊಲ್ದು ಚಿತ್ತದಿಂ
ಹುಟ್ಟಿನಲೇಕೆ ಭಸ್ಮಮಯವಾದವನಂ ಮೊಱಗೆಟ್ಟು ಲಜ್ಜೆಯಂ
ಬಿಟ್ಟವನಂ ಮನಂ ಬೆದಱ ಹೇಸದ ಹೆಂಗೊಲೆಗಾಱನಂ ಕರಂ
ಕೆಟ್ಟಸಮಾಸ್ತ್ರನಂ ಹೃದಯಶಸ್ತ್ರನನೆಂದು ಬಟಲ್ವಳಾವಗಂ ೨೧೩

ನಿನ್ನ ಪತಾಕೆಯಂ ಪಿಡಿಗೆ ಮೀಂಬುಲಿಗಂ ನಿಜನಾಮಮಂ ಮಗು
ಟ್ದಿನ್ನುಮುಮೇಶ್ವರಂ ಸುಡುಗೆ ಪೂಗಣೆಗಳ್ ಕಳಿಹೂಗಳಾಗಿ ಬೀ
ಟ್ಗಿನ್ನಯ ತಾಪದಿಂ ರತಿ ಸಮಸ್ತರ ಚಿತ್ತಮನೆಯ್ದುಗೆಂದು ಚಂ
ಚನ್ನಳಿನಾಕ್ಷಿ ಭೀಮಸುತೆ ಮನ್ಮಥನಂ ಮುಳಿಸಿಂದೆ ನಿಂದಿಪಳ್ ೨೧೪

ವ॥ ಅಂತಿರೆ

ಕರ್ಣಪರಂಪರೆಯಿಂ ಸಂ
ಪೂರ್ಣೇಂದುಪ್ರತಿಮಮುಖಿಯ ಚಿಂತೆಯನರೆಬರ್

ಶಕ್ತರು? ೨೧೨. ಮಾನಿಲ್ಲದೆ; ಇರಲಾರನು, ಮಾದಕ ಪಾನೀಯವನ್ನು ಎಂದಿಗೂ ಬಿಡನು. ಅಷ್ಟೇ ಅಲ್ಲದೆ ಎಲ್ಲರ ಮನಸ್ಸಿನಿಂದಲೂ ನಾನಾ ಪ್ರಕಾರವಾಗಿ ಹುಟ್ಟುವನು. ಮನ್ಮಥನ ಇರುವಿಕೆಯನ್ನು ಏನೆನ್ನುವುದು ? ಅದು ನಾಚಿಕೆಗೇಡಲ್ಲವೆ ? ೨೧೩. ಬೂದಿ ಪಾಲಾದವನನ್ನು, ಅನೀತಿಯಿಂದ ನಾಚಿಕೆಬಿಟ್ಟವನನ್ನು, ಮನಸ್ಸು ಬೆದರಿ ಹೇಸದ ಹೆಂಗೊಲೆಗಾರನನ್ನು, ವಿಶೇಷವಾಗಿ ಕೇಡು ಬಗೆಯುವ ವಿಷಮಾಸ್ತ್ರನೂ, ಹೃದಯ ಶಸ್ತ್ರನೂ ಆದವನನ್ನು, ದುರಾತ್ಮನನ್ನು ಈಶ್ವರನು ಸುಟ್ಟು ಪುನಃ ಮನಸ್ಸು ಕರಗಿ ಮನಸಿಜನಾಗೆಂದು ಏಕೆ ಹೇಳಿದನೋ ಎಂಬುದಾಗಿ ಸರ್ವದಾ ಬಳಲಿದಳು. ೨೧೪. ನಿನ್ನ ಧ್ವಜವನ್ನು (ಮೀನಕೇತನವನ್ನು) ಮೀಂಬುಲಿಗನು (ಬೆಸ್ತರವನು) ಹಿಡಿಯಲಿ, ನಿನ್ನ ಹೆಸರನ್ನು ಈಶ್ವರನು ಪುನಃ ಸುಡಲಿ, ಹೂವಿನ ಬಾಣಗಳು ಬಾಡಿದ ಹೂಗಳಾಗಿ ಬೀಳಲಿ, ನನ್ನ ಸಂಕಟದಿಂದ ರತಿ ಸಮಸ್ತರ ಹೃದಯವನ್ನೂ ಹೊಗಳುವಂತಾಗಲಿ (ಅನ್ಯರ ಪಾಲಾಗಲಿ ?) ಎಂಬುದಾಗಿ ಚಂಚಲವಾದ ತಾವರೆಗಣ್ಣುಳ್ಳ ಭೀಮರಾಜನ ಮಗಳಾದ ದಮಯಂತಿ ಮನ್ಮಥನನ್ನು ಕೋಪದಿಂದ ನಿಂದಿಸುವಳು. ವ॥ ಹಾಗಿರಲು, ೨೧೫. ಪೂರ್ಣಚಂದ್ರಮುಖಿಯ ಚಿಂತೆಯನ್ನು ಕರ್ಣಾಕರ್ಣಿಕೆಯಾಗಿ ವರ್ಣಿಸಲು ಆಕೆಯ

ವರ್ಣಿಸೆ ಕೇಳ್ದಾ ಪಿತನ
ಭೃಂಗಕ್ಕೆಯ್ತರಿಸಲಟ್ಟಿದಂ ಕಂಚುಕಿಯಂ ೨೧೫

ವ॥ ಅಂತಾತಂ ಬಂದು ಕರೆಯಲೊಡಂ

ಮದನಶರಾಗ್ನಿಯಿಂ ಕೊರಗಿದಂಬುಜವಕ್ತ್ರವಲರ್ಗಳೊತ್ತೆ ಕಂ
ದಿದ ತನು ಕಪ್ಪುರಂಬೊರೆದ ಮೆಲ್ಲೆರ್ದೆ ಪಾಸಿದ ಕೆಂದಳಿರ್ಗಳೊಂ
ದಿದ ತುರು......................................ಯಂ
ದದ ದಮಯಂತಿ ತಂದೆ ಕರೆಸಲ್ ನಡೆತಂದಳನಂಗಜಾ(?)ಜ್ಞೆಯಿಂ ೨೧೬

ಪೊಸಬಿಸನಾಳದಾ......................................
............ಪತ್ರವನತೀವ ಹಿಮೋದಕಪೂರ್ಣಕುಂಭಮಂ
ಶಶಿಮುಖಿಯರ್ ಕೆಲರ್ ತಳೆದು ಕೂಡಿ ಬರಲ್ ದಮಯಂತಿ ಬಂದಳೊ
ಲ್ದಸಮಶರಾಗ್ನಿಯಿಂ ಕೊರಗಿ ಮಾತಿನಿತಿಲ್ಲದೆ ತಾತನಾಜ್ಞೆಯಿಂ ೨೧೭

ವ॥ ಅಂತು ಬರ್ಪಾಗಳ್ ಮುಂಗುಡಿಯೊಳ್ ಬಂದ ಸಂಗಡಗಿತ್ತಿಯರಿಂ ತದ್ವೃತ್ತಾಂತಮಂ ಭೂಕಾಂತಂ ಕೇಳ್ವುದುಂ

ಪೂಗೊಳದೊಳೊಂದು ಕಣ್ಗಂ
ಬಾಗಿರ್ದುದು ಪೊನ್ನಹಂಸೆಯುದಜಿಕೊಡನಾಗಳ್
ಪೋಗಿಯದೇನಂ ಕೇಳ್ದಳೊ
ಪೂಗಣೆಯನ ಚೇಷ್ಟೆ ಪಸರಿಸಿತ್ತವಯವದೊಳ್ ೨೧೮

ತಂದೆ ಕೇಳಿ, (ತನ್ನ) ಸಮೀಪಕ್ಕೆ ಕರೆತರುವಂತೆ ಕಂಚುಕಿಯನ್ನು ಕಳುಹಿಸಿಕೊಟ್ಟನು. ವ॥ ಹಾಗೆಯೇ ಆತನು ಬಂದು ಕರೆದೊಡನೆಯೇ, ೨೧೬. ಮನ್ಮಥನ ಬಾಣಾಗ್ನಿಯಿಂದ ಕೃಶವಾದ ಪದ್ಮಾನನ, ಹೂವುಗಳು ಬತ್ತಿ ಬಾಡಿದ ಶರೀರ, ಕರ್ಪೂರವನ್ನು ಲೇಪಿಸಿದ ಮೃದುವಾದ ಎದೆ, ಹಾಸಿದ ಕೆಂಪಾದ ಚಿಗುರುಗಳು.......(ಉಳ್ಳ) ದಮಯಂತಿಯು (ತನ್ನ) ತಂದೆ ಕರೆಸಲು ಮನ್ಮಥೋದ್ಭವನ (?) ಅಪ್ಪಣೆಯ ಮೇರೆಗೆ ನಡೆತಂದಳು. (ಈ ಪದ್ಯವು ಬಹಳ ತ್ರುಟಿತವಾಗಿರುವುದರಿಂದ ಅನುವಾದಿಸಲು ಕ್ಲೇಶಕರವಾಗಿದೆ). ೨೧೭....ಅಧಿಕವಾದ ತಂಪಾದ ನೀರಿನ ಪೂರ್ಣಕುಂಭವನ್ನು ಹಿಡಿದು ಕೆಲವು ಚಂದ್ರಾನನೆಯರು ಒಟ್ಟುಗೂಡಿಬರಲು, ದಮಯಂತಿ ಮನ್ಮಥನ ಬಾಣಾಗ್ನಿಯಿಂದ ಕೊರಗಿ, ಸ್ವಲ್ಪವೂ ಮಾತನಾಡದೆ ತಂದೆಯ ಅಪ್ಪಣೆಯ ಮೇರೆಗೆ ಒಪ್ಪಿ ಬಂದಳು. ವ॥ ಹಾಗೆ ಬರುವಲ್ಲಿ ಮುಂಭಾಗದಲ್ಲಿ ಬಂದ ಗೆಳತಿಯರಿಂದ ಆ ವೃತ್ತಾಂತವನ್ನು ಮಹಾರಾಜನು ಕೇಳಲು, ೨೧೮. ಹೂವಿನ ಕೊಳದಲ್ಲಿ ಒಂದು ಹೊನ್ನ ಹಂಸವು ಕಣ್ಣಿಗೆ ಮನೋಹರವಾಗಿತ್ತು. ಆಗ ಹೋಗಿ ಅದರೊಡನೆ ಏನನ್ನು ಕೇಳಿದಳೊ ? ಅಂಗಾಂಗಗಳಲ್ಲೆಲ್ಲ ಪುಷ್ಪ

ಆದಾನನಿದಾನಜ್ಞರ
ಸಾಧಿಚಿಕಿತ್ಸಾಪ್ರವೀಣರಂ ಬಹಳ ಧನಾ
ಸ್ವಾದಮನುಬಿದಿರ್ದಾಯು
ರ್ವೇದಿಗಳಂ ಕರೆಸಿದಂ ಧರಿತ್ರೀಕಾಂತಂ ೨೧೯

ಸುದತಿಯ ತಾಪಜ್ವರವಾ
ವುದಱಿಂ ಮಾಣ್ಬುದವೆಂನಲ್ ಭೂಪಾಲಕ ಕೇ
ಳಿದು ನಳದ ಕಷಾಯದಿನ
ಲ್ಲದ(?) ತರಿಸೌಷಧಿಯನೇಕೆ ಕಾಲವಿಳಂಬಂ ೨೨೦

ವ॥ ಆದನಱಿದು

ಇದು ಪೆಱತಲ್ತು ಯೌವನಭರಂ ತನಿವೆರ್ಚೆ (ರ್ಚೆ?) ಮನೋಜಚೇಷ್ಟೆಯ
ಲ್ಲದೆ ಭರದಿಂ ಸ್ವಯಂವರವನಾಗಿಸಿದಾಗಳೆ ಮಾಣ್ಬುವೀಕೆಗು
ರ್ವಿದ ಪರಿತಾಪವೆಂದು ಮನದೊಳ್ ಬಗೆದಂದು ವಿದರ್ಭಭೂಭುಜಂ
ಸುದತಿಯನೊಲ್ದು ಬೀೞ್ಕೊಳಿಸಿದಂ ಸಖಿಯರ್ಸಹಿತಂ ವಿಳಾಸದಿಂ ೨೨೧

ವ॥ ಅನಂತರಂ

ತರುಣೀರತ್ನಮನಿಂದ್ಯೆ ಯೌವನಕಳಾಸಂಪನ್ನೆ ಲಾವಣ್ಯಮಂ
ದಿರೆ ನೋಡಲ್ ದಮಯಂತಿಯಾಕೆಗೆ ಮನಸ್ಸಂಪ್ರೀತಿಯಾಗಲ್ ಸ್ವಯಂ

ಬಾಣನಾದ ಮನ್ಮಥನ ಚೇಷ್ಟೆ ಆವರಿಸಿತ್ತು. ೨೧೯. ಭೂಪಾಲನು ರೋಗರುಜಿನಗಳನ್ನು ಕಂಡುಹಿಡಿಯುವವರನ್ನೂ, ಆಧಿವ್ಯಾಧಿಗಳ ಚಿಕಿತ್ಸಾನಿಪುಣರನ್ನೂ, ಅತ್ಯಂತ ಮೆಚ್ಚ ತಗಲುವ ಇತರ ಆಯುರ್ವೇದ ತಜ್ಞರನ್ನೂ ಕರೆಸಿದನು. ೨೨೦. ತರುಣಿಯ ಮದನ ತಾಪಜ್ವರವು ಯಾವುದರಿಂದ ನಿವಾರಿಸಲು ಸಾಧ್ಯವೆನ್ನಲು, 'ಮಹಾರಾಜನೆ ಕೇಳು, ನಳದ (ನಳನೆಂಬುವನಿಂದ) ಕಷಾಯದಿಂದಲ್ಲದೆ ಹೋಗದು. ಆ ಔಷಧಿಯನ್ನು ತರಿಸು. ಏಕೆ ಕಾಲವಿಳಂಬ ಮಾಡುವೆ ?' .(ಎಂದರು). ವ॥ ಅದನ್ನು ತಿಳಿದು, ೨೨೧. ಯೌವನದ ತೀವ್ರತೆಯು ಮಿತಿಮೀರಲು, ಮನ್ಮಥನ ಕೃತ್ಯವಲ್ಲದೆ ಇದು ಬೇರಾವುದೂ ಅಲ್ಲ. ಸ್ವಯಂವರವನ್ನು ಮಾಡಿದೊಡನೆಯೇ ಈಕೆಗೆ ಅಧಿಕವಾದ ಉದ್ರೇಕವು ನಿವಾರಣೆ ಯಾಗುವುದೆಂದು ವಿದರ್ಭದೇಶದ ಮಹಾರಾಜನು ಮನಸ್ಸಿನಲ್ಲಿ ಪರಿಭಾವಿಸಿ, ಅಂದು ಮಗಳ ಮೇಲೆ ವಿಶ್ವಾಸವಿಟ್ಟು (ಆಕೆಯನ್ನು) ಸಖಿಯರೊಂದಿಗೆ ವಿಲಾಸದಿಂದ ಬೀಳ್ಕೊಟ್ಟನು. ವ॥ ಬಳಿಕ, ೨೨೨. ದಮಯಂತಿ ನೋಡಲು ತರುಣೀರತ್ನಳು, ನಿಷ್ಕಳಂಕಳು, ಯೌವನಕಲಾಭರಿತಳು, ಲಾವಣ್ಯಾಶ್ರಯಳು. ಆಕೆಯ ಇಷ್ಟಾರ್ಥವು ನೆರ ವೇರಲು ಸ್ವಯಂವರವನ್ನು ಏರ್ಪಡಿಸಿದೆ. ನನ್ನ ಅಳಿಯಂದಿರಾಗಲು ಅರ್ಹರಾದವರು

ವರವೆಲ್ಲರ್ ನಡೆತಪ್ಪುದೆನ್ನಳಿಯರಾಗಲ್ ತಕ್ಕರೆಂದಟ್ಟಿದಂ
ಧರಣೀಶರ್ಗೆಸೆವೋಲೆಯಂ ಚರರುಮಂ ವೈದರ್ಭಭೂಪಾಲಕಂ ೨೨೨

ವಿನಯದಿನಿಂದು ಭಾನುಕುಲಜರ್ ನಿಜವಿಕ್ರಮಚಕ್ರವರ್ತಿಗಳ್
ಮನಸಿಜಸನ್ನಿಭರ್ ಭುಜಪರಾಕ್ರಮಿಗಳ್ ಸುಕೃತಾತ್ಮರಾವಗಂ
ಧನಿಕರನೇಕನೀತಿವಿದರಾಗಮಕೋವಿದರಿಂಗಿತಜ್ಞರೆಂ
ಬನುಪಮ ಪಾರ್ಥಿವರ್ಗೆ ಬರೆವೋಲೆಯನಟ್ಟಿದನಾ ನೃಪಾಲಕಂ ೨೨೩

ಲಾಳ ವರಾಳ ಸಿಂಹ ಕುರು ಕೋಸಲ ಕೊಂಕಣ ಪೂರ್ವಕಾಮ ನೇ
ಪಾಳ ಕಳಿಂಗ ಸೌಭಗ ಮಹೋದಯ ಮಾಳವ ಗೌಳ ಸಿಂಧು ಪಾಂ
ಚಾಳ ವಿದೇಹದೇಶದಿನ ಚಂದ್ರಕುಲೋದ್ಭವರಾದಿಯಾದ ಭೂ
ಪಾಳಚಯಕ್ಕೆ ಪತ್ರಿಕೆಯನಟ್ಟಿದನೊಪ್ಪುವ ಭೀಮಭೂಭುಜಂ ೨೨೪

ಮಳಯ ಮಹೇಂದ್ರ ವಿಂಧ್ಯ ಮರುಗಜ್ಜಣ ಗುರ್ಜರ ಕಾಮಕೋಟಿ ಕಾ
ಕಳಿ ಮಗಧಾಂಧ್ರ ಮಂಡವಿ ಮತಂಗ ವರಾಟ ಮಹಾಂಗ ವಂಗ ನಿ
ರ್ಮಳ ನಿಷಧಪ್ರದೇಶದ ಮಹೀಭುಜರಂ ಬರವೇಳ್ದು ಪತ್ರಿಕಾ
ವಳಿಗಳನಟ್ಟಿದಂ ವಿನಯದಿಂ ಮನವೊಲ್ದು ವಿದರ್ಭವಲ್ಲಭಂ ೨೨೫

ಹೊರಟು ಬರತಕ್ಕದೆಂದು ವೈದರ್ಭರಾಜನು (ಇತರ) ಮಹಾರಾಜರಿಗೆ ಕಂಡಂತೆಯೇ ಪತ್ರವನ್ನೂ ಸೇವಕರನ್ನೂ ಕಳುಹಿಸಿಕೊಟ್ಟನು. ೨೨೩. ಸೂರ್ಯ ಚಂದ್ರವಂಶಜರೂ, ಸಹಜ ಪರಾಕ್ರಮ ಚಕ್ರವರ್ತಿಗಳೂ, ಮನ್ಮಥಸದೃಶರೂ, ಬಾಹುಬಲಿಷ್ಠರೂ, ಪುಣ್ಯವಂತರೂ, ಸರ್ವದಾ ಭಾಗ್ಯಶಾಲಿಗಳೂ, ನಾನಾ ನೀತಿ ತಜ್ಞರೂ, ಶಾಸ್ತ್ರನಿಪುಣರೂ, ಮನೋಗ್ರಾಹಿಗಳೂ ಆದ ಅಸದೃಶ ಕ್ಷತ್ರಿಯರಿಗೆ ಆ ಮಹಾರಾಜನು ವಿನಯದಿಂದ ಪತ್ರವನ್ನು ಬರೆಸಿ ಕಳುಹಿಸಿಕೊಟ್ಟನು. ೨೨೪. ಭೀಮಮಹಾರಾಜನು ಸೂರ್ಯಚಂದ್ರವಂಶಜರಾದ ಲಾಳ, ವರಾಳ, ಸಿಂಹ, ಕುರು, ಕೋಸಲ, ಕೊಂಕಣ, ಪೂರ್ವಕಾಮ (ಕಾಮರೂಪದೇಶ ?) ನೇಪಾಳ, ಕಳಿಂಗ, ಸೌಭಗ, ಮಹೋದಯ, ಮಾಳವ, ಗೌಳ, ಸಿಂಧು, ಪಾಂಚಾಳ, ವಿದೇಹದೇಶಗಳ ರಾಜಸಮೂಹಕ್ಕೆ ಸ್ವಯಂವರ ಪತ್ರಿಕೆಯನ್ನು ಕಳುಹಿಸಿಕೊಟ್ಟನು. ೨೨೫. ವಿದರ್ಭಮಹಾರಾಜನು ಮನಮೆಚ್ಚಿ ವಿನಯಪೂರ್ವಕವಾಗಿ ಮಳಯ, ಮಹೇಂದ್ರ, ವಿಂಧ್ಯ, ಮರುಗಜ್ಜಣ, ಗುರ್ಜರ, ಕಾಮಕೋಟಿ, ಕಾಕಳಿ, ಮಗಧ, ಆಂಧ್ರ, ಮಂಡವಿ, ಮತಂಗ, ವರಾಟ, ಮಹಾಂಗ, ವಂಗ, ನಿರ್ಮಳ ನಿಷಧಪ್ರದೇಶಗಳ ರಾಜರನ್ನು ಬರುವಂತೆ ಹೇಳಿ ಸ್ವಯಂವರಪತ್ರಿಕೆಗಳನ್ನು ಕಳುಹಿಸಿಕೊಟ್ಟನು.

ವಿಲಸತ್ಸೌರಾಷ್ಟ್ರ ಸಾಮಾಯತ ಕಳಕಳಕಾಶ್ಮೀರ ಹಮ್ಮೀರ ಸಜ್ಜಾಂ
ಗಲ ಶೋಭಾನರ್ತಮಾಧ್ಯಂದಿನ ಶುಭತರ ಕರ್ಣಾಟ ಕಾಂಭೋಜಿನೀ ಕುಂ
ತಳ ಕೌಶುಂಭಾದಿ ದೇಶಾಧಿಪರನುಪಮ ಸೌರಂಭದಿಂ ಬಪ್ಪುದೆಂದು
ಜ್ವಲಪತ್ರಾನೀಕಮಂ ಚಾರರನನುನಯದಿಂದಟ್ಟಿದಂ ಭೀಮಭೂಪಂ ೨೨೬

ಸೌಲಭ್ಯ ಪಾಂಡ್ಯ ಕೇರಳ
ಚೋಳ ಮಹಾಸಿಂಹಣಾದಿ ಬರ್ಬರ ವರಬಂ
ಗಾಳನೃಪತತಿಗೆ ವಿನಯದಿ
ನೋಲೆಯನೊಲ್ದಟ್ಟಿದಂ ವಿದರ್ಭನೃಪಾಲಂ ೨೨೭

ವಿಮಳಪುರೇಶ್ವರನುರು ವಿ
ಕ್ರಮನಿಧಿ ನಳನೃಪತಿ ಬರ್ಪುದತಿಶೀಘ್ರತೆಯಿಂ
ದಮಯಂತಿಯ ಸ್ವಯಂವರ
ರಮಣೀಯವನೀಕ್ಷಿಸಲ್ ಪತಾಕಿನಿಸಹಿತಂ ೨೨೮

ಅಂತಾ ಲೇಖಾರ್ಥದ ವೃ
ತ್ತಾಂತಮನರಿದೊಲ್ದು ನಳನೃಪಂ ದಮಯಂತೀ
ಕಾಂತಾಸ್ವಯಂವರಂ ತಾ
ನೆಂತಪ್ಪುದೆನುತ್ತ ಪೋಗಲುದ್ಯತನಾದಂ ೨೨೯

೨೨೬. ಶೋಭಾಯಮಾನವಾದ ಸೌರಾಷ್ಟ್ರ, ಸಾಮಾಯತ, ಕಳಕಳ ಕಾಶ್ಮೀರ, ಹಮ್ಮೀರ, ಸಜ್ಜಾಂಗಲ, ಶೋಭಾನರ್ತಂ ಆಧ್ಯಂದಿನ ? (ಶೋಭಾನರ್ತಮಾಧ್ಯಂದಿನ ?), ಶುಭಪ್ರದವಾದ ಕರ್ಣಾಟ, ಕಾಂಭೋಜಿನೀ, ಕುಂತಳ, ಕೌಶುಂಭವೇ ಮೊದಲಾದ ದೇಶಾಧಿಪತಿಗಳನ್ನೂ ಅಸದೃಶವಾದ ಸಂಭ್ರಮದಿಂದ ಬನ್ನಿರೆಂಬುದಾಗಿ ಭೀಮನೃಪಾಲನು ಉಜ್ವಲವಾದ ಪತ್ರಗಳನ್ನೂ ಸೇವಕರನ್ನೂ ಪ್ರೀತಿಯಿಂದ ಕಳುಹಿಸಿಕೊಟ್ಟನು. ೨೨೭. ಸೌಲಭ್ಯ, ಪಾಂಡ್ಯ, ಕೇರಳ, ಚೋಳ, ಮಹಾಸಿಂಹಣ ಮೊದಲಾದ ಬರ್ಬರ ಬಂಗಾಳ ನೃಪಸಮೂಹಕ್ಕೆ ವಿದರ್ಭಮಹಾರಾಜನು ವಿಶ್ವಾಸದಿಂದ ಮೆಚ್ಚಿ ಓಲೆಯನ್ನು ಕಳುಹಿಸಿಕೊಟ್ಟನು. ೨೨೮. ವಿಮಳಪುರಾಧೀಶನೂ ವಿಶೇಷ ವಿಕ್ರಮಸಂಪನ್ನನೂ ಆದ ನಳಮಹಾರಾಜನೆ, ದಮಯಂತಿಯ ಸ್ವಯಂವರಸೌಂದರ್ಯವನ್ನು ನೋಡಲು ಸೇನಾಸಮೇತನಾಗಿ ಅತಿವೇಗವಾಗಿ ಬರತಕ್ಕುದು. ೨೨೯. ಆ ರೀತಿಯಾದ ಬರೆಹದ ಅಭಿಪ್ರಾಯದ ವರ್ತಮಾನವನ್ನು ತಿಳಿದು ಮೆಚ್ಚಿ, ನಳಮಹಾರಾಜನು ದಮಯಂತೀತರುಣಿಯ ಸ್ವಯಂವರವು ತಾನು ಹೇಗಾದೀತು ಎಂಬುದಾಗಿ ಹೊರಡಲು ಅಣಿಯಾದನು.

ಎನಗನುಕೂಲಮಕ್ಕೆ ಗಣನಾಯಕನಾಖುರಥಂ ಮದದ್ವಿಪಾ
ನನನಗಜಾತ್ಮಜಂ ಪರಶುಹಸ್ತನನೇಕವರಪ್ರದಂ ನತಾ
ವನನಮರೇಂದ್ರವಂದ್ಯನಘವೈರಿ ಮನೋಹರಮೂರ್ತಿ ಭಾಳಲೋ
ಚನವರಸೂನು ಭಕ್ತಸುರಧೇನು ವಿನಾಯಕನೊಲ್ದು ಸಂತತಂ ೨೩೦

ಶ್ರೀಮನ್ಮಂಗಲಮೂರ್ತಿ ಶೀಘ್ರವರದಂ ಲಂಬೋದರಂ ನಿತ್ಯದಾ
ನಾಮೋದಂ ಫಣಿಕಂಕಣಂ ದ್ವಿರದವಕ್ತ್ರಂ ಶೂರ್ಪಕರ್ಣಂ ಹರ
ಪ್ರೇಮಂ ಮೂಷಕವಾಹನಂ ಪರಶುಹಸ್ತಂ ವಕ್ರತುಂಡಂ ವರ
ಸ್ತೋಮಂ ಸಿದ್ಧಿವಿನಾಯಕಂ ನಮಗೆ ಮಾಟ್ಕೆಷ್ಟಾರ್ಥಸಂಸಿದ್ಧಿಯಂ ೨೩೧

ರಗಳೆ ॥ ಶ್ರೀಮದಮರೇಂದ್ರಮಂದಿತಚರಣ ಕಮಳ ಜಯ
ಸೋಮಧರ ಹೃದಯಮುದಜನಿತಮುಖವಿಮಳ ಜಯ

ಧವಳ ದೂರ್ವಾಂಕುರಾರ್ಚಿತ ರತ್ನಮಕುಟ ಜಯ
ತವಶರಣದುರಿತಮರ್ದನವಜ್ರಲಕುಟ ಜಯ

ರಕ್ತಚಂದನ ವಿಲೇಪಿತ ತುಂಗಕುಂಭ ಜಯ
ಮುಕ್ತಿಮಂದಿರ ಮಧ್ಯದೃಢಮಣಿಸ್ತಂಭ ಜಯ

೨೩೦. ಗಣಾಧಿಪನೂ, ಮೂಷಕವಾಹನನೂ, ಮದದಾನೆಯ ಮುಖವುಳ್ಳವನೂ, ಪಾರ್ವತೀಪುತ್ರನೂ, ಪರಶು(ಪಾಶ ?)ಧರನೂ, ಅನೇಕ ವರಪ್ರದನೂ, ಆಶ್ರಿತ ಪಾಲಕನೂ, ಅಮರೇಂದ್ರಪೂಜಿತನೂ, ಪಾಪವಿನಾಶಕನೂ, ಸ್ಫುರದ್ರೂಪಿಯೂ, ಈಶ್ವರವರಪುತ್ರನೂ, ಭಕ್ತಕಾಮಧೇನುವೂ ಆದ ವಿನಾಯಕನು ಒಲಿದು ಸರ್ವದಾ ನನಗೆ ನೆರವಾಗಲಿ, ೨೩೧. ಸಂಪದ್ಯುಕ್ತ ಮಂಗಳಮೂರ್ತಿಯೂ, ತೀವ್ರ ವರ ದಾಯಕನೂ, ಲಂಬೋದರನೂ, ನಿತ್ಯದಾನಜಲದಿಂದ ತುಷ್ಟನೂ, ಸರ್ಪಕಂಕಣನೂ, ದ್ವಿದಂತಮುಖನೂ, ಮೊರಗಿವಿಯುಳ್ಳವನೂ, ಈಶ್ವರಪ್ರಿಯಕರನೂ, ಮೂಷಕ ವಾಹನನೂ, ಪರಶು(ಪಾಶ) ಹಸ್ತನೂ, ವಕ್ರತುಂಡನೂ, ವರಸಮೂಹನೂ, ಇಷ್ಟಾರ್ಥ ಫಲಪ್ರದನೂ ಆದ ವಿನಾಯಕನು ನಮಗೆ ವಾಂಛಿತ ಸಾಫಲ್ಯವನ್ನು ಅನುಗ್ರಹಿಸಲಿ. ೨೩೨. ರಗಳೆ ॥ ಶ್ರೀಮದಿಂದ್ರನಿಂದ ಪೂಜಿತವಾದ ಪಾದಕಮಲಕ್ಕೆ ಜಯವಾಗಲಿ. ಈಶ್ವರನ ಹೃದಯಕ್ಕೆ ಸಂತೋಷವನ್ನುಂಟುಮಾಡುವ ಶ್ರೇಷ್ಠ ಮುಖಕ್ಕೆ ಜಯವಾಗಲಿ. ಬಿಳುಪಾದ (ಎಳೆಯದಾದ) ಗರಿಕೆಯಿಂದ ಪೂಜಿಸಲ್ಪಟ್ಟ ರತ್ನಕಿರೀಟಕ್ಕೆ ಜಯವಾಗಲಿ. ನಿನ್ನನ್ನು ಆಶ್ರಯಿಸಿದವರ ಪಾಪವನ್ನು ನಿವಾರಿಸುವ ವಜ್ರದ ಬಡಿಗೆಗೆ ಜಯವಾಗಲಿ, ಕೆಂಪಾದ ಗಂಧವನ್ನು ಸವರಿದ ಉನ್ನತವಾದ ಮಸ್ತಕಕ್ಕೆ ಜಯವಾಗಲಿ, ಮುಕ್ತಿಮಂದಿರದ

ವಿಚಲದ್ವಿಶಾಲ ಕೋಮಲ ಶೂರ್ಪಕರ್ಣ ಜಯ
ಸಚರಾಚರಪ್ರಸವನಯನ ವಿಸ್ತೀರ್ಣ ಜಯ

ಅನವರತ ಮದಗಳಿತ ವರಟಕಮನೀಯ ಜಯ
ವನಜಭವಮುಖ್ಯಸುರನಿಕರ ಸಂಸ್ತುತ್ಯ ಜಯ

ಕುಲಿಶಕರ್ಕಶತುಂಗ ಧವಳೈಕದಂತ ಜಯ
ಲಲಿತಬೃಂಹಿತಚರಿತ ಬಹಳವದನಾಂತ ಜಯ

ವಿಗಳದಮೃತದ್ರೋಣಿಸದೃಶ ಲಂಭೋಷ್ಠ ಜಯ
ಜಗದಭೀಷ್ಟಪ್ರದ ಸುರವ್ರಜಗರಿಷ್ಠ ಜಯ

ಮದಮುದಿತ ಸದಮಳಗಜೇಂದ್ರನಿಭವದನ ಜಯ
ಪದಕಮಳವಿನತಜನಕಲ್ಯಾಣಸದನ ಜಯ

ಪರಶುಸೃಣಿಮೋದಕ ವಿಷಾಣಹಸ್ತಾಗ್ರ ಜಯ
ಕರಚತುಷ್ಟಯನಿತ್ಯವರಫಲಸಮಗ್ರ ಜಯ

ಫಣಿಹಾರ ಫಣಿಕಟಕ ಫಣಿಯಜ್ಞಸೂತ್ರ ಜಯ
ಫಣಿಯೋಗ ಪಟ್ಟೋಧರ ಪ್ರಬಲಗಾತ್ರ ಜಯ

ಮಧ್ಯೆ ಸ್ಥಿರವಾದ ಮಣಿಯ ಕಂಭದಂತಿರುವವನಿಗೆ ಜಯವಾಗಲಿ. ಚಲಿಸುತ್ತಿರುವ ವಿಶಾಲವಾದ ಕೋಮಲವಾದ ಮೊರಕಿವಿಗಳಿಗೆ ಜಯವಾಗಲಿ. ಚೇತನಾಚೇತನಗಳ ಉದ್ಭವಕಾರಣವಾದ ವಿಸ್ತಾರವಾದ ಕಣ್ಣುಗಳಿಗೆ ಜಯವಾಗಲಿ. ಸರ್ವದಾ ಮದಧಾರೆಯನ್ನು ಸುರಿಸುವ ವರಟದ (?) ಸೌಂದರ್ಯಕ್ಕೆ ಜಯವಾಗಲಿ. ಬ್ರಹ್ಮನೇ ಮೊದಲಾದ ದೇವಸಮೂಹದಿಂದ ಸ್ತುತಿಸಲ್ಪಡುವವನಿಗೆ ಜಯವಾಗಲಿ. ಕುಲಿಶಾಯುಧದಂತೆ ಕರ್ಕಶವೂ ಉನ್ನತವೂ ಬಿಳುಪೂ ಆದ ಏಕದಂತಕ್ಕೆ ಜಯವಾಗಲಿ. ಮನೋಹರವಾದ ಬೃಂಹಿತನಾದ ಪ್ರಸಿದ್ಧಿಯಿಂದ ಅನೇಕ ಮುಖವುಳ್ಳವನಿಗೆ ಜಯವಾಗಲಿ. ಸುರಿಯುವ ಅಮೃತದ್ರೋಣಿ ಸಮಾನವಾದ ನೀಳವಾದ ದವಡೆಗೆ ಜಯವಾಗಲಿ. ಜಗತ್ತಿನ ಇಷ್ಟಾರ್ಥವನ್ನು ನೆರವೇರಿಸುವ ಸುರಸಮೂಹಶ್ರೇಷ್ಠನಿಗೆ ಜಯವಾಗಲಿ. ಮದದಿಂದ ಸಂತೋಷಗೊಂಡ ಪವಿತ್ರವಾದ ಗಜಶ್ರೇಷ್ಠಸಮಾನನಾದ ಮುಖವುಳ್ಳವನಿಗೆ ಜಯವಾಗಲಿ. ಪಾದಪದ್ಮಕ್ಕೆ ನಮಿಸುವ ಜನರ ಮಂಗಳಸದನನಾದವನಿಗೆ ಜಯವಾಗಲಿ. ಕೊಡಲಿ (ಪಾಶ?), ಅಂಕುಶ, ಕಡುಬು, ಆನೆಯ ಹಲ್ಲುಗಳನ್ನು ಹಿಡಿದ ಕೈಯುಳ್ಳವನಿಗೆ ಜಯವಾಗಲಿ, ನಾಲ್ಕು ಕೈಗಳಿಂದಲೂ ನಿತ್ಯವೂ ಸಮಸ್ತ ವರಪ್ರದನಾದವನಿಗೆ ಜಯವಾಗಲಿ. ನಾಗಹಾರನೂ, ನಾಗಕಂಕಣನೂ, ನಾಗಯಜ್ಞೋಪವೀತಧಾರಿಯೂ ಆದವನಿಗೆ ಜಯವಾಗಲಿ. ನಾಗರಹಾವನ್ನು ಹೊಟ್ಟೆಗೆ ಬಿಗಿದಂತಹ ಶರೀರ

ಲಂಬೋದರ ದ್ವಾರನಿಭನಾಭಿಗರ್ತ ಜಯ
ಶಂಬರಾರಿವಿರೋಧಿ ಹೃದಯಗೃಹವರ್ತಿ ಜಯ

ಸಕಲ ಭುವನಪ್ರಣತ ಕಮನೀಯಚರಣ ಜಯ
ಪ್ರಕಟರವಿಕೋಟಿಸಮ ಚರಣನಖಕಿರಣ ಜಯ

ತ್ವರಿತಗತಿ ಚತುರ ಮೂಷಕ ವರವರೂಥ ಜಯ
ಹರಸನ್ನಿವಿಷ್ಟ ಸಂಪೂರ್ಣ ಗಣನಾಥ ಜಯ

ಸಕಲ ಫಲಪುಂಡ್ರೇಕ್ಷು ಭಕ್ಷ್ಯಸಂಪ್ರೀತ ಜಯ
ವಿಕಸಿತ ಪ್ರಸವಪತ್ರಾವೋದಪೂತ ಜಯ

ನಾಳಿಕೇರಾಮ್ರ ಕದಲೀಪನಸಭಕ್ಷ್ಯ ಜಯ
ದಾಡಿಮಾ ಖರ್ಜೂರ ಶರ್ಕರಾಧ್ಯಕ್ಷ ಜಯ

ನಾನಾ ಜಗತ್ಸಕಲಸಮಯಪ್ರಪೂಜ್ಯ ಜಯ
ದಾನವಾಂತಕ ಮುಖ್ಯ ಸಕಲ ದೇವೇಜ್ಯ ಜಯ

ವಿಶ್ವವಿದ್ಯಾರಂಭ ಸಂತತಾರಾಧ್ಯ ಜಯ
ಶಾಶ್ವತೈಶ್ವರ್ಯ ಮಂತ್ರಾಕ್ಷರೋಪಾಸ್ಯ ಜಯ

ವುಳ್ಳವನಿಗೆ ಜಯವಾಗಲಿ. ದೊಡ್ಡ ಹೊಟ್ಟೆಯ ಬಿಲದಂತಿರುವ ಹೊಕ್ಕುಳ ಸುಳಿಯುಳ್ಳವನಿಗೆ ಜಯವಾಗಲಿ. ಮನ್ಮಥನ ವಿರೋಧಿಯಾದ ಈಶ್ವರನ ಹೃದಯನಿವಾಸದ ಸಾನ್ನಿಧ್ಯದಲ್ಲಿರುವವನಿಗೆ ಜಯವಾಗಲಿ. ಸಮಸ್ತ ಪ್ರಪಂಚದಿಂದಲೂ ನಮಸ್ಕರಿಸಲ್ಪಡುವ ಮನೋಹರವಾದ ಪಾದಗಳುಳ್ಳವನಿಗೆ ಜಯವಾಗಲಿ. ಸುಪ್ರಸಿದ್ಧವಾದ ಕೋಟಿ ಸೂರ್ಯಸಮಾನವಾದ ಪಾದನಖಕಾಂತಿಯುಳ್ಳವನಿಗೆ ಜಯವಾಗಲಿ. ಶೀಘ್ರವಾಗಿ ಚಲಿಸುವ ಚಾತುರ್ಯವುಳ್ಳ ಇಲಿಯನ್ನೇ ಶ್ರೇಷ್ಠವಾಹನವಾಗುಳ್ಳವನಿಗೆ ಜಯವಾಗಲಿ. ಈಶ್ವರನ ಸಮೀಪದಲ್ಲಿ ಕುಳಿತುಕೊಳ್ಳುವ ಗಣನಾಥನಿಗೆ ಜಯವಾಗಲಿ. ಸಮಸ್ತ ಹಣ್ಣು ಹಂಪಲು, ರಸದಾಳಿ ಕಬ್ಬು ಭಕ್ಷ್ಯಗಳಿಂದ ಸುಪ್ರೀತನಾಗುವವನಿಗೆ ಜಯವಾಗಲಿ. ಅರಳಿದ ಪತ್ರಸಮೂಹಗಳಿಂದ ಸಂತುಷ್ಟನಾಗಿ ಪವಿತ್ರನಾಗಿರುವವನಿಗೆ ಜಯವಾಗಲಿ, ತೆಂಗು, ಮಾವು, ಬಾಳೆ, ಹಲಸುಗಳನ್ನು ಭಕ್ಷಿಸುವವನಿಗೆ ಜಯವಾಗಲಿ. ದಾಳಿಂಬೆ, ಖರ್ಜೂರ, ಸಕ್ಕರೆ ಮೊದಲಾದವುಗಳ ಒಡೆಯನಿಗೆ ಜಯವಾಗಲಿ. ಜಗತ್ತಿನ ನಾನಾ ಧರ್ಮಗಳಿಂದ ಪೂಜಿತನಾದವನಿಗೆ ಜಯವಾಗಲಿ. ರಾಕ್ಷಸಸಂಹಾರಕರಲ್ಲಿ ಮುಖ್ಯನಾದ ಸಕಲ ದೇವರೊಡೆಯನಿಗೆ ಜಯವಾಗಲಿ, ವಿಶ್ವವಿದ್ಯಾರಂಭ ಕಾಲದಲ್ಲಿ ಸರ್ವದಾ ಆರಾಧ್ಯನಾದವನಿಗೆ ಜಯವಾಗಲಿ. ಶಾಶ್ವತವಾದ ಸಂಪತ್ತನ್ನೀಯುವ ಮಂತ್ರಾಕ್ಷರಗಳಿಂದ ಉಪಾಸಿತ

ಯಾಗಾದಿ ಸರ್ವಕರ್ಮಾರಂಭಮುಖ್ಯ ಜಯ
ಯೋಗಫಲಸಿದ್ಧಿಕಾರಣ ನಿತ್ಯ ಸೌಖ್ಯ ಜಯ

ಸಮರಧರಣೀವೈರಿ ವಿಜಯಸ್ವರೂಪ ಜಯ
ಕಮಲಾಸನಾದಿ ಸುರಹೃದಯಪ್ರದೀಪ ಜಯ

ಯಕ್ಷಕರ್ದಮ ಗಂಧಲಿಪ್ತ ಸರ್ವಾಂಗ ಜಯ
ದಕ್ಷದುರ್ಧರ ಮಖೋದ್ಯೋಗಕೃತಭಂಗ ಜಯ

ಸಂತತ ಮನಃಪೂರ್ವಭಕ್ತಿಸಂತುಷ್ಟ ಜಯ
ಶಾಂತರಸಮೂರ್ತಿ ಪುರವರಸನ್ನಿವಿಷ್ಟ ಜಯ

ದಿವಿಜಸಮುದಯವಂದ್ಯ ಶಂಕರಕುಮಾರ ಜಯ
ನವಶಕ್ತಿ ಸತ್ರಮಖ ದಿಗಧಿಪಾಧಾರ ಜಯ

ದುರಿತತರುಮೂಲಖಂಡನ ಘನಕುಠಾರ ಜಯ
ಗಿರಿಜಾ ಮನೋಹರ್ಷಕಾರಣಾಕಾರ ಜಯ

ಶೇಷೋರಗಪ್ರತಿಮ ದೀರ್ಘಶುಂಡಾಗ್ರ ಜಯ
ಭೀಷಣ ಮದದ್ವಿರದ ವದನಸಮುದಗ್ರ ಜಯ

ನಾದವನಿಗೆ ಜಯವಾಗಲಿ. ಯಾಗವೇ ಮೊದಲಾದ ಎಲ್ಲ ಕರ್ಮಗಳ ಪ್ರಾರಂಭಕ್ಕೆ ಪ್ರಮುಖನಾದವನಿಗೆ ಜಯವಾಗಲಿ. ಯೋಗಫಲ ಇಷ್ಟಾರ್ಥಕ್ಕೆ ಕಾರಣನಾದ ನಿತ್ಯಸುಖ ವನ್ನು ನೀಡುವವನಿಗೆ ಜಯವಾಗಲಿ. ಯುದ್ಧಭೂಮಿಯಲ್ಲಿನ ಶತ್ರುವನ್ನು ಜಯಿಸುವ ಸ್ವರೂಪವುಳ್ಳವನಿಗೆ ಜಯವಾಗಲಿ. ಬ್ರಹ್ಮನೇ ಮೊದಲಾದ ದೇವತೆಗಳ ಹೃದಯ ಪ್ರಕಾಶಕ್ಕೆ ಕಾರಣನಾದವನಿಗೆ ಜಯವಾಗಲಿ, ಸುಗಂಧದ್ರವ್ಯಗಳಿಂದಲೂ ಗಂಧದಿಂದಲೂ ಲೇಪಿತನಾದ ಸರ್ವಾಂಗವುಳ್ಳವನಿಗೆ ಜಯವಾಗಲಿ. ದಕ್ಷನು ಕೈಕೊಂಡ ದುಸ್ಸಹವಾದ ಯಜ್ಞವಿಘ್ನಕಾರಕನಾದವನಿಗೆ ಜಯವಾಗಲಿ. ಸರ್ವದಾ ಮನಃಪೂರ್ವಕವಾದ ಭಕ್ತಿ ಯಿಂದ ಸುಪ್ರೀತನಾಗುವವನಿಗೆ ಜಯವಾಗಲಿ. ಶಾಂತಸ್ವಭಾವಮೂರ್ತಿಸ್ವರೂಪವಾದ ಪಟ್ಟಣ ಸಮೀಪದಲ್ಲಿರುವವನಿಗೆ ಜಯವಾಗಲಿ. ದೇವತೆಗಳ ಸಮೂಹದಿಂದ ಅಭಿವಂದ್ಯ ನಾದ ಶಂಕರಪುತ್ರನಿಗೆ ಜಯವಾಗಲಿ. ನೂತನ ಶಕ್ತಿ ಸತ್ರಮಖರಿಗೂ ದಿಗ್ದೇವತೆಗಳಿಗೂ ಆಧಾರನಾದವನಿಗೆ ಜಯವಾಗಲಿ. ಪಾಪವೃಕ್ಷದ ಬೇರುಗಳನ್ನು ಛೇದಿಸುವ ಶ್ರೇಷ್ಠ ಕೊಡಲಿಯಂತಿರುವವನಿಗೆ ಜಯವಾಗಲಿ. ಪಾರ್ವತಿಯ ಚಿತ್ತಾನಂದಕಾರಣ ಆಕಾರ ವುಳ್ಳವನಿಗೆ ಜಯವಾಗಲಿ. ಆದಿಶೇಷನನ್ನು ಹೋಲುವ ದೀರ್ಘವಾದ ಸೊಂಡಿಲುಳ್ಳ ವನಿಗೆ ಜಯವಾಗಲಿ. ಭಯಂಕರವಾದ ಮದಿಸಿದ ಆನೆಯ ಮುಖದಿಂದ ಆನಂದಿತ

ಪರಶುಧರ ಗಣಪತಿ ವಿನಾಯಕ ಗಜಾಸ್ಯ ಜಯ
ಪುರಹರತನೂಜ ವೃಷರಥ ಲೋಕವಶ್ಯ ಜಯ

ಸುಮುಖ ಲಂಬೋದರ ಭುಜಂಗ ಕಟಿಸೂತ್ರ ಜಯ
ವಿಮಳ ಯೋಗಸ್ಥಿತ ಮುನಿಸ್ತೋತ್ರಪಾತ್ರ ಜಯ

ವಿಶದೈಕದಂತ ಸೃಣಿಹಸ್ತ ವಿಘ್ನೇಶ ಜಯ
ಶಶಿಮೌಲಿಪುತ್ರ ಹೇರಂಬ ರಿಪುನಾಶ ಜಯ

ಸಿಂಧೂರಶೋಭಿತ ಮಹತ್ಕುಂಭಕೂಟ ಜಯ
ಸೌಂದರ್ಯ ರಕ್ತಚಂದನಯುತಲಲಾಟ ಜಯ

ಪ್ರತ್ಯೂಹ ಪಟಲ ಪರ್ವತ ಕುಲಿಶದಂಡ ಜಯ
ನಿತ್ಯವರದಾಹ್ವಯ ಲಸದ್ವಕ್ರತುಂಡ ಜಯ

ಶಕ್ತಿಗಣಪತಿ ಮಹಾಗಣಪತಿ ಗಣೇಶ ಜಯ
ಭುಕ್ತಿ ಮುಕ್ತಿಪ್ರದ ಕರಾಗ್ರ ವರತೋಷ ಜಯ

ಕಟಕ ಕೇಯೂರ ಕಂಕಣ ಮಣಿಕಿರೀಟ ಜಯ
ಕುಟಿಲ ಲಂಬಿತ ಕಿಂಕಿಣೀನಾದಕೋಟಿ ಜಯ

ನಾದವನಿಗೆ ಜಯವಾಗಲಿ. ಪರಶುಧರನೂ ಗಣಪತಿಯೂ ವಿನಾಯಕನೂ ಆನೆಯಮುಖವುಳ್ಳವನೂ ಆದವನಿಗೆ ಜಯವಾಗಲಿ. ಈಶ್ವರಪುತ್ರನೂ ಮೂಷಿಕವಾಹನನೂ (?) ಲೋಕವಶೀಕರಣನೂ ಆದವನಿಗೆ ಜಯವಾಗಲಿ. ಸುಭಗವಾದ ವಿಶಾಲೋದರನೂ ಸರ್ಪವನ್ನು ಸೊಂಟಕ್ಕೆ ಸೂತ್ರದಂತೆ ಧರಿಸಿರುವವನೂ ಆದವನಿಗೆ ಜಯವಾಗಲಿ. ವಿಮಳ ಯೋಗರೂಢನೂ ಮುನಿಸ್ತುತಿಪಾತ್ರನೂ ಆದವನಿಗೆ ಜಯವಾಗಲಿ. ವಿಸ್ತಾರವಾದ ಏಕದಂತನೂ ಅಂಕುಶಧಾರಿಯೂ ಆದ ವಿಘ್ನೇಶನಿಗೆ ಜಯವಾಗಲಿ. ಚಂದ್ರಮೌಳಿಯಾದ ಈಶ್ವರನ ಪುತ್ರನೂ ಹೇರಂಭನೂ ಶತ್ರುಸಂಹಾರಕನೂ ಆದವನಿಗೆ ಜಯವಾಗಲಿ. ಕುಂಕಮದಿಂದ ಭೂಷಿತವಾದ ಮಹತ್ತಾದ ಕುಂಭಸ್ಥಲವುಳ್ಳವನಿಗೆ ಜಯವಾಗಲಿ. ಸುಂದರವಾದ ಕೆಂಪಾದ ಗಂಧಯುಕ್ತವಾದ ಹಣೆಯುಳ್ಳವನಿಗೆ ಜಯವಾಗಲಿ, ವಿಘ್ನಸಮೂಹಪರ್ವತಕ್ಕೆ ವಜ್ರಾಯುಧದಂತೆ ಇರುವವನಿಗೆ ಜಯವಾಗಲಿ. ನಿತ್ಯವರದನೆಂಬ ಹೆಸರುಳ್ಳ ಸುಶೋಭಿತವಾದ ವಕ್ರತುಂಡನಿಗೆ ಜಯವಾಗಲಿ. ಶಕ್ತಿಗಣಪತಿ, ಮಹಾಗಣಪತಿ, ಗಣೇಶನಿಗೆ ಜಯವಾಗಲಿ, ಭುಕ್ತಿ ಮುಕ್ತಿದಾಯಕನಾದ ಸೊಂಡಿಲ ತುದಿಯಿಂದ ಸಂತುಷ್ಟನಾದವನಿಗೆ ಜಯವಾಗಲಿ. ಕಡಗ, ತೋಳಬಂದಿ, ಕಂಕಣ, ಮಣಿಕಿರೀಟವುಳ್ಳ

ಮಣಿಪದಕ ನವಹಾರ ಮುದ್ರಿಕಾಯುಕ್ತ ಜಯ
ಪ್ರಣತ ನಿಜಚರಣ ವರಶರಣಾನುರಕ್ತ ಜಯ

ಶಂಕರ ಸರೋಜಾಕ್ಷ ಪರಮೇಷ್ಠಿಮೂರ್ತಿ ಜಯ
ಪಂಕರುಹಸಖ ಕುಮುದಸಖ ಮಧ್ಯವರ್ತಿ ಜಯ

ಮದಜಲಘನಸಾರ ನವತಾರಮೇಘ ಜಯ
ಸದಮಳ ಮಹಾಸಿದ್ಧಿವರ ಕರಾಮೋಘ ಜಯ

ಪದ ವಿನತ ಜಗದಭೀಪ್ಸಾರ್ಥ ಫಲದಾಯಿ ಜಯ
ತ್ರಿದಿವಲೋಕೇಶ್ವರಸ್ತುತ ವರಸ್ಥಾಯಿ ಜಯ

ಸುರಪ ಶಶಿ ಯಮ ನಿರುತಿ ವರುಣ ನತಚರಣ ಜಯ
ಮರುದಭವಸಖ ರುದ್ರಪದ ಸಮುದ್ಧರಣ ಜಯ

ನೃತ್ಯವಾತೋದ್ಯ ಸಂಗೀತ ಸಂಪ್ರೀತ ಜಯ
ಚಿತ್ತಸಂಭವಮಥನ ಹೃದಯಸಂಜಾತ ಜಯ

ವೇದ ವೇದಾಂತ ತತ್ತ್ವಾಗಮೋಕ್ತೈಕ ಜಯ
ನಾದ ಬಿಂದು ಕಳಾ ಪ್ರಸಿದ್ಧಪ್ರವೇಕ ಜಯ

ವನಿಗೆ ಜಯವಾಗಲಿ. ಡೊಂಕಾಗಿಯೂ ವಿಸ್ತಾರವಾಗಿಯೂ ಇರುವ ಹಲವಾರು ಕಾಲು ಗೆಜ್ಜೆಗಳ ನಾದವುಳ್ಳವನಿಗೆ ಜಯವಾಗಲಿ. ಮಣಿಪದಕದಿಂದ ಹೊಸಹಾರ ಮುದ್ರಿಕೆ ಯಿಂದ ಕೂಡಿದವನಿಗೆ ಜಯವಾಗಲಿ. ನಮಸ್ಕರಿಸಲ್ಪಟ್ಟ ತನ್ನ ಪಾದಗಳಿಗೆ ಶರಣ ರಾದಂಥವರಲ್ಲಿ ಅಭಿಮಾನವುಳ್ಳವನಿಗೆ ಜಯವಾಗಲಿ. ಶುಭಕರವಾದ ತಾವರೆಯ ಕಣ್ಣುಳ್ಳವನೂ ಪರಮೇಷ್ಠಿಮೂರ್ತಿಸ್ವರೂಪನೂ ಆದವನಿಗೆ ಜಯವಾಗಲಿ. ಸೂರ್ಯ ಚಂದ್ರ ಮಧ್ಯವರ್ತಿಯಾದವನಿಗೆ ಜಯವಾಗಲಿ. ಮದಜಲ ಘನಸಾರಾವತಾರ ಸ್ವರೂಪಿ ಯಾಗಿ ಮೇಘದಂತಿರುವವನಿಗೆ ಜಯವಾಗಲಿ. ಪವಿತ್ರವಾದ ಮಹಾಸಿದ್ಧಿಶ್ರೇಷ್ಠ ವರ ಪ್ರದಾನನೆನ್ನಿಸಿ ಪೂಜ್ಯನಾದವನಿಗೆ ಜಯವಾಗಲಿ. ಕಾಲಿಗೆ ನಮಿಸುವ ಜಗತ್ತಿನ ಅಭೀಪ್ಸಾರ್ಥಫಲವನ್ನು ನೀಡುವವನಿಗೆ ಜಯವಾಗಲಿ. ಸ್ವರ್ಗಲೋಕದಲ್ಲಿರುವ ದೇವತೆ ಗಳಿಂದ ಕೊಂಡಾಡಲ್ಪಡುವ ಶಾಶ್ವತವರಪ್ರದನಾದವನಿಗೆ ಜಯವಾಗಲಿ. ಇಂದ್ರ, ಚಂದ್ರ, ಯಮ, ನಿರುತಿ, ವರುಣರಿಂದ ನಮಸ್ಕರಿಸಲ್ಪಡುವ ಪಾದವುಳ್ಳವನಿಗೆ ಜಯ ವಾಗಲಿ. ಗಾಳಿ, ಶಿವಸಖ, ರುದ್ರಪದಗಳ ಉದ್ಧಾರಕನಿಗೆ ಜಯವಾಗಲಿ. ನೃತ್ಯ ವಾದ್ಯ ಸಂಗೀತಗಳಿಂದ ಸಂಪ್ರೀತನಾಗುವವನಿಗೆ ಜಯವಾಗಲಿ. ಮನ್ಮಥನನ್ನು ಮಂಥನ ಮಾಡಿದ ಈಶ್ವರನ ಹೃದಯೋದ್ಭವನಿಗೆ ಜಯವಾಗಲಿ. ವೇದ ವೇದಾಂತ

ಸಪ್ತಕೋಟಿ ಮಹಾದಿಮಂತ್ರಮಯ ಮೂರ್ತಿ ಜಯ
ತಪ್ತಕಾಂಚನ ಮಣಿವಿಭೂಷಣಸ್ಫೂರ್ತಿ ಜಯ

ಮಧುರತರಪಕ್ವಫಲಕಬಳ ಪುಷ್ಟಾಂಗ ಜಯ
ಮಧುಗುಡಕ್ಷೀರಾನ್ನ ಪರ್ಯಾಪ್ತಸಂಗ ಜಯ

ಪೂರ್ಣಶಶಿಕೋಟಿಸದೃಶ ಸ್ಫೀತದೇಹ ಜಯ
ವರ್ಣಿತ ಸುಗಂಧಮಯದಾನಪ್ರವಾಹ ಜಯ

ಶರಣಜನವಿಘ್ನಸಂಕುಳ ವಿಪಿನದಹನ ಜಯ
ಶರಣಜನ ಗೃಹಮಧ್ಯ ಸುರವಿಟಪಿಗಹನ ಜಯ

ಶರಣಜನಸಂತಾಪ ಬಹುವಿಘ್ನಭಂಗ ಜಯ
ಶರಣಜನಹೃದಯ ಜಿಹ್ವಾನೃತ್ಯರಂಗ ಜಯ

ವಿಜಯಯಾತ್ರಾಮುಖಸ್ಮರಣ ಪ್ರಸನ್ನ ಜಯ
ಸುಜನಸಂತರ್ಪಿತ ಮಹಾರ್ಘಸಂಪನ್ನ ಜಯ

ಸುರ ದನುಜ ಮನುಜ ಕಿನ್ನರಲೋಕನಾಥ ಜಯ
ಪರಮಕರುಣಾಂಬುಧಿಯಭಂಗ ಗಣನಾಥ ಜಯ ೨೩.೨

ತತ್ತ್ವಾಗಮಗಳಲ್ಲಿ ನಿರೂಪಿತನಾದವನಿಗೆ ಜಯವಾಗಲಿ. ನಾದ ಕಳಾ ಪ್ರಸಿದ್ಧನಾಗಿ ಉತ್ತಮೋತ್ತಮನಾದವನಿಗೆ ಜಯವಾಗಲಿ. ಏಳು ಕೋಟಿ ಮಹಾದಿ ಮಂತ್ರಮಯ ಮೂರ್ತಿಸ್ವರೂಪನಿಗೆ ಜಯವಾಗಲಿ. ಪರಿಶುದ್ಧವಾದ ಬಂಗಾರದಲ್ಲಿ ಕೇವಣಿಸಿದ ಮಣಿವಿಭೂಷಣ ಸ್ಫೂರ್ತಿದಾಯಕನಿಗೆ ಜಯವಾಗಲಿ. ಸಿಹಿಯಾದ ಪಕ್ವಫಲವನ್ನು ತಿಂದು ಪುಷ್ಟಿಯುತವಾದ ಶರೀರವುಳ್ಳವನಿಗೆ ಜಯವಾಗಲಿ, ಜೇನು, ಬೆಲ್ಲ, ಹಾಲು, ಅನ್ನಗಳಿಂದ ಸಂತೃಪ್ತನಾದವನಿಗೆ ಜಯವಾಗಲಿ. ಪೂರ್ಣಚಂದ್ರ ಕೋಟಿ ಸಮಾನನಾಗಿ ಬಿಳುಪಾದ ದೇಹವುಳ್ಳವನಿಗೆ ಜಯವಾಗಲಿ. ವರ್ಣಿಸಲ್ಪಡುವ ಸುಗಂಧಮಯ ದಾನವಾರಿಯುಳ್ಳವನಿಗೆ ಜಯವಾಗಲಿ. ಶರಣಾಗತರ ವಿಘ್ನಸಮೂಹಾರಣ್ಯವನ್ನು ಸುಡುವವನಿಗೆ ಜಯವಾಗಲಿ. ಶರಣಾಗತರ ಗೃಹದ ಮಧ್ಯೆ ಕಲ್ಪವೃಕ್ಷದಂತೆ ಗಹನನಾದವನಿಗೆ ಜಯವಾಗಲಿ. ಶರಣಾದವರ ಸಂಕಷ್ಟಗಳೆಂಬ ಬಹುವಿಘ್ನಗಳನ್ನು ನಿವಾರಿಸುವವನಿಗೆ ಜಯವಾಗಲಿ. ಶರಣಾಗತರ ಹೃದಯವೆಂಬ ನಾಲಗೆಯನ್ನು ನೃತ್ಯರಂಗವೆಂಬಂತೆ ಭಾವಿಸಿರುವವನಿಗೆ ಜಯವಾಗಲಿ. ಜೈತ್ರಯಾತ್ರಾರ್ಥಿಗಳು ಮುಖಸ್ಮರಣ ಮಾಡಲು ಒಲಿಯುವವನಿಗೆ ಜಯವಾಗಲಿ. ಸಜ್ಜನರಿಗೆ ದಾನಮಾಡುವ ಅಪಾರವಾದ ದ್ರವ್ಯರಾಶಿಯುಳ್ಳವನಿಗೆ ಜಯವಾಗಲಿ. ದೇವತೆ, ರಾಕ್ಷಸ, ಮನುಷ್ಯ, ಕಿನ್ನರಲೋಕಗಳ ಒಡೆಯನಿಗೆ ಜಯವಾಗಲಿ. ಶ್ರೇಷ್ಠದಯಾಸಮುದ್ರವೆಂಬ ಅಲೆಗಳ ಸಮೂಹಕ್ಕೆ

ಜಯ ಸಕಲ ವಿಘ್ನನಾಯಕ
ಜಯ ಪರಶುವಿಷಾಣಸೃಣಿಸುಮೋದಕಹಸ್ತಾ
ಜಯ ಶಂಕರಾತ್ಮಸಂಭವ
ಜಯ ಜಯ ಗಣಪತಿಯಭಂಗ ಸಿದ್ಧಿಗಣೇಶಾ ೨೩೩

ವ॥ ಅಂತು ವಿನಾಯಕಸ್ತೋತ್ರಮಂ ಮಾಡಿ

ವಿಭವಂ ಕೈಮಿಗೆ ಚಾತುರಂಗಸಹಿತಂ ಪ್ರಸ್ಥಾನಮಂ ಮಾಡಿ ಚಿ
ತ್ತಭವ ಪ್ರೋಜ್ಜ್ವಲಮೂರ್ತಿ ನೈಷಧನೃಪಂ ಪೋಗುತ್ತಿರಲ್ ಮುಂದೆ ಸಂ
ಶುಭವಪ್ಪೊಲ್ ಶಕುನಂಗಳಾಗೆ ಮನದೊಳ್ ಸಂತೋಷಮುರ್ಬಲ್ ಕರಂ
ರಭಸಂಬೆತ್ತು ವಿದರ್ಭದೇಶಪಥಮಂ ಮುಂಕೊಂಡನುತ್ಸಾಹದಿಂ ೨೩೪

ವ॥ ಅನ್ನೆಗಮತ್ತಲ್

ಪುರದವರೆಲ್ಲರುಂ ಧ್ವಜಪತಾಕೆಗಳಿಂ ನವರತ್ನ ತೋರಣೋ
ತ್ಕರದಿನನೇಕ ಹೇಮಕಳಸಂಗಳಿನೊಪ್ಪುವ ತಮ್ಮ ತಮ್ಮ ಮಂ
ದಿರವನತೀವ ಚಿತ್ರಮೆನೆ ಶೋಭಿಸುಗೊಂದು ನೃಪಾಲಕಂ ಸ್ವಯಂ
ವರ ಶುಭವಾರ್ತೆಯುತ್ಸವದ ಡಂಗುರವಂ ಪುರದೊಳ್ ನಿಮಿರ್ಚಿದಂ ೨೩೫

ದಮಯಂತೀವನಿತಾಸ್ವಯಂವರಮಪೂರ್ವಂ ಬೇಗದಿಂ ಭೂಪರ
ಶ್ರಮದಿಂ ಬನ್ನಿಮೆನುತ್ತ ಕುಂಡಿನಪುರಂ ಕಯ್ಯೆತ್ತಿ ಚೇನಾಂಬರಾ

ಒಡೆಯನಾದವನಿಗೆ ಜಯವಾಗಲಿ. ೨೩೩. ಸಮಸ್ತ ವಿಘ್ನಗಳ ಒಡೆಯನಾದವನಿಗೆ ಜಯವಾಗಲಿ. ಕೊಡಲಿ, ಕೊಂಬು, ಅಂಕುಶ, ಕಡುಬುಗಳ ಹಸ್ತಧಾರಿಗೆ ಜಯವಾಗಲಿ. ಈಶ್ವರಪುತ್ರನಿಗೆ ಜಯವಾಗಲಿ. ಅಭಂಗ ಸಿದ್ಧಿಗಣೇಶನೆಂಬ ವಿನಾಯಕನಿಗೆ ಜಯವಾಗಲಿ. ವ॥ ಹಾಗೆ ವಿನಾಯಕಸ್ತೋತ್ರವನ್ನು ಮಾಡಿ, ೨೩೪. ಮನ್ಮಥಪ್ರಕಾಶಸ್ವರೂಪನಾದ ನಿಷಧದೇಶದ ಮಹಾರಾಜನು ವೈಭವವು ಮೇರೆ ಮೀರುವಂತೆ, ಚತುರಂಗಸೇನಾ ಸಮೇತನಾಗಿ ಪ್ರಯಾಣವನ್ನು ಕೈಕೊಂಡು ಹೋಗುತ್ತಿರಲು ಮುಂದೆ ಅತ್ಯಧಿಕ ಮಂಗಳ ವಾಗುವಂತೆ ಶಕುನಗಳಾಗಲು, ಮನಸ್ಸಿನಲ್ಲಿ ಸಂತೋಷವುಕ್ಕಲು, ವಿಶೇಷವಾದ ವೇಗದಿಂದ ವಿದರ್ಭದೇಶವನ್ನು ಉತ್ಸಾಹದಿಂದ ಬಂದು ಸೇರಿದನು. ವ॥ ಆ ವೇಳೆಗೆ ಅಲ್ಲಿ, ೨೩೫. ಪುರಜನರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಬಾವುಟಗಳಿಂದಲೂ, ನವರತ್ನ ತೋರಣ ಸಮೂಹಗಳಿಂದಲೂ, ನಾನಾ(ಬಗೆಯ) ಚಿನ್ನದ ಕಳಸಗಳಿಂದಲೂ ಒಪ್ಪುವಂತೆ ಅತ್ಯಾಶ್ಚರ್ಯವಾಗುವಂತೆ ಅಲಂಕರಿಸಲೆಂದು ಸ್ವಯಂವರ ಶುಭವಾರ್ತೆಯ ಉತ್ಸವದ ಡಂಗುರವನ್ನು ಊರಿನಲ್ಲೆಲ್ಲ ಬಾರಿಸುವಂತೆ (ಏರ್ಪಡಿಸಿದನು). ೨೩೬. "ತರುಣಿಯಾದ ದಮಯಂತೀಸ್ವಯಂವರವು ಅಪೂರ್ವವಾದುದು. ಮಹಾರಾಜರು ಅನಾಯಾಸದಿಂದ

ಗ್ರಿಮದಿಂ ಬೀಸಿ ನಿರಂತರಂ ಕರೆವವೊಲ್ ಪಂಚಧ್ವಜಂ ವೈಜಯಂ
ತಿಮನಃಕೌತುಕವಪ್ಪಿನಂ ಸೊಗಯಿಕುಂ ಸೋಮಾರ್ಕಸದ್ವೀಥಿಯೊಳ್ ೨೩೬

ವ|| ಅಲ್ಲಿ

ಪ್ರಕಟ ಹಿಮೋಪಲಸ್ಫಟಿಕ ಕುಟ್ಟಿಮಭಿತ್ತಿಗಳಿಂ ಸಮಗ್ರ ಹಾ
ಟಕ ಕಳಧೌತ ಪಟ್ಟಿಕೆಗಳಾಯತದಿಂ ನವರತ್ನಬದ್ಧ ವೇ
ದಿಕೆಗಳಿನಗ್ರವಜ್ರಮಣಿಯೊಪ್ಪುವ ಕಂಭದಿನಚ್ಛದಂತ ಪು
ತ್ರಿಕೆಗಳಿನೋಜೆ ನೂರ್ಮಡಿಸೆ ರಂಜಿಸಿದತ್ತು ವಿವಾಹಮಂಟಪಂ ೨೩೭

ನಾನಾ ಚಿತ್ರವಿತಾನದಿಂ ನವಗವಾಕ್ಷಪ್ರಾಂತ ವೈಡೂರ್ಯ ಸೋ
ಪಾನಶ್ರೇಣಿಗಳಿಂ ಕದಂಬಮಣಿಮಾಲಾಲಂಬೂಪದಿಂ
ಪೀನೋತ್ತುಂಗ ಮೃಗೇಂದ್ರಪೀಠದಿನಿಳಾನೇತ್ರೋತ್ಸವಂ ಲೋಕಚಿ
ತ್ತಾನಂದಂ ನಿಮಿರ್ವಂತು ಶೋಭೆವಡೆದತ್ತುದ್ವಾಹಗೇಹಾಂತರಂ ೨೩೮

ಭೃಂಗಾರವನೆಯ ಭೋಗಂ
ಮಂಗಳಕಳಶಂ ಸಮಗ್ರ ನಾನಾ ನವಧಾ
ನ್ಯಂಗಳರಾಶಿ ಸಮಸ್ತರ
ಕಂಗೆಸೆಯಲ್ ಮೆಱೆದುದಾ ಸ್ವಯಂವರಗೇಹಂ ೨೩೯

ಬೇಗ ಬನ್ನಿರಿ" ಎಂಬುದಾಗಿ ಕುಂಡಿನಪುರವು ಕೈಯೆತ್ತಿ ಚೀನಾಂಬರದ ತುದಿಯಿಂದ ಬೀಸಿ ಸರ್ವದಾ ಕರೆಯುತ್ತಿರುವಂತೆ ಪಂಚಧ್ವಜಗಳೂ, ಬಾವುಟಗಳೂ ಮನಸ್ಸಿಗೆ ಕುತೂಹಲ ವನ್ನುಂಟುಮಾಡಿ ಸೂರ್ಯ ಚಂದ್ರಬೀದಿಗಳಲ್ಲಿ ಸೊಗಯಿಸುತ್ತಿದ್ದುವು. ವ|| ಅಲ್ಲಿ, ೨೩೭. ಸುವಿದಿತವಾದ ಹಿಮಶಿಲೆ, ಸ್ಫಟಿಕಗಳ ನೆಲಗಟ್ಟಿನ ಗೋಡೆಗಳಿಂದಲೂ, ಸಮಗ್ರ ವಾಗಿ ಚಿನ್ನ, ಬೆಳ್ಳಿಗಳ ಪಟ್ಟಿಕೆಗಳ ವಿಸ್ತಾರದಿಂದಲೂ, ನವರತ್ನಖಚಿತವಾದ ವೇದಿಕೆ ಗಳಿಂದಲೂ, ತುದಿಯಲ್ಲಿ ವಜ್ರಮಣಿಗಳಿಂದೊಪ್ಪುವ ಕಂಬಗಳಿಂದಲೂ, ದಂತದ ಗೊಂಬೆ ಗಳಿಂದಲೂ ರಚನಾಕ್ರಮವು ನೂರುಮಡಿಯಾಗಲು ವಿವಾಹಮಂಟಪವು ಕಂಗೊಳಿ ಸಿದ್ದಿತು. ೨೩೮. ನಾನಾ ವಿಧವಾದ ಚಿತ್ರಪಂಕ್ತಿಗಳಿಂದಲೂ, ನವಗವಾಕ್ಷ ಸೀಮೆಯ ವೈಡೂರ್ಯ ಸೋಪಾನಪಂಕ್ತಿಗಳಿಂದಲೂ, ಮಣಿಸಮೂಹದ ನೀಳವಾದ ಏಳು ಎಳೆಗಳ ಸರಗಳಿಂದಲೂ, ಪುಷ್ಟವೂ, ಉನ್ನತವೂ ಆದ ಸಿಂಹಪೀಠದಿಂದಲೂ, ಭೂಮಿಗೆ ನೇತ್ರೋ ತ್ಸವವನ್ನೂ, ಲೋಕಕ್ಕೆ ಹೃದಯಾನಂದವನ್ನೂ ವಿಸ್ತರಿಸುವಂತೆ ವಿವಾಹಮಂಟಪದ ಒಳಭಾಗವೆಲ್ಲ ಕಾಂತಿಯುಕ್ತವಾಗಿದ್ದಿತು. ೨೩೯. ಬಂಗಾರದ ಮನೆಯ ವೈಭವ ದಿಂದಲೂ, ಮಂಗಳ ಕಳಶಗಳಿಂದಲೂ, ಸಮಸ್ತ ವಿಧವಾದ ನವಧಾನ್ಯಗಳ ರಾಶಿ ಯಿಂದಲೂ, ಆ ಸ್ವಯಂವರಶಾಲೆಯು ಎಲ್ಲರ ಕಣ್ಣುಗಳಿಗೂ ತೋರಿಬರುವಂತೆ

ಮಣಿಕನಕತೋರಣಂ ದ
ರ್ಪಣತೋರಣಮಖಿಳ ವಿಮಳ ಚಿತ್ರಾಂಬರತೋ
ರಣಮುಜ್ಜ್ವಲ ಪಲ್ಲವತೋ
ರಣವಲರ್ಗಳ ತೋರಣಂ ಕರಂ ರಂಜಿಸುಗುಂ ೨೪೦

ಬಂದ ನೃಪಾಲಕರ್ ಸುಖದಿನಿರ್ಪನಮೊಪ್ಪುವ ರಾಜಯೋಗ್ಯ ಸ
ನ್ಮಂದಿರಮಂ ಸುವರ್ಣಕಳಶಸ್ಥಗಿತಂ ಗಳನಂತಮಂ ಮನಂ
ಬಂದ ಪದಾರ್ಥಮಂ ಮಿಗೆ ವಿದರ್ಭನೃಪಂ ಸಮಕಟ್ಟಿ ಕಲ್ಪಭೂ
ಜಂ ದೊರೆಯೆಂಬಿನಂ ಸಹಜವೈಭವಮಂ ಮೆಱೆದಂ ನಿರಂತರಂ ೨೪೧

ವ॥ ಆ ಸಮಯದೊಳ್

ಸಕಲ ದಿಗಂತದುರ್ವಿಪರು ತಿಂತಿಣಿಯೋಲೆಗಳಿಂ ಸ್ವಯಂವರ
ಪ್ರಕಟಿತ ವಾರ್ತೆಯಂ ತಿಳಿದದೊರ್ವರನೊರ್ವರಗಲ್ದು ಮುಂಚುವು
ತ್ಸುಕಗತಿಯಿಂ ಸಮಸ್ತ ಬಲಸಂಗ್ರಹದಿಂ ಪೊಱಮಟ್ಟು ಬಂದು ಕೌ
ತುಕಮಯವಾದ ಕೌಂಡಿನಪುರಾಂತರದೊಳ್ ನೆಲಸಿರ್ದರಟ್ಟಿಯಿಂ ೨೪೨

ವ್ಯಾಳ ಗಜಂಗಳಂ ಕೆಲಬರುದ್ಧತ ವಾಜಿಗಳಂ ಕೆಲಂಬರಾಂ
ದೋಳಿಕೆಯಂ ಪಲಂಬರರೆಬರ್ ನವರತ್ನರಥಂಗಳಂ ಸಮು

ಮೆರೆಯಿತು. ೨೪೦. ಮಣಿಕನಕಯುಕ್ತವಾದ ತೋರಣದಿಂದಲೂ, ಕನ್ನಡಿ ತೋರಣದಿಂದಲೂ, ಸರ್ವಪವಿತ್ರವಾದ ಚಿತ್ರಖಚಿತವಾದ ಬಟ್ಟೆಗಳ ತೋರಣದಿಂದಲೂ, ಪ್ರಕಾಶಮಾನವಾದ ಚಿಗುರಿನ ತೋರಣದಿಂದಲೂ, ಹೂವುಗಳ ತೋರಣದಿಂದಲೂ ವಿಶೇಷವಾಗಿ ರಂಜಿಸುತ್ತಿದ್ದಿತು. ೨೪೧. ಬಂದ ಮಹಾರಾಜರು ಸುಖದಿಂದಿರುವಂತೆ ರಾಜಯೋಗ್ಯವಾದ ಶ್ರೇಷ್ಠಮಂದಿರಗಳನ್ನೂ ಮುಚ್ಚಿಟ್ಟ ಅನೇಕ ಸುವರ್ಣಕಳಶಗಳನ್ನೂ ಮನಸ್ಸಿಗೆ ಒಪ್ಪುವಂತಹ ಪದಾರ್ಥಗಳನ್ನೂ ವಿದರ್ಭಮಹಾರಾಜನು ಅಣಿಮಾಡಿಟ್ಟು, ಕಲ್ಪವೃಕ್ಷಕ್ಕೆ ಸಮಾನವೆಂಬಂತೆ ತನ್ನ ವೈಭವವನ್ನು ಸರ್ವದಾ ಮೆರೆಸಿದನು. ವ॥ ಆ ಹೊತ್ತಿನಲ್ಲಿ ೨೪೨. ಸಮಸ್ತ ದಿಗಂತಗಳ ಮಹಾರಾಜರು ಅಸಂಖ್ಯಾತವಾದ ಕಾಗದಗಳ ಮೂಲಕ ಸ್ವಯಂವರವನ್ನು ಪ್ರಕಟಿಸಿದ ಸುದ್ದಿಯನ್ನು ತಿಳಿದು ಒಬ್ಬರು ಮತ್ತೊಬ್ಬರನ್ನು ಬಿಟ್ಟು ಮುಂದಾಗುವ ಉತ್ಸುಕತೆಯಿಂದ ಸಮಸ್ತ ಬಲವನ್ನು ಕೂಡಿಕೊಂಡು ಹೊರಟುಬಂದು ಕುತೂಹಲಮಯವಾದ ಕೌಂಡಿನಪಟ್ಟಣದ ಸಮೀಪದಲ್ಲಿ ಪ್ರೀತಿಯಿಂದ ನೆಲಸಿದ್ದರು. ೨೪೩. ಕೆಲವರು ಮದಿಸಿದ ಆನೆಗಳನ್ನೂ, ಕೆಲವರು ಸೊಕ್ಕೇರಿದ ಕುದುರೆಗಳನ್ನೂ, ಹಲವರು ಪಲ್ಲಕ್ಕಿಗಳನ್ನೂ, ಇನ್ನು ಕೆಲವರು ನವರತ್ನಖಚಿತವಾದ ರಥಗಳನ್ನೂ ಅತಿ

ತ್ರಾಳದೊಳೇಜು ಶೀಘ್ರಗತಿಯಿಂ ಪೆಸರ್ವೆತ್ತ ವಿದರ್ಭದೇಶಭೂ
ಪಾಳಿಯೆನಿಪ್ಪ ಕುಂಡಿನಪುರಾಂತರದೊಳ್ ನೆಲಸಿರ್ದರುರ್ವಿಪರ್ ೨೪೩

ಕುಮುದಂ ಲೋಚನವಂಬುಜಂ ನಗೆಮೊಗಂ ಕೋಕಂ ಕುಚಂ ಸೋನ್ಮದ
ಭ್ರಮರಂ ಕುಂತಳವಂಬುಶೂಕಲಿಕೆ ತದ್ವೇಣೀಭರಂ ನಿರ್ಮಲೋ
ತ್ತಮ ವಾರಿಪ್ಲವವಾತ್ಮಯೌವನರಸಂ ಚೆಲ್ವಾಗಿ ಪೆರ್ಚಿರ್ದ ತ
ದ್ದಮಯಂತೀಕಮಳಾಕರಕ್ಕೆಳಸದೇ ತದ್ರಾಜಹಂಸವ್ರಜಂ ೨೪೪

ಮಕರ ತರಕ್ಷು ಸಿಂಹ ಗಜ ಸೂಕರ ಭೈರವಸರ್ಪ ಪುಷ್ಪಸಾ
ಯಕ ವೃಷಭೇಂದ್ರ ತಾರ್ಕ್ಷ್ಯ ಶಶಿ ಭಾನು ನಿಶಾಚರ ಖಡ್ಗ ಚಿಹ್ನ ಕೌ
ತುಕವೆಸೆಯಲ್ ಮಹಾಧ್ವಜಪತಾಕೆಗಳೊಪ್ಪುವನೇಕ ದೇಶನಾ
ಯಕರತಿವೇಗದಿಂ ಬರೆ ಕರಂ ಸೊಗಸಿತ್ತಬಲಾಸ್ವಯಂವರಂ ೨೪೫

ವ॥ ಆ ಸಮಯದೊಳ್

ಅತಿಶಯದ ಲೋಕಯಾತ್ರಾ
ಗತಿಯಿಂ ನಾರದಮುನೀಶ್ವರಂ ತದ್ವಾರ್ತಾ
ಸ್ಥಿತಿಯಂನಱಿದ[ಮರ]ಲೋಕ
ಕ್ಕತಿಮುದದಿಂ [ಕೂಡೆ] ಪೋದನುತ್ಸುಕದಿಂದಂ ೨೪೬

ತ್ವರೆಯಿಂದ ಹತ್ತಿಕೊಂಡು ಬಹುವೇಗವಾಗಿ ಹೆಸರಾದ ವಿದರ್ಭದೇಶದ ತೀರವಾದ ಕುಂಡಿನಪುರದ ಮಧ್ಯದಲ್ಲಿ ರಾಜರು ಬೀಡುಬಿಟ್ಟಿದ್ದರು. ೨೪೪. ಕಣ್ಣು ಕನ್ನೈದಿಲೆ, ನಗೆಮೊಗವು ತಾವರೆ, ಮೊಲೆಗಳು ಚಕ್ರವಾಕಪಕ್ಷಿ, ಕೂದಲು ಮತ್ತೇರಿದ ತುಂಬಿ, ಆ ತುಂಬುಜಡೆ ನೀರ್ಗುದುರೆ, ತನ್ನ ಯೌವನರಸವು ಪರಿಶುದ್ಧವಾದ ನೀರಿನ ಮೇಲಿನ ದೋಣಿಗಳಂತಿರಲು, ಮನೋಹರವಾಗಿ ಮಿಗಿಲಾಗಿದ್ದ ಆ ದಮಯಂತಿಯೆಂಬ ಕಮಲ ಸರೋವರಕ್ಕೆ ಆ ರಾಜಹಂಸಸಮೂಹವು ಬಯಸದೆ ಇದ್ದೀತೆ ? ೨೪೫. ಮೀನು, ಹುಲಿ, ಸಿಂಹ, ಆನೆ, ಹಂದಿ, ಭೈರವ, ಹಾವು, ಪುಷ್ಪಬಾಣ, ಗರುಡ, ಚಂದ್ರ, ಸೂರ್ಯ, ರಾಕ್ಷಸ, ಖಡ್ಗಚಿಹ್ನೆಗಳು ಆಶ್ಚರ್ಯವನ್ನುಂಟುಮಾಡಲು ಮಹಾಧ್ವಜಪತಾಕೆಗಳಿಂದ ಒಪ್ಪುವ ಅನೇಕ ದೇಶಗಳ ನಾಯಕರು ಬಹಳ ವೇಗವಾಗಿ ಬರಲು ತರುಣಿಯ ಸ್ವಯಂವರವು ವಿರಾಜಮಾನವಾಗಿದ್ದಿತು. ವ॥ ಆ ಸಮಯದಲ್ಲಿ ೨೪೬. ಆಶ್ಚರ್ಯ ಕರವಾದ ಲೋಕಯಾತ್ರಾಗತಿಯಿಂದ ನಾರದಮುನೀಶ್ವರನು ಆ ಸುದ್ದಿಯ ಸ್ಥಿತಿಯನ್ನು ತಿಳಿದು, ಕುತೂಹಲದಿಂದ ಆ ಕೂಡಲೆ ದೇವಲೋಕಕ್ಕೆ ಸಂತೋಷದಿಂದ ತೆರಳಿದನು.

ಸುಲಲಿತ ದೇಹದೀಪ್ತಿ ರವಿಯಂ ಮಿಗಿಲಿಟ್ಟು ವಿಭೂತಿ ಮೌಂಜಿ ಮೇ
ಖಲೆಯುಪವೀತವಾಯತ ಜಟಾವಳಿ ಕೋಮಳ ಪಾದುಕಂ ಸಮು
ಜ್ವಲ ಮಹತೀವಿಪಂಚಿ ತನಗೊಪ್ಪುವ ದಿವ್ಯಮುನೀಂದ್ರ ನಾರದಂ
ಕಲಹವಿನೋದಿ ಪೊಕ್ಕನನುರಾಗದಿನಿಂದ್ರಸಭಾಂತರಾಳಮಂ ೨೪೭

ವ॥ ಆಗಳ್

ನಯನ ಸಹಸ್ರಕಾಂತಿ ಸುರಕಾಂತೆಯರ್ಗುಜ್ಜ್ವಲ ಹಾರಶೋಭೆಯಂ
ನಿಯಮಿಸೆ ವಜ್ರಕಾಂತಿ ಸುರಲೋಕದ ಮೆಯ್ವೆಳಗಂ ತೆರಳ್ಚೆ ಮೌ
ಳಿಯ ಮುಕುಟಪ್ರಭಾಪಟಳವೆಣ್ದೆಸೆಯಂ ಬೆಳಗಲ್ಕೆ ದೇಹರ
ಶ್ಮಿಯಿನಮರೇಂದ್ರನಿರ್ದನಮರಪ್ರಕೃತಿಸ್ತುತಿ ಪೊಣ್ಮಲಾವಗಂ ೨೪೮

ವ॥ ಅಂತಿರ್ದ ದಿವಿಜಪತಿ ನಾರದನಂ ಕಂಡು

ವಿಮಳಾರ್ಘ್ಯಪಾದ್ಯ ನಿಖಿಳಾ
ಚಮನೀಯಾನಂತರಂ ಸುರವ್ರತಿ ನಿನ್ನಾ
ಗಮನಂ ಕೌತುಕವೆಂದೊ
ಲ್ದಮರೇಂದ್ರಂ ಮತ್ತೆ ಯತಿಪತಿಯೊಳಿಂತೆಂದಂ ೨೪೯

ಯತಿಪತಿಯೆ ಲೋಕವಾರ್ತಾ
ಸ್ಥಿತಿಯೇನೆಂದೊಡೆ ಸುರೇಂದ್ರ ಕೇಳ್ ಸುರನಿಕರ

೨೪೭. ಮನೋಹರವಾದ ದೇಹಕಾಂತಿಯು ಸೂರ್ಯನನ್ನು ಮೀರಿಸಲು, ವಿಭೂತಿ ಧರಿಸಿ, ಸೆಣಬಿನ ನಡುಕಟ್ಟು, ಜನಿವಾರ, ವಿಸ್ತಾರವಾದ ಜಟಾಸಮೂಹ, ಕೋಮಲವಾದ ಪಾದುಕೆಗಳು, ಪ್ರಕಾಶಮಾನವಾದ ಮಹತೀ ಎಂಬ ವೀಣೆಗಳು ತನಗೆ ಶೋಭಿಸಲು, ಶ್ರೇಷ್ಠ ಮುನೀಂದ್ರನೂ ಕಲಹವಿನೋದಿಯೂ ಆದ ನಾರದನು ಇಂದ್ರಸಭಾಮಧ್ಯ ಭಾಗವನ್ನು ಪ್ರೀತಿಯಿಂದ ಪ್ರವೇಶಿಸಿದನು. ವ॥ ಆಗ ೨೪೮. ಸಾವಿರಕಣ್ಣುಗಳ ಕಾಂತಿ ಅಪ್ಸರೆಯರಿಗೆ ಉಜ್ವಲವಾದ ಹಾರಪ್ರಭೆಯನ್ನು ನಿಯಮಿಸಲು, ವಜ್ರಕಾಂತಿ ದೇವಲೋಕದ ಮೈಯ ಕಾಂತಿಯನ್ನು ಪ್ರಕಟಿಸಲು, ತಲೆಯ ಮೇಲಿನ ಕಿರೀಟದ ಪ್ರಭಾ ಸಮೂಹವು ಎಂಟು ದಿಕ್ಕುಗಳನ್ನೂ ಬೆಳಗಲು, ದೇವತೆಗಳ ಕೊಂಡಾಟವು ಸರ್ವದಾ ಹೊರಹೊಮ್ಮುತ್ತಿರಲು ದೇಹಕಾಂತಿಯಿಂದ ಕೂಡಿ ದೇವೇಂದ್ರನಿದ್ದನು. ವ॥ ಹಾಗಿದ್ದ ದೇವತೆಗಳ ಒಡೆಯನು ನಾರದನನ್ನು ನೋಡಿ, ೨೪೯. ಶ್ರೇಷ್ಠವಾದ ಅರ್ಘ್ಯಪಾದ್ಯ, ಸಮಸ್ತ ಆಚಮನೀಯಗಳಾದ ಬಳಿಕ, 'ದೇವರ್ಷಿಯೆ, ನಿನ್ನ ಬರುವಿಕೆ ಕುತೂಹಲಕಾರಿ ಯಾದುದು' ಎಂದು ಮೆಚ್ಚಿ ದೇವೇಂದ್ರನು ಪುನಃ ಯತಿಪತಿಯೊಡನೆ ಹೀಗೆಂದನು. ೨೫೦. 'ಯತಿಶ್ರೇಷ್ಠನೆ ! ಲೋಕವಾರ್ತೆಯೇನು ?' ಎಂದು ಕೇಳಲು, 'ದೇವೇಂದ್ರನೆ

ಶ್ರುತಿಪೂರವೆನಿಪ ವಾರ್ತೆಯ
ನತಿಶಯಮಂ ಪೇಟ್ವೆವೆಂದು ಮುನಿಯಿಂತೆಂದಂ ೨೫೦

ಧರಣಿಯೊಳೊಂದಪೂರ್ವತರ ವಾರ್ತೆ ವಿದರ್ಭತನೂಜೆ ಲೋಕಸುಂ
ದರಿ ದಮಯಂತಿಯಾಕೆಗೆ ಮನೋಮುದವಪ್ಪಿನೆಗಂ ನಿಜಸ್ವಯಂ
ವರಮೆನಲಾರ್ತು ಕೇಳ್ದು ಸಕಲಾವನಿಯೊಪ್ಪುವ ಭೂಪರೆಯ್ದೆ ಕ
ವ್ವರೆ ಮಿಗೆ ಕುಂಡಿನಾಪುರಕೆ ಬಂದುದು ಸಂಪದದೇಳ್ಗೆ ಕೈಮಿಗಲ್ ೨೫೧

ಆಕೆ ನಳನಲ್ಲದುಳಿದರ
ನೇಕಾಂತದೊಳಂ ವಿಚಾರಿಸಲ್ ಪಡೆವಳೆ
ನಾಕೆಗೆ ನಳನಲ್ಲದೆ ಭೂ
ಲೋಕದೊಳಧಿಪತಿಗಳಿಲ್ಲವೆಂಬುದು ಪುಸಿಯೇ ೨೫೨

ವ॥ ಎಂಬ ಮಾತಂ ಕೇಳ್ದು

ಅಮರೇಂದ್ರಂ ವಹ್ನಿ ಕಾಲಂ ವರುಣನಿನಿಬರುಂ ಭೂಮಿಯೊಳ್ ಚೆಲ್ವೆಯಪ್ಪಳ್
ದಮಯಂತೀನಾಮಮುಳ್ಳಂಗನೆ ನಳನಧಿಪಂ ಮಿಕ್ಕರೇಬಾಬಿತ್ತಿಯೆಂಬು
ತ್ತಮಸತ್ತ್ವಂ ವ್ಯರ್ಥವಪ್ಪಂತೆಸಗುವೆವೆನುತಂ ಧಾತ್ರಿಗೆಯ್ತಂದು ಚಿತ್ತ
ಭ್ರಮೆಯಿಂ ವೈದರ್ಭಭೂಪಾಲನ ನಗರಿಯ ವರ್ಗಕ್ಕೆ ಮುಂಕೊಂಡರಾಗಳ್ ೨೫೩

ಕೇಳು, ದೇವಸಮೂಹವು ಪೂರ್ಣವಾಗಿ ಆಲಿಸುವಂತಹ ವಿಚಾರವನ್ನೂ, ಅತಿಶಯವಾದುದನ್ನೂ ಹೇಳುವೆವು' ಎಂದು ಮುನಿಯು ಹೀಗೆ ಹೇಳಿದನು. ೨೫೧. ಭೂಮಂಡಲದಲ್ಲಿ ಒಂದು ಅಪೂರ್ವರೀತಿಯಾದ ಸುದ್ದಿ (ಹಬ್ಬಿದೆ). ವಿದರ್ಭದೇಶದ ರಾಜನ ಮಗಳಾದ ದಮಯಂತಿ ಲೋಕಸುಂದರಿ. ಆಕೆಗೆ ಮನಃಸಂತೋಷವಾಗುವಂತೆ ಸ್ವಯಂವರವೆನ್ನಲು, ಮೇಲೆ ಬಿದ್ದು ಕೇಳಿ, ಸಮಸ್ತ ಭೂಮಂಡಲದಲ್ಲಿ ಒಪ್ಪುವಂತಹ ಮಹಾರಾಜರೆಲ್ಲ, ಸಂಪತ್ತಿನ ಮೇಲ್ಮೆ ಮೀರೆ ಮೀರುವಂತೆ ಕಿಕ್ಕಿರಿದರೋ ಎಂಬಂತೆ ಕುಂಡಿನಪುರಕ್ಕೆ ಬಂದಿರುವರು. ೨೫೨. ಆಕೆ ನಳನನ್ನು ಹೊರತು ಉಳಿದವರನ್ನು ಏಕಾಂತದಲ್ಲಿಯೂ ಆಲೋಚಿಸತಕ್ಕವಳಲ್ಲ. ಇನ್ನು ಹೇಳುವುದಾದರೂ ಏನು ? ಆಕೆಗೆ ನಳನನ್ನು ಬಿಟ್ಟು ಭೂಲೋಕದಲ್ಲಿ ರಾಜರಿಲ್ಲವೆನ್ನುವುದು ಸುಳ್ಳಾದೀತೆ ? ವ॥ ಎನ್ನುವ ಮಾತನ್ನು ಕೇಳಿ, ೨೫೩. ದಮಯಂತಿಯೆಂಬ ಹೆಸರುಳ್ಳ ಹೆಂಗಸು ಭೂಮಂಡಲದಲ್ಲಿ ಚೆಲುವೆಯೆನ್ನಿಸಿರುವಳು; ನಳನೋ ಮಹಾರಾಜ ; ಉಳಿದವರೆಲ್ಲ ಏನು ಪ್ರಯೋಜನ ?' ಎಂಬ ಉತ್ತಮ ಪೌರುಷವು ವ್ಯರ್ಥವಾಗುವಂತೆ ಮಾಡುವೆವು ಎಂಬುದಾಗಿ ದೇವೇಂದ್ರ, ಅಗ್ನಿ, ಯಮ, ವರುಣ ಇವರೇ ಮೊದಲಾದವರು ಭೂಮಿಗೆ ಹೊರಟುಬಂದು, ಚಿತ್ತಭ್ರಾಂತಿಯಿಂದ ಆಗ

ಸುರರೂಪಂ ಮಾಣ್ದಾಗಳ್
ನರರೂಪಂ ತಾಳ್ದಿ ವರಿಸೆ ಬಂದರ್ ನಾಲ್ವರ್
ಸುರಪ ಶಿಖಿ ಕಾಲ ವರುಣರ್
ತರುಣಿಯ ಭದ್ರಸ್ವಯಂವರಕ್ಕನುನಯದಿಂ ೨೫೪

ವ॥ ಅಂತು ಬರ್ಪಾಗಳ್

ಕಾಮನ ರೂಪು ಕೈತವವಿದೇ ನಿಜವೆಂಬವೊಲೂರ್ಜಿತ ಪ್ರಭಾ
ಕೋಮಳದೇಹನುನ್ನತಭುಜಂ ಕಮನೀಯವಿಶಾಳನೇತ್ರನು
ದ್ದಾಮ ಪರಾಕ್ರಮಂ ಸಹಜಧೈರ್ಯನನೇಕ ಶರೀರರಕ್ಷಣಂ
ಭೂಮಿಗೆ ಚೋದ್ಯನೆಂಬ ನಳನಂ ದಿವಿಜರ್ ಮಿಗೆ ಕಂಡರಧ್ವದೊಳ್ ೨೫೫

ವ॥ ಅಂತು ಕಂಡು

ನಳನೀತಂತಪ್ಪುದಂತಲ್ಲದೊಡವಯವ ಸಲ್ಲಕ್ಷಣಂ ಮಿಕ್ಕ ಭೂಪ
ರ್ಗೊಳವೇ ನಾವೀತನಂ ಭೂತಿಯೊಳನವರತಂ ದೂತನಂ ಮಾಟ್ಪೆವೆಂದಾ
ಗಳುದಾತ್ತರ್ ತಮ್ಮ ರೂಪಂ ಪ್ರಕಟಿಸಲೊಡನೆಟ್ಟಿಂದು ತದ್ಭೂಪನಂ ಮೆ
ಯ್ವಳಿಯಿಂ ಮಾತಾಡಿಸುತ್ತೊಯ್ಯನೆ ಸಹಜಶರೀರಂಗಳಂ ತಾಳ್ದಿ ನಿಂದರ್ ೨೫೬

ವೈಧರ್ಭಮಹಾರಾಜನ ಪಟ್ಟಣಾಭಿಮುಖವಾದರು. ೨೫೪. ದೇವೇಂದ್ರ, ಅಗ್ನಿ, ಯಮ ಮತ್ತು ವರುಣನೆಂಬ ನಾಲ್ವರು, ದೇವತೆಗಳ ರೂಪವನ್ನು ಮರೆಮಾಚಿ, ಆಗ ನರರೂಪವನ್ನು ತಳೆದು, ತರುಣಿಯ ಮಂಗಳ ಸ್ವಯಂವರಕ್ಕೆ ಪ್ರೀತಿಯಿಂದ ಆಗಮಿಸಿದರು. ವ॥ ಹಾಗೆ ಬರುವಲ್ಲಿ. ೨೫೫. ಮನ್ಮಥನ ಸ್ವರೂಪವಾದರೋ ಮೋಸ ; ಇದೇ ನಿಜವೆಂಬಂತೆ ಪುಷ್ಟಿಕರವೂ, ಪ್ರಕಾಶವೂ, ಕೋಮಲವೂ ಆದ ದೇಹವುಳ್ಳವನೂ, ಉನ್ನತವಾದ ಭುಜವುಳ್ಳವನೂ, ಸುಂದರವೂ ವಿಸ್ತಾರವೂ ಆದ ಕಣ್ಣುಳ್ಳವನೂ, ವಿಶಿಷ್ಟವಾದ ಪರಾಕ್ರಮವುಳ್ಳವನೂ, ಸ್ವಾಭಾವಿಕ ಧೈರ್ಯಶಾಲಿಯೂ, ಅನೇಕ ಶರೀರರಕ್ಷಣನೂ, ಭೂಮಂಡಲಕ್ಕೆ ಆಶ್ಚರ್ಯಕರನೂ ಎಂಬಂತಹ ನಳನನ್ನು ದೇವತೆಗಳು ದಾರಿಯಲ್ಲಿಯೇ ಕಂಡರು. ವ॥ ಹಾಗೆ ನೋಡಿ, ೨೫೬. ಈತನೇ ನಳನು, ತಪ್ಪದು. ಹಾಗಲ್ಲದಿದ್ದಲ್ಲಿ ಅಂಗಾಂಗಗಳಲ್ಲಿ ಈ ಸಲ್ಲಕ್ಷಣವು ಉಳಿದ ಮಹಾರಾಜರಿಗೆ ಸಾಧ್ಯವೇ ? ನಾವು ಈತನನ್ನು ತಪ್ಪದೆ ಮಹಿಮಾವಂತ ಅಭ್ಯುದಯುನಾದ ಸೇವಕನನ್ನಾಗಿ ಮಾಡುವೆವೆಂದು ಆಗ ಉದಾತ್ತರಾದ (ದೇವತೆಗಳು) ತಮ್ಮ ನೈಜರೂಪವನ್ನು ಪ್ರಕಟಿಸಲೆಂದು, ಕೂಡಲೆ ಬಂದು ಆ ರಾಜನನ್ನು ಅನುಸರಿಸಿ. ಮಾತಾಡಿಸುತ್ತ ತಕ್ಷಣವೇ ತಮ್ಮ ಶರೀರಗಳನ್ನು ಧರಿಸಿ

ವ॥ ಆದೆಂತೆನೆ

ಮಕುಟಂ ಕುಂಡಲವಂಗದಂ ಸುರಗಜಂ ವಜ್ರಾಯುಧಂ ರತ್ನಮು
ದ್ರಿಕೆ ನಾನಾಭರಣಂ ಸಹಸ್ರ ನಯನಂ ದಿವ್ಯಾಂಬರಂ ಕಣ್ಗೆ ಕೌ
ತುಕಮಾಗಲ್ ನವಪಾರಿಜಾತ ಸುಮನಸ್ಸೌರಭ್ಯಮಾಲಾಗಣಂ
ಪ್ರಕಟಂಬೆತ್ತಿರಲುರ್ವಿಪಂಗೆ ಸುರಪಂ ಶ್ರೀಮೂರ್ತಿಯಂ ತೋಱಿದಂ ೨೫೭

ಧೂಮಪತಾಕೆ ಮುದ್ಗರವತೀವ ಭಯಂಕರ ಸಪ್ತಜಿಹ್ವೆಗಳ್
ಕೋಮಳಮೇಷವಾಹನನುದಗ್ರಮುಖತ್ರಯಮೊಪ್ಪೆ ಸಂತತಂ
ಹೇಮನಿಭಾಂಗನಾದನಲನಿಂದ್ರಸಮೀಪದೊಳಿರ್ದನುಗ್ರತೇ
ಜೋಮಯಮೂರ್ತಿ ಭೂಷಣವಿಭೂಷಿತನಾಗಿ ಮನೋನುರಾಗದಿಂ ೨೫೮

ಅಸಿತತನು ಕಾಲದಂಡಂ
ಮಿಸುಗುವ ಮಹಿಷಾಧಿಪತಿಯ ವಾಹನವತಿಸಾ
ಹಸವೊಪ್ಪುವಂತಕಂ ತ
ನ್ನಸದೃಶಮೂರ್ತಿಯನಲಂಪಿನಿಂ ತೋಱಿಸಿದಂ ೨೫೯

ಪುರುಮೀನವಾಹನಂ ನಿ
ಷ್ಠುರಪಾಶಂ ವಿಮಳದೇಹವೊಪ್ಪುವ ವರುಣಂ

ನಿಂತರು. ವ॥ ಅದು ಹೇಗೆಂದರೆ. ೨೫೭. ಕಿರೀಟ, ಕರ್ಣಕುಂಡಲ, ಅಂಗದ (ಕಡಗ), ಐರಾವತ, ವಜ್ರಾಯುಧ, ರತ್ನದುಂಗುರ, ನಾನಾ ಆಭರಣಗಳು, ಸಹಸ್ರ ಕಣ್ಣುಗಳು, ಶ್ರೇಷ್ಠವಾದ ಬಟ್ಟೆ (ಮೊದಲಾದವು) ಕಣ್ಣಿಗೆ ಬೆರಗನ್ನುಂಟುಮಾಡಲು, ನೂತನ ಪಾರಿಜಾತಪುಷ್ಪವಾಸನೆಯುಳ್ಳ ಮಾಲಾಸಮೂಹವು ತೋರಿಬರಲು, ದೇವೇಂದ್ರನು ಸಂಪದ್ಯುಕ್ತವಾದ ಸ್ವರೂಪವನ್ನು ಮಹಾರಾಜನಿಗೆ ಪ್ರಕಟಪಡಿಸಿದನು. ೨೫೮. ಹೊಗೆಯ ಬಾವುಟ, ಬಲವಾದ ಬಡಿಗೆ, ತುಂಬ ಭಯಂಕರವಾದ ಏಳು ನಾಲಿಗೆಗಳು, ಎಳೆಯದಾದ ಆಡಿನವಾಹನ, ಉನ್ನತವಾದ ಮೂರು ಮುಖಗಳು ಒಪ್ಪುವಂತಿರಲು, ಸರ್ವದಾ ಬಂಗಾರದಂತಹ ದೇಹವುಳ್ಳ ಅಗ್ನಿಯು ಭಯಂಕರವಾದ ತೇಜೋಮಯಸ್ವರೂಪನಾಗಿ ಆಭರಣಗಳಿಂದ ಶೋಭಿತನಾಗಿ ಮನಃಪೂರ್ವಕವಾದ ಪ್ರೀತಿಯಿಂದ ಇಂದ್ರನ ಸಮೀಪದಲ್ಲಿದ್ದನು. ೨೫೯. ಕಪ್ಪಾದ ದೇಹ, ಕಾಲದಂಡ, ಪ್ರಕಾಶಿಸುವ ಪ್ರಮುಖವಾದ ಕೋಣನವಾಹನ, ಬಹಳ ಸಾಹಸಗಳಿಂದ ಒಪ್ಪುವ ಯಮನು ತನ್ನ ಅಸಮಾನವಾದ ಸ್ವರೂಪವನ್ನು ವೈಭವದಿಂದ ತೋರಿಸಿದನು. ೨೬೦. ಚಿನ್ನದಂತಹ ಮೀನಿನವಾಹನ,

ಸುರುಚಿರ ಮೂರ್ತಿಯೊಳಿರ್ದಂ
ಧರಣೀಶಂ ಬೆಱಗುವುತ್ತು ನೋೞ್ಪನ್ನೆವರಂ ೨೮೦

ವ॥ ಅಂತಿರ್ದರಂ ನಳಂ ಕಂಡು
ಅಮರೇಂದ್ರಾಗ್ನಿ ಯಮಾಂಬುಪ
ನಿಮಗೇನಂ ಮಾೞ್ಪೆನೆಂದು ನರಪತಿ ಕೇಳಲ್
ಕ್ರಮದಿಂ ನೀನೆಮಗೊಂದು
ತ್ತಮಕಾರ್ಯವನೆಸಗು ಕೇಳದಂ ಭೂಪಾಲಾ ೨೮೧

ನಿನ್ನ ಪರೋಪಕಾರಗುಣಮಂ ನಯಮಾರ್ಗವನತ್ಯುದಾರಸಂ
ಪನ್ನತೆಯುಂ ಮದೀಯ ಸುರಲೋಕದೊಳದ್ಭುತವಾಗಿ ಕೇಳ್ದು ಸ
ತ್ಸನ್ನಿಧಿಗಿಂದು ಬಂದೆವೆಮಗುತ್ತಮವಾದ ಪದಾರ್ಥವೊಂದನೀ
ವುನ್ನತಕಾರ್ಯಮಂ ನೆನೆವುದೆಂದಮರರ್ ನುಡಿದರ್ ನೃಪಾಲನೊಳ್ ೨೮೨

ವ॥ ಅದಾವುದೆನೆ
ವನಿತಾಲೋಕದೊಳತ್ಯಪೂರ್ವಮೆನಿಸಲ್ ಸಾರ್ದಿರ್ದ ವೈದರ್ಭನಂ
ದನೆಯಂಬಳ್ ದಮಯಂತಿಯಾಕೆಯನಲಂಪಿಂದಿತ್ತು ಮತ್ಪ್ರೇಮವ
ರ್ಧನಮಂ ಮಾೞ್ಪುದು ನೀನೆನುತ್ತ ದಿವಿಜರ್ ಪೇೞಲ್ಕೆ ನಕ್ಕಂ ನೃಪಾ
ಲನದೆನ್ನಿಚ್ಛೆಯೆ ಲೋಕರತ್ನವನದಂ ತಾನೀಯಲೇಂ ಬಕ್ಕುಮೇ ೨೮೩

ಕಠಿನವಾದ ಪಾಶ, ಪವಿತ್ರವಾದ ಶರೀರಗಳಿಂದ ಒಪ್ಪುವ ವರುಣನು, ಮಹಾರಾಜನು ಆಶ್ಚರ್ಯಚಕಿತನಾಗಿ ನೋಡುವಂತೆ ಕಾಂತಿಯುಕ್ತವಾದ ಸ್ವರೂಪದಿಂದ ಇದ್ದನು. ವ॥ ಹಾಗಿದ್ದವರನ್ನು ನಳನು ನೋಡಿ, ೨೮೧. ದೇವೇಂದ್ರ, ಅಗ್ನಿ, ಯಮ, ವರುಣರೆ ! ನಿಮಗೆ (ನಾನು) ಏನು ಮಾಡಲಿ ಎಂಬುದಾಗಿ ಮಹಾರಾಜನು ಬಿನ್ನವಿಸಲು, ಅವರು ಸರದಿಯ ಮೇರೆಗೆ, ಎಲೈ ಮಹಾರಾಜನೆ, ನೀನು ನಮಗಾಗಿ ಒಂದು ಒಳ್ಳೆಯ ಕೆಲಸವನ್ನು ಮಾಡು. ಅದನ್ನು ಹೇಳುವೆವು ಕೇಳು (ಎಂದರು). ೨೮೨. ನಿನ್ನ ಪರೋಪಕಾರ ಸ್ವಭಾವವನ್ನೂ, ವಿನಯದ ರೀತಿಯನ್ನೂ, ಅತ್ಯಂತ ಉದಾರವಾದ ಸಂಪತ್ತನ್ನೂ, ನಮ್ಮ ದೇವಲೋಕದಲ್ಲಿ ಆಶ್ಚರ್ಯದಿಂದ ಕೇಳಿ ಸಜ್ಜನನಾದ ನಿನ್ನ ಬಳಿಗೆ ಬಂದೆವು. ಶ್ರೇಷ್ಠವಾದ ವಸ್ತುವೊಂದನ್ನು 'ನಮಗೆ ಉನ್ನತ ಕಾರ್ಯವನ್ನು ನೆನೆ' ಎಂದು ದೇವತೆಗಳು ಬಿನ್ನವಿಸಿಕೊಂಡರು. ವ॥ ಅದು ಯಾವುದು ಎನ್ನಲು ೨೮೩. ಸ್ತ್ರೀಪ್ರಪಂಚದಲ್ಲಿಯೇ ಅತ್ಯಂತ ಅಪೂರ್ವವೆನ್ನಿಸಿ ಉದಿಸಿರುವ ವಿದರ್ಭನ ಮಗಳಾದ ದಮಯಂತಿ ಎಂಬಾಕೆಯನ್ನು ಪ್ರೀತಿಯಿಂದ ದೊರಕಿಸಿಕೊಟ್ಟು, ನಮ್ಮ ಪ್ರೇಮವು ಬೆಳೆಯುವಂತೆ ಮಾಡತಕ್ಕದು ಎಂಬುದಾಗಿ ದೇವತೆಗಳು ಹೇಳಲು, ಮಹಾರಾಜನು ನಕ್ಕು, ಅದು ನನ್ನ ಇಚ್ಛೆಯೆ ? ಲೋಕರತ್ನವಾದ ಅದನ್ನು ನಾನು ನೀಡಲು ಬರುತ್ತದೆಯೇ (ಎಂದನು).

ವ॥ ಅದಕ್ಕಮರ್ತ್ಯರ್ ತಮ್ಮೊಳ್

ಶಾತೋದರಿ ಬಯಸುವ ನಳ
ನೀತಂ ತಾಂ ದೂತನಾಗಿ ಪೋದೊಡೆ ತತ್ಕಂ
ತಾತತಿಯಿವನೆಲ್ಲಿಯನೆಂ
ದೇತೆಱದಿಂ ನೀಚನಾಗಿಪರ್ ನಸುನಗುತಂ ೨೬೪

ಆದೊಡೆಮಗೊಂದು ಕಾರ್ಯಮ
ಹೋದಯಮಂ ಮಾಳ್ಪುದಾಕೆಯೆಮ್ಮಂ ವರಿಪಂ
ತಾದರದಿಂ ನೀಂ ಪೋಗಿ ಮ
ನೋದುರ್ಘಟಕಾರ್ಯವೆನ್ನದೆಲೆ ಭೂಪಾಲಾ ೨೬೫

ಅದನೇಗೆಯ್ದವನಿಪನಾಂ
ಸುದತಿಯನೀಕ್ಷಿಸುವುಪಾಯಮೆಂತೆನಲವಳ
ಲ್ಲದೆ ಮಿಕ್ಕ ಪುರುಷತತಿ ಕಾ
ಣದ ವಿದ್ಯೆಯನಿತ್ತೆವೆಂದು ಕಳುಪಿದರಾಗಳ್ ೨೬೬

ಆ ನೃಪನಱಿಯದ ತೆಱದಿಂ
ಮಾನಿನಿಯೊರ್ವಳನತೀವ ಸೂಕ್ಷ್ಮಾಕೃತಿಯಿಂ
ನೀನೊಡನಿರೆಂದು ಕಳುಪಿದ
ನೇನಂ ಪೇೞ್ದಪ್ಪನೆಂದು ದಿವಿಜಾಧೀಶಂ ೨೬೭

ವ॥ ಅದಕ್ಕೆ ದೇವತೆಗಳು ತಮ್ಮತಮ್ಮಲ್ಲಿಯೇ ೨೬೪. ತಳೋದರಿ ಬಯಸುವ ಈ ನಳನು ದೂತನಾಗಿ ಹೋದದ್ದೇ ಆದರೆ, ಆ ಹೆಂಗಸರ ಸಮೂಹವು ಇವನೆಲ್ಲಿಯವನು ಎಂಬುದಾಗಿ ಹೇಗಾದರೂ ನಗುನಗುತ್ತ ನೀಚನನ್ನಾಗಿ ಕಾಣುವರು. ೨೬೫. ಹಾಗಾದರೆ ನಮಗೊಂದು ಮಹತ್ತರವಾದ ಕೆಲಸವನ್ನು ಮಾಡಿಕೊಡು, ಎಲೈ ರಾಜನೆ ! ಮನಸ್ಸಿಗೆ ಅಸಂಭವವಾದ ಕೆಲಸವೆನ್ನದೆ, ಆಕೆ ನಮ್ಮನ್ನು ವರಿಸುವಂತೆ ಪ್ರೀತಿಯಿಂದ ಮಾಡು, ನೀನು ಹೋಗಿ ಬಾ (ಎಂದರು). ೨೬೬. ಮಹಾರಾಜನು ಅದನ್ನು ಮಾಡಿಕೊಡಲು ಒಪ್ಪಿ 'ನಾನು ಹೆಂಗಸನ್ನು ನೋಡುವ ಉಪಾಯವಾದರೂ ಏನು ?' ಎನ್ನಲು, ಅವಳನ್ನು ಹೊರತು ಉಳಿದ ಗಂಡಸರು ನೋಡಲಾಗದ ವಿದ್ಯೆಯನ್ನು ನೀಡಿರುವೆವು' ಎಂದು(ಹೇಳಿ) ಆಗ ಕಳುಹಿಸಿಕೊಟ್ಟರು. ೨೬೭. (ನಳನು) ಏನು ಹೇಳುವನೋ ಎಂದು, ಆ ರಾಜನು ತಿಳಿಯದಂತೆ, ಅತ್ಯಂತ ಸೂಕ್ಷ್ಮಾಕೃತಿಯನ್ನು ತಳೆದ ಒಬ್ಬ ಹೆಂಗಸನ್ನು ಒಡನೆಯೇ ಇರು

ಭಾವಿಸಿ ತನ್ನ ದೇಹಸುಖವೇತಜಿದೆಂದು ಪರೋಪಕಾರವಂ
ಕೋವಿದವೃತ್ತಿಯಿಂದೆಸಗದಿರ್ಪನ ಜೀವನವೇನು ಬಂದವರ್
ಕೇವಳರಲ್ತು ನಾಲ್ವರವರೆಂದುದ ಗೆಯ್ದಪೆನೆಂದು ಭೂಭುಜಂ
ಭಾವಕಿ ಭೀಮನಂದನೆಯ ತಾಣಮನೊರ್ವನೆ ಕೂರ್ವಿಗೆಯ್ದಿದಂ ೨೧೮

ನಯನಪ್ರೀತಿಯನಪ್ಪುಗೆಯ್ವ ತನುವಂ ಪ್ರಾಣಾನಿಳಂ ಪೊಕ್ಕು ಚೇ
ಷ್ಟೆಯನೀವಂತವನೀಶ್ವರಂ ಪುರುಷರಾರುಂ ಕಾಣದಂತಂಗನಾ
ಚಯವಿರ್ದಲ್ಲಿಗೆ ಪೋಂಕನೆಯ್ದಿ ವಿಲಸತ್ತೇಜೋಮಯಂ ಪದ್ಮಿನೀ
ಪ್ರಿಯನೆಂಬೊಂದು ವಿಳಾಸದಿಂ ನೆಲಸಿದಂ ಶೃಂಗಾರರಂಗಸ್ಥಳಂ ೨೧೯

ದಮಯಂತೀವಿರಹಪ್ರಶಾಂತಿಗೆ ಮೃಣಾಳಂ ತಾಳವೃಂತಂ ಕನ
ತ್ಕಮಳಂ ಕೋಮಳ ಪಲ್ಲವಾಸ್ತರಣಮಂಭಃಕುಂಭವಾಮೋದ ನಿ
ರ್ಗಮ ಮಾಲಾವಳಿ ತೀವಿ ಕಣ್ಗೆ ಸೊಗಸಿರ್ಪಂತಃಪುರಂ ಚಿತ್ತಜಾ
ತಮನಃಕೌತುಕಮಾಗಿರಲ್ ನಳನೃಪಂ ಕಂಡಂ ಕಥಾಶ್ಚರ್ಯಮಂ ೨೨೦

ರವಿಬಿಂಬದ್ಯುತಿ ಮೂರ್ತಿವೆತ್ತ ತೆಱದಿಂ ತೇಜೋಮಯಂ ಪೂರ್ಣವೈ
ಭವನುತ್ಕೀರ್ಣ ಪರೋಪಕಾರನಿರತಂ ಕಾರುಣ್ಯವಾರಾಶಿ ಭೂ

ವಂತೆ ಇಂದ್ರನು ಕಳುಹಿಸಿಕೊಟ್ಟನು. ೨೧೮. ತನ್ನ ಸುಖ ಎಷ್ಟರದೆಂದು ಭಾವಿಸಿ ಇತರರಿಗೆ ಉಪಕಾರವನ್ನು ನೈಪುಣ್ಯಾನುಸಾರವಾಗಿ ಮಾಡದಂತಿರುವವನ ಬದುಕಾದರೂ, ಏನು ? ಬಂದವರಾದರೋ ಸಾಮಾನ್ಯರಲ್ಲ. ಆ ನಾಲ್ವರು ಹೇಳಿದುದನ್ನು ಮಾಡುವೆನೆಂಬುದಾಗಿ ಮಹಾರಾಜನು ಭಾವಕಿಯಾದ ಭೀಮಕುಮಾರಿಯಿದ್ದ ಸ್ಥಾನವನ್ನು (ಕುರಿತು) ಒಬ್ಬನೇ ಪ್ರೀತಿಯಿಂದ ಹೊರಟನು. ೨೧೯. ಕಣ್ಣಿಗೆ ಪ್ರೀತಿಯನ್ನುಂಟು ಮಾಡುವ ಶರೀರವನ್ನು ಪ್ರಾಣವಾಯುವು ಪ್ರವೇಶಿಸಿ ಚೈತನ್ಯವನ್ನು ನೀಡುವಂತೆ, ಮಹಾರಾಜನು ಯಾವ ಪುರುಷರೂ ಕಾಣದಂತೆ ಹೆಂಗಸರ ತಂಡವಿದ್ದಲ್ಲಿಗೆ ಕೂಡಲೇ ಪ್ರವೇಶಿಸಿ ಉಜ್ವಲ ಪ್ರಕಾಶಮಾನನಾದ ಸೂರ್ಯನೆನ್ನುವ ವಿಳಾಸದಿಂದ ಶೃಂಗಾರರಂಗ ಪ್ರದೇಶದಲ್ಲಿ ನೆಲಸಿದನು. ೨೨೦. ದಮಯಂತಿಯ ವಿರಹಶಮನಕ್ಕೆ ತಾವರೆಯ ದಂಟು, ತಾಳೆಗರಿಯ ಬೀಸಣಿಗೆ, ಹೊಳೆಯುವ ಕಮಲ, ಎಳೆಯದಾದ ಚಿಗುರಿನ ಹಾಸಿಗೆ, ನೀರಿನ ಕುಂಭಗಳು, ಸುವಾಸನೆಯನ್ನು ಹೊರಸೂಸುವ ಹೂವಿನ ಹಾರಗಳು, ಸಮೃದ್ಧಿಯಾಗಿದ್ದು ಕಣ್ಣಿಗೆ ಆನಂದವನ್ನು ಉಂಟುಮಾಡುವ ಅಂತಃಪುರವು ಮನ್ಮಥನ ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡಲು, ಆ ಕಥೆಯ ಆಶ್ಚರ್ಯವನ್ನು ನಳಮಹಾರಾಜನು ನೋಡಿದನು. ೨೨೧. ಸೂರ್ಯಬಿಂಬದ ಕಾಂತಿ ಆಕಾರ ತಾಳಿದ ರೀತಿಯಲ್ಲಿ ಪ್ರಕಾಶಮಾನನೂ, ಪೂರ್ಣ ವೈಭವಶಾಲಿಯೂ, ಅಮಿತವಾದ ಪರೋಪಕಾರಾಸಕ್ತನೂ, ದಯಾಸಮುದ್ರನೂ,

ಭುವನೈಕಪ್ರಭು ಮಂಗಲಾಂಗಜನಿಭಂ ಸೌಭಾಗ್ಯಸಂಕ್ರಂದನಂ
ಯುವರಾಜಂ ದಮಯಂತಿಕಾಂತೆಯಿದಿರೊಳ್ ನಿಂದಿರ್ದನಂದಾಕ್ಷಣಂ ೨೭೧

ವಿರಹವಿಷಾದವಗ್ಗಲಿಸೆ ಕಂದಿದ ಮೆಯ್ ಕುಸುಮಾಸ್ತ್ರತಾಪದಿಂ
ಕೊರಗಿದ ವಕ್ತ್ರಪದ್ಮವಧಿನಾಥನ ಕಾಂಕ್ಷೆಯಿನಾದ ಚಿಂತೆಯಾ
ವರಿಸಿದ ಚಿತ್ತವೊಪ್ಪುವರುಣಾಧರೆ ನೀರಜನೇತ್ರೆ ಸತ್ಪಯೋ
ಧರೆ ದಮಯಂತಿ ರೂಪವತಿ ಭೋಂಕನೆ ಕಂಡಳಿಳಾಧಿನಾಥನಂ ೨೭೨

ನೃಪನಂ ಭೋಂಕನೆ ಕಂಡು ಕ್ಷ್ಮಾನ್ತೆ ಕುಚದೊಳ್ ಸಂವ್ಯಾನಮಂ ಸೈತು ಸಾ
ರ್ಚಿ ಪದಂ ಕಂಪಿಸಲೆರ್ದು ನಿಂದು ವಿನಮಲ್ಲಜ್ಜಾಂಗಿ ವಾರಾಂಗನಾ
ಲಪನಾಲೋಕನದಿಂ ಸುಖಾಸನಮನೀಯಲ್ ಪೇಳ್ದು ಮೇಲ್ನೋಟದಿಂ
ದುಪಚಾರಂಗಳನೆಲ್ಲಮಂ ಮಱೆದು ಚಿತ್ರಾಕಾರಮಂ ತಾಳ್ದಿದಳ್ ೨೭೩

ಎತ್ತಣ ಭೀತಿಯೆಂಬಯಡೆಗೊಳ್ಳದೆ ಕಾವರಿಸುತ್ತಮಿರ್ಪ ಮ
ಚ್ಚಿತ್ತದೊಳೀತನಾತ್ಮಪತಿಯೆಂಬವೊಲಿರ್ದಪುದಾದೊಡಂ ನೃಪಾ
ಲೋತ್ತಮನಿಲ್ಲಿಗೇತೆಱದಿನೆಯ್ತರಲಾದುದು ನಿಮ್ಮ ನಾಮವೇಂ
ಮತ್ತಿನ ಕಾರ್ಯಮಂ ಬೆಸಸಿಮೆಂದುಱೆ ಪೇಟ್ ತರಳಾಯತೇಕ್ಷಣೇ ೨೭೪

ಪ್ರಪಂಚಕ್ಕೆ ಏಕಮಾತ್ರ ಒಡೆಯನೂ, ಶುಭಮನ್ಮಥಸದೃಶನೂ, ಸಂಪತ್ತಿಗೆ ಇಂದ್ರನಂತಿರುವವನೂ ಆದ ಯುವರಾಜನು ದಮಯಂತಿ ಸ್ತ್ರೀಸಮ್ಮುಖದಲ್ಲಿ ಆಕ್ಷಣದಲ್ಲಿ ಅಂದು ನಿಂತಿದ್ದನು. ೨೭೨. ಅಗಲಿಕೆಯ ದುಃಖವು ಹೆಚ್ಚಾಗಲು ಕೃಶವಾದ ಶರೀರ, ಪುಷ್ಪಬಾಣದ ಸಂಕಟದಿಂದ ಕೊರಗಿದ ಪದ್ಮಮುಖ, ಒಡೆಯನ ಆಕಾಂಕ್ಷೆಯಿಂದ ಉಂಟಾದ ಚಿಂತೆ ಆವರಿಸಿದ ಮನಸ್ಸುಗಳಿಂದ ಒಪ್ಪುವ ಕೆಂದುಟಿಯುಳ್ಳವಳೂ, ತಾವರೆಯಂತಹ ಕಣ್ಣುಳ್ಳವಳೂ, ತುಂಬುಮೊಲೆಯುಳ್ಳವಳೂ, ರೂಪವತಿಯೂ ಆದ . ದಮಯಂತಿ ಮಹಾರಾಜನನ್ನು ಕೂಡಲೆ ಕಂಡಳು. ೨೭೩. ಕಾಂತೆ ಮಹಾರಾಜನನ್ನು ಕೂಡಲೆ ನೋಡಿ, ಮೊಲೆಯ ಮೇಲೆ ಸೆರಗನ್ನು ಮರೆಮಾಡಿಕೊಂಡು, ಹತ್ತಿರಬಂದು, ಕಾಲುಗಳು ನಡುಗಲು, ಎದ್ದು ನಿಂತು, ನಾಚಿಕೆಯಿಂದ ತಲೆತಗ್ಗಿಸಿ, ವೇಶ್ಯೆಯಂತೆ ಬಿನ್ನಾಣದಿಂದ ಮಾತಾಡಿ ನೋಡುತ್ತ...ಸುಖಾಸನವನ್ನು ಕೊಡುವಂತೆ (ಸಖಿಗೆ) ಹೇಳಿ, ಮೇಲೆ ದೃಷ್ಟಿ ಬೀರಿ, ಉಪಚರಿಸುವುದನ್ನೆಲ್ಲ ಮರೆತು, ಚಿತ್ರಾರ್ಪಿತಳಂತೆ ಇದ್ದಳು (ಚಿತ್ರಸ್ವರೂಪವನ್ನು ತಾಳಿದಳು.). ೨೭೪. ಎಲ್ಲಿಯ ಭಯವೆಂದು ಅವಕಾಶಕ್ಕೆ ಆಸ್ಪದವೀಯದೆ ಕಾತರಿಸುತ್ತಿದ್ದ ನನ್ನ ಮನಸ್ಸಿನಲ್ಲಿ ಈತನು ಆತ್ಮಪತಿಯೆಂಬಂತೆ ಇರುವನು. ಆದರೂ, ಎಲೈ ಚಂಚಲಾಕ್ಷಿಯೆ, ನೃಪಶ್ರೇಷ್ಠನು ಇಲ್ಲಿಗೆ ಯಾವ ರೀತಿ ಬರಲಾಯಿತು, ನಿಮ್ಮ (ತಮ್ಮ) ?

ನಳನಲ್ಲದಿತರ ಪುರುಷರ
ನೊಳಕೊಳ್ಳದು ನೋಡಿ ಮನ್ಮನಂ ಪುಸಿಯೆಂದುಂ
ಸುಳಿಯದು ನೃಪತಿಯ ಬಗೆಯೊಳ್
ತಿಳಿ ನೆಲೆಯುಂ ಮತ್ತೆ ಸಂಶಯಕ್ಕೆಡೆಯುಂಟೇ ೨೭೫

ವ॥ ಎನಲೊರ್ವಳ್ ಕಯ್ಗಳಂ ಮುಗಿದು

............................
ದನುನಯದಿಂ ನಿನ್ನ ನಾಮವೇಂ ಕಾರ್ಯಂ ಬಂ
ದನ ಕಾರಣವೇನೆಂಬುದ
ನಿನಿತಂ ಪೇಟ್ ಸುಭಗ ಕರ್ಣಕೌತುಕವಾಗಲ್ ೨೭೬

ನೀನೆಂಬೀ ನಾಮವೇ ನಾಮದ ನೆಲೆ ಪುರುಷರ್ ಕಾಣದಂತಿರ್ಪ ವಿದ್ಯಾ
ದಾನಂ ದೇವೇಂದ್ರನಿಂದಾಯ್ತೆನಗಮರವರಂ ವಹ್ನಿ ಕಾಲಾಂಬುಪರ್ ಚಿ
ತ್ತಾನಂದಂಬೆತ್ತು ತಮ್ಮಂ ವರಿಸುವ ಬಗೆಯಿಂ ಕಾಂತೆಯಿರ್ದಲ್ಲಿಗೆನ್ನಂ
ದೀನಾಸ್ಯರ್ ಕೂರ್ಮೆಯಿಂದಟ್ಟಿದರಿದು ಸಹಜಂ ಪದ್ಮಪತ್ರಾಯತಾಕ್ಷೀ ೨೭೭

ಆ ಮಾತಂ ದಮಯಂತಿ ಕೇಳ್ದು ಕರದಿಂ ಕರ್ಣಂಗಳಂ ಮುಚ್ಚಿಕೊಂ
ಡೀ ಮಾತಾಡುವರೇ ಬುಧರ್ ನಳನೃಪಂ ಪ್ರಾಣೇಶ್ವರಂ ಮಿಕ್ಕವರ್

ಹೆಸರೇನು, ಇತರ ಕಾರ್ಯವೇನು ಹೇಳಿರಿ ಎಂದು ಕೇಳಿ ತಿಳಿದುಕೊ. ೨೭೫. ನನ್ನ ಮನಸ್ಸು ನಳನನ್ನು ಬಿಟ್ಟು ಇತರ ಪುರುಷರನ್ನು ಕಂಡು ಒಳಗೊಳ್ಳುವುದಿಲ್ಲ. ರಾಜನ ಭಾವನೆಯಲ್ಲಿ ಎಂದೆಂದಿಗೂ ಸುಳ್ಳು ಸುಳಿಯದು. ನೆಲೆಯನ್ನು ಕೇಳಿ ತಿಳಿದುಕೋ. ಮತ್ತೆ ಸಂದೇಹಕ್ಕೆ ಅವಕಾಶವಿದ್ದೀತೆ ? ವ॥ ಎನ್ನಲು. ಒಬ್ಬಾಕೆ ಕೈಗಳನ್ನು ಮುಗಿದು ೨೭೬. ........ವಿಶ್ವಾಸದಿಂದ ಎಲೈ ಸುಂದರನೆ ! ನಿನ್ನ ಹೆಸರೇನು ? ಕಾರ್ಯವೇನು ? ಬಂದ ಕಾರಣವೇನು ? ಇಷ್ಟನ್ನೂ ಕಿವಿಗೆ ಕುತೂಹಲವಾಗುವಂತೆ ಹೇಳು ? (ಎಂದಳು.) ೨೭೭. ನೀನು ಹೇಳುತ್ತಿರುವ ಹೆಸರೇ ಹೆಸರಿನ ನೆಲೆ, ಗಂಡಸರು ಕಾಣದಂತಿರುವ ವಿದ್ಯಾ ದಾನವು ದೇವೇಂದ್ರನಿಂದ ನನಗಾಯಿತು. ದೇವೇಂದ್ರ, ಅಗ್ನಿ, ಯಮ, ವರುಣರು ಮನೋಮುದದಿಂದ ಕೂಡಿ ತಾವು ವರಿಸುವ ಅಪೇಕ್ಷೆಯಿಂದ ತರಳೆಯಾದ ನೀನಿದ್ದಲ್ಲಿಗೆ ದೈನ್ಯಮುಖದಿಂದ ಪ್ರೀತಿಯಿಂದ ಕೊಟ್ಟು ಕಳುಹಿಸಿದರು. ತಾವರೆಯ ಎಲೆಯಂತೆ ವಿಸ್ತಾರವಾದ ಕಣ್ಣುಳ್ಳವಳೆ, ಇದು ಸತ್ಯ. ೨೭೮. ಆ ಮಾತನ್ನು ದಮಯಂತಿ ಕೇಳಿ, ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು 'ತಿಳಿದವರು ಈ ಮಾತನ್ನು ಆಡಬಹುದೆ ?

ಕಾಮಾರ್ಥರ್ ಬಯಲಾಸೆಯಂ ತಳೆಯಲೇಕಿನ್ನಾದೊಡಂ ಪೇಳ್ ಮನಃ
ಪ್ರೇಮಂ ಕೆಯ್ಮಿಗೆ ನಿನ್ನ ನಾಮವನೆನುತ್ತಾ ಕಾಂತೆ ಪಿಮ್ಮೆಟ್ಟಿದಳ್ ೨೭೮

ಆದೊಡೆ ನಳನಾಂ ತಪ್ಪದು
ಸಾದರದಿಂ ಕೇಳ್ ಸರೋಜಮುಖಿ ದಿವಿಜರ್ ಚೆ
ಲ್ವಾದ ದಮಯಂತಿ ತಮಗಿಂ
ದಾದಪಳೆನೆ ಮಾಳ್ಪುದೆಂದು ಕಳುಪಲ್ ಬಂದೆಂ ೨೭೯

ಎನಲೊಡಮಂಗಕಾಂತಿ ತನಿವೆರ್ಚಿ ಮುಖಾಬ್ಜವರಲ್ದು ಸಮ್ಮದಂ
ನನೆಕೊನೆವೋಗಿ ರೋಮಪುಳಕಾವಳಿಯುರ್ಬಿ ಬೆಮರ್ತು ಕರ್ಕಶ
ಸ್ತನಕಳಶಕ್ಕೆ ಸಾರ್ಚಿದ ಸೆಱಂಗು ಸಡಿಲ್ದು ಮನೋನುರಾಗದಿಂ
ವನಿತೆಯ ಮೂರ್ತಿ ನೂತ್ನವೆನಿಸಿತ್ತು ಮನೋಭವನಾಜಿ ಬೆಂಬುಗಲ್ ೨೮೦

ವ॥ ಅನಂತರಂ

ಆನೊಲ್ದು ಬಂದ ಕಾರ್ಯಮ
ನೇನೆಂದಪೆ ಕಾಂತೆಯೆಂದು ನರಪತಿ ಕೇಳ
ಲ್ಕಾನಮ್ಮೆನುತ್ತರಂಗುಡು
ಭೂನಾಥಂಗೆಂದದೊರ್ವಳಂ ನಿಯಮಿಸಿದಳ್ ೨೮೧

ನಳಮಹಾರಾಜನು ಪ್ರಾಣೇಶ್ವರ, ಕಾಮಾತುರರಾದ ಉಳಿದವರು ಬಯಲಾಸೆಯನ್ನು ತಳೆಯಲೇಕೆ ? ಮನಃಪ್ರೇಮವು ಮೀರಿಬರುತ್ತಿರಲು, ಇನ್ನಾದರೂ ನಿನ್ನ ಹೆಸರನ್ನು ಹೇಳು' ಎನ್ನುತ್ತ ಆ ತರುಣಿ ಹಿಂದೆ ಸರಿದಳು. ೨೭೯. "ಕಮಲ ಮುಖಿಯೆ ಕೇಳು ! ಹಾಗಿದ್ದಲ್ಲಿ, ಖಂಡಿತವಾಗಿಯೂ ನಾನು ನಳ. ದೇವತೆಗಳು ಸುಂದರಿ ಯಾದ ದಮಯಂತಿಯನ್ನು ಇಂದು ತಮಗಾಗುವಂತೆ ಮಾಡೆಂದು ಕಳುಹಿಸಲು ಬಂದೆ." ೨೮೦. ಹಾಗೆ ಹೇಳಿದ ಕೂಡಲೆ, ಶರೀರದ ಕಾಂತಿ ವಿಶೇಷವಾಗಿ ಹೆಚ್ಚಿ, ಮುಖಕಮಲ ವರಳಿ, ಸಂತೋಷವು ಕುಡಿಯಿಟ್ಟು, ಮೈನವಿರುಬ್ಬಿ, ಬೆವರಿ, ಗಟ್ಟಿಯಾದ ಸ್ತನಕಳಶ ಗಳಿಗೆ ಹೊದ್ದಿಕೊಂಡಿದ್ದ ಸೆರಗು ಸಡಿಲವಾಗಿ, ಮನ್ಮಥನೂ ಅಂಜಿ ಹಿಂದುಳಿಯುವಂತೆ ಮನಃಪ್ರೇಮದಿಂದ ಆಕೆಯ ಸ್ವರೂಪವು ಹೊಚ್ಚಹೊಸದೆನ್ನಿಸಿತ್ತು. ವ॥ ಬಳಿಕ, ೨೮೧. 'ಎಲೈ ಹೆಂಗಸೆ ! ನಾನು ಒಲಿದು ಬಂದ ಕೆಲಸದ ಬಗ್ಗೆ ಏನು ಹೇಳುವೆ ?' ಎಂದು ಮಹಾರಾಜನು ಕೇಳಲು, 'ನಾನು ಶಕ್ತಳಿಲ್ಲ ; ಮಹಾರಾಜನಿಗೆ ಉತ್ತರವನ್ನು ಕೊಡು'

ಕೆಳದಿಯದೋರ್ವಳ್ ನಿಜಕರ
ತಳಮಂ ಮುಗಿದವನಿಪಾಲ ಕಾರ್ಯದ ತೆಱನಂ
ತಿಳಿವಂತು ಪೇಟ್ನೆನಲ್ ಕೋ
ಮಳೆ ಕೇಳೆಂದಾಕೆಗಾತನಂದಿಂತೆಂದಂ ೨೮೨

ಸುರತತಿ ಸೇನೆ ರಂಭೆ ನಿಜವಾರವಿಳಾಸಿನಿ ವಜ್ರಮಾಯುಧಂ
ಸುರಕರಿ ವಾಹನಂ ಶಚಿ ಮನೋರಮೆ ಮೂರ್ತಿ ಸಹಸ್ರಲೋಚನಂ
ನರಪತಿಗಾತನಂ ವರಿಸಿ ನಿರ್ಜರಭೋಗವನೊಲ್ಲದನ್ಯರಂ
ವರಿಸಲದೇಕೆ ಮಾನವತಿಯಂತರಮಾವುದಮರ್ತ್ಯ ಮರ್ತ್ಯರೊಳ್ ೨೮೩

ಮುನಿದೊಡೆ ಭುವನತ್ರಯಮಂ
ತೆನೆಯಂ ಪೊಸೆವಂತು ಪೊಸೆವ ಸತ್ತ್ವಸಮಗ್ರಂ
ದಿನಕರಪುತ್ರಂ ಮಹಿಷಾ
ಸನನಾತನನೇಕೆ ವರಿಸಳಬ್ಜದಳಾಕ್ಷೀ ೨೮೪

ಸತತಂ ರುಚಿಯೆನಿಪ ಮಹಾ
ದ್ಭುತಸತ್ತ್ವನನುಗ್ರಮೇಷವಾಹನನಂ ಸ
ನ್ನುತಿವೆತ್ತ ಸಪ್ತಜಿಹ್ವನ
ನತಿಬಳನಂ ವರಿಸಳೇಕೆ ಧೂಮಧ್ವಜನಂ ೨೮೫

ಎಂದು, ಒಬ್ಬ ಸಖಿಗೆ ಆಜ್ಞಾಪಿಸಿದಳು. ೨೮೨. ಒಬ್ಬ ಗೆಳತಿ ಕೈಮುಗಿದು "ಮಹಾರಾಜನೆ! ಕಾರ್ಯದ ರೀತಿಯನ್ನು ತಿಳಿಯುವಂತೆ ಹೇಳು" ಎನ್ನಲು, "ಕೋಮಲೆ, ಕೇಳು" ಎಂದು ಆಕೆಗೆ ಆತನು ಹೀಗೆ ಹೇಳಿದನು. ೨೮೩. ದೇವೇಂದ್ರನಿಗೆ ಸುರ ಸಮೂಹವೇ ಸೈನ್ಯ, ರಂಭೆಯೇ ಸಹಜ ಪಣ್ಯಾಂಗನೆ, ವಜ್ರವೇ ಆಯುಧ, ಐರಾವತವೇ ವಾಹನ, ಶಚಿಯೇ ಮನದನ್ನೆ, ಆಕಾರವಾದರೋ ಸಹಸ್ರಾಕ್ಷ, ಆತನನ್ನು ಮದುವೆಯಾಗಿ ಅಮರವೈಭವನ್ನು ಬಯಸದೆ, ಇತರರನ್ನು ಮಾನವತಿ ಮದುವೆಯಾಗುವುದಾದರೂ ಏಕೆ ? ದೇವ ಮಾನವರಲ್ಲಿ ಎಷ್ಟು ಅಂತರವಿದೆ ? ೨೮೪. ಕೋಪಿಸಿದ್ದೇ ಆದರೆ, ಮೂರು ಲೋಕಗಳನ್ನೂ ತೆನೆಯನ್ನು ಹೊಸೆಯುವಂತೆ ಹೊಸೆಯಬಲ್ಲ, ಸಮಸ್ತ ಶಕ್ತಿ ಶಾಲಿಯೂ, ಸೂರ್ಯಪುತ್ರನೂ, ಮಹಿಷವಾಹನನೂ, (ಕೋಣನನ್ನು ವಾಹನವಾಗಿ ಉಳ್ಳವನೂ) ಆದ (ಯಮನನ್ನು) ತಾವರೆಯ ಎಸಳಿನಂತಹ ಕಣ್ಣುಳ್ಳ ದಮಯಂತಿ ಏಕೆ ಮದುವೆಯಾಗಲೊಲ್ಲಳು ? ೨೮೫. ಸರ್ವದಾ ಕಾಂತಿಯುಕ್ತನೂ, ಅತ್ಯದ್ಭುತ ಸಮರ್ಥಶಾಲಿಯೂ, ಭಯಂಕರವಾದ ಆಡಿನ ವಾಹನವುಳ್ಳವನೂ, ಸತ್ಕೀರ್ತಿಶಾಲಿಯಾದ ಏಳು ನಾಲಗೆಗಳುಳ್ಳವನೂ, ಹೊಗೆಯ ಬಾವುಟವುಳ್ಳವನೂ ಆದ (ಅಗ್ನಿಯನ್ನು) ಏಕೆ

ಚಲಿಸದೆ ರತ್ನಾಕರದೊಳ್
ನೆಲಸಿದನಂ ಪಾಶಪಾಣಿಯುಂ ಪಶ್ಚಿಮ ದಿ
ಗ್ನಿಲಯಃನನನಿಮಿಷವಾಹನ
ನೊಲವಿಂದಂ ವರಿಸಲೇಕೆ ಕಮಳದಳಾಕ್ಷೀ ೨೮೬

ವ॥ ಎಂಬುದುಂ

ನಗೆಯೊಡಲಾತನಂ ಹರಣಗೊಂಬವನಂ ಬಡವಾಗಿ ಪುಟ್ಟುತಂ
ಪೊಗೆಮುಸುಡಾತನಂ ಜಡನನೊಳ್ಳಿದನೆಂಬರೆ ಭೂಪ ಕೂರ್ಮೆಯಿಂ
ಮೃಗಶಿಶುನೇತ್ರೆಗೇಂ ದೊರೆಯುವರ್ ವರಿಸಲ್ ನಳನಲ್ಲದನ್ಯರಂ
ಬಗೆವಳೆ ಚಿತ್ತದೊಳ್ ದಿವಿಜಸಂತತಿಯಂ ದಮಯಂತಿ ಸಂತತಂ ೨೮೭

ವ॥ ಮತ್ತಂ ದಮಯಂತಿ

ಅತಿಶಯವಾಕ್ಯಮೇವುದವರೇ[ಂ ಪಿರಿ]ಯರ್ ಕಡುಕೆಯ್ವ ನಿನ್ನ ಸಂ
ಸ್ತುತಿಗೆ ಕುಲೀನರಲ್ತುಣಲುಡಲ್ ಪಡೆಯರ್ ಸತತಂ ಸುರಾಲಯ
ಸ್ಥಿತರೆನಗೆಂತು ಭಾವಿಪೊಡೆ ವಲ್ಲಭರಾದಪರುರ್ವರೇಶ ನೀಂ
ಪತಿ ಸತಿಯಾನೆನುತ್ತಬಲೆ ಕೆಯ್ಮುಗಿದೊಯ್ಯನೆ ಮೆಯ್ಮನಿಕ್ಕಿದಳ್ ೨೮೮

ಮದುವೆಯಾಗಬಾರದು ? ೨೮೬. ಕಮಲದಳಾಕ್ಷಿಯೆ ಸಮುದ್ರದಲ್ಲಿ ಅಲುಗಾಡದೆ ನೆಲಸಿರುವವನನ್ನು, ಪಾಶಪಾಣಿಯನ್ನು, ಪಶ್ಚಿಮ ದಿಕ್ಕನ್ನೇ ಆವಾಸವಾಗಿ ಉಳ್ಳವನನ್ನು, ಮೀನನ್ನು ವಾಹನವಾಗಿ ಉಳ್ಳವನನ್ನು (ಎಂದರೆ ವರುಣನನ್ನು) ಏಕೆ ವರಿಸಲೊಲ್ಲಳು ? ವ॥ ಎನ್ನಲು ೨೮೭. ಎಲೈ ಮಹಾರಾಜನೆ ! ನಗೆಗೆ ಗುರಿಯಾದ ಶರೀರವುಳ್ಳವನನ್ನು (ಇಂದ್ರನನ್ನು), ಪ್ರಾಣಾಪಹಾರಿಯನ್ನು (ಯಮನನ್ನು), ಕೃಶವಾಗಿ ಹುಟ್ಟಿ ಹೊಗೆಯಿಂದ ಆವೃತನಾದ ಮುಖವುಳ್ಳವನನ್ನು (ಅಗ್ನಿಯನ್ನು), ಜಡನಾದವನನ್ನು (ವರುಣನನ್ನು) ಪ್ರೀತಿಯಿಂದ ಒಳ್ಳೆಯವರೆನ್ನಬಹುದೆ ? ಜಿಂಕೆಯ ಕಣ್ಣಿನಂತಹ ಕಣ್ಣುಗಳುಳ್ಳ ಆಕೆಗೆ ಅವರು ಹೇಗೆತಾನೆ ತಕ್ಕವರು ? ದಮಯಂತಿ ನಳನನ್ನು ಬಿಟ್ಟು ಇತರರನ್ನು, ದೇವತಾಸಮೂಹವನ್ನು ವರಿಸಲು ಮನಸ್ಸಿನಲ್ಲಿ ಸರ್ವದಾ ಬಗೆಯುವಳೆ ? ವ॥ ಮತ್ತೆ ದಮಯಂತಿ, ೨೮೮. ಆಶ್ಚರ್ಯಕರವಾದ ಮಾತಾದರೂ ಏನಿದೆ ? ಅವರಾದರೂ ಏನು ದೊಡ್ಡವರು ? ಸಂಭ್ರಮದಿಂದ (ನೀನು ಮಾಡುತ್ತಿರುವ) ಕೊಂಡಾಟಕ್ಕೆ ಅವರು ತಕ್ಕ ಸತ್ಕುಲಜಾತರಲ್ಲ, ಉಣಲೂ, ಉಡಲೂ ಉಳ್ಳವರಲ್ಲ, ಸರ್ವದಾ ದೇವಲೋಕದಲ್ಲಿ ವಾಸಿಸತಕ್ಕವರು. ಪರಿಶೀಲಿಸಿದ್ದೇ ಆದರೆ ನನಗೆ ಹೇಗೆ ತಾನೆ ಪತಿಗಳೆನ್ನಿಸಬಲ್ಲರು ? ಎಲೈ ಭೂಪಾಲನೆ, ನೀನು ಪತಿ, ನಾನು ಸತಿ ಎನ್ನುತ್ತ ಆ ತರಳೆ ಕೈಮುಗಿದು ಕೂಡಲೆ

ವ॥ ಎಂದು ಮತ್ತಂ

ಪ್ರಕಟಂ ಸ್ವಯಂವರಂ ಲೌ
ಕಿಕನನ್ವಯಸಕ್ರಮಂ ಪಿತಾಜ್ಞೆ ಸಖಿ ಪ್ರೀ
ತಿಕರಂ ತಾನಾದುದಱಿಂ
ಸಕಲೋತ್ಸವ ಮಂಟಪಕ್ಕೆ ಬರ್ಪುದಿಳೇಶಾ ೨೮೯

ಎಂದು ದಮಯಂತಿ ನೃಪಗಾ
ನಂದದಿ ಕೈಮುಗಿದು ಕಳುಪಲಾತಂ ಮುನ್ನಂ
ಬಂದಂದದಿಂದ ಪೋಗಿ ಪು
ರಂದರನೊಳ್ ಕಾಂತೆ ನುಡಿದ ತೆಱನಂ ಪೇಟ್ದಂ ೨೯೦

ಅದುಮಲ್ಲದಮರನಾಥಂ
ತ್ರಿದಶಾಂಗನೆಯೊರ್ವಳಂ ನೃಪಾಲನ ಬೆನ್ನೊಳ್
ಮುದದಿಂದಟ್ಟಿದನವಳಱಿ
ಯದ ತೆಱದಿಂ ಬಂದು ಪೇಟ್ದಳಾಕೆಯ ಬಗೆಯಂ ೨೯೧

ನಳನಲ್ಲದನ್ಯರಂ ಕೋ
ಮಳೆ ವರಿಸಳ್ ತನ್ನೃಪಂ ನಿಜಸ್ಥಿತಿಗತಿಯಂ
ತಿಳಿವಂತಿರೆ ಪೇಟ್ದುಡುವೇಂ
ನಳಿನಾಕ್ಷಿಗೆ ಭಿನ್ನಭಾಂಡಜಲವಾಯ್ತಾಗಳ್ ೨೯೨

ನಮಸ್ಕರಿಸಿದಳು. ವ॥ ಎಂದು ನುಡಿದು ಬಳಿಕ, ೨೮೯. ಸ್ವಯಂವರವನ್ನು ಘೋಷಿಸ ಲಾಗಿದೆ. ನನ್ನ ತಂದೆಯ ಆಜ್ಞೆ ಲೋಕಾಭಿರಾಮವೂ, ಪರಂಪರಾಗತವೂ, ಸಖಿಗಳಿಗೆಲ್ಲ ಪ್ರೀತಿಕರವೂ ಆಗಿರುವುದರಿಂದ, ಮಹಾರಾಜನೆ, ಸಮಸ್ತ ವೈಭವಯುಕ್ತವಾದ ಸ್ವಯಂ ವರ ಮಂಟಪಕ್ಕೆ ಬರತಕ್ಕದು ೨೯೦. ಎಂಬುದಾಗಿ ಹೇಳಿ, ದಮಯಂತಿ ಆನಂದದಿಂದ ಮಹಾರಾಜನಿಗೆ ಕೈಮುಗಿದು ಕಳುಹಿಸಲು, ಆತನು ಈ ಮೊದಲು ಬಂದ ರೀತಿಯಲ್ಲಿಯೇ ಹಿಂತಿರುಗಿ ಹೋಗಿ, ದೇವೇಂದ್ರನಲ್ಲಿ ತರುಣಿ ಆಡಿದ ರೀತಿಯನ್ನು ಹೇಳಿದನು. ೨೯೧. ಅಷ್ಟೇ ಅಲ್ಲದೆ, ದೇವೇಂದ್ರನು ಅಪ್ಸರೆಯೊಬ್ಬಳನ್ನು ಮಹಾರಾಜನ ಹಿಂಬದಿ ಯಲ್ಲಿಯೇ ಸಂತೋಷದಿಂದ ಕಳುಹಿಸಿಕೊಟ್ಟಿದ್ದನಷ್ಟೆ ! ಆಕೆ, ಯಾರಿಗೂ ತಿಳಿಯದ ರೀತಿ ಯಲ್ಲಿ ಬಂದು, ಆಕೆಯ (ದಮಯಂತಿಯ) ಮನಸ್ಸನ್ನು ಹೇಳಿದಳು. ೨೯೨. ಆ ತರುಣಿ ನಳಮಹಾರಾಜನನ್ನು ಬಿಟ್ಟು ಇತರರನ್ನು ಮದುವೆಯಾಗಲು ಬಯಸುವುದಿಲ್ಲ. ಆ ರಾಜನಾದರೋ ಸಹಜಸ್ಥಿತಿಗತಿಗಳನ್ನು ತಿಳಿಯುವಂತೆ ಹೇಳಿದರೂ ಆದ ಪ್ರಯೋಜನ

ವ॥ ಆದಕ್ಕವರ್ ಮೆಚ್ಚಿ

ಮಾನನಿಧಿ ನಳನೃಪಂಗ
ತ್ಯಾನಂದದಿನಮರಪತಿಯಪೂರ್ವಮೆನಲ್ ತೇ
ಜೋನಿಳಯನಶ್ವಹೃದಯು
ಜ್ಞಾನವನಿತ್ತಂ ಗುಣಂಗಳಂ ಪೊಗಟುತ್ತಂ ೨೯೩

ನೆನೆದಾಗಳಗ್ನಿಸಿದ್ಧಿಯ
ನನುನಯದಿಂದಿತ್ತೆನೆಂದು ನಳಭೂಪಾಲಂ
ಗನಲಂ ವರವಂ ಕೊಟ್ಟಂ
ಘನತೇಜೋಮೂರ್ತಿ ನಿಖಿಳಲೋಕೋತ್ಕೃಷ್ಟಂ ೨೯೪

ಸಮರವಿಜಯಂ ನಿತಾಂತಂ
ಸಮಸಂದಿರ್ಕೆಂದು ನಳನೃಪಾಲಂಗೊಲವಿಂ
ಸಮವರ್ತಿ ವರವನಿತ್ತಂ
ಸಮಸ್ತಲೋಕಾಂತಕರ್ತೃ ಭೀಕರಗಾತ್ರಂ ೨೯೫

ಸುಲಲಿತ ನಿರ್ಮಳಕೋಮಳ
ಜಲಸಿದ್ಧಿಯನಿತ್ತೆನೆಂದು ವರುಣಂ ವರಮಂ
ನಳಭೂಪತಿಯೊಳ್ ಸತತಂ
ಸಲಿಸಿದನೊಲವಿಂ ಪ್ರಮೋದವೆಸೆಯಲ್ ಸಲವಿಂ ೨೯೬

ವೇನು ? ಆ ನಳಿನಾಕ್ಷಿಗೆ ಅದು ಆಗ ಒಡೆದ ಮಡಕೆಯ ನೀರಿನಂತಾಯಿತು. ವ॥ ಆದಕ್ಕೆ ಅವರು ಮೆಚ್ಚಿ, ೨೯೩. ತೇಜಸ್ವಿಯಾದ ದೇವೇಂದ್ರನು ಮಾನನಿಧಿಯಾದ ನಳಮಹಾರಾಜನಿಗೆ, (ಆತನ) ಗುಣಗಳನ್ನು ಹೊಗಳುತ್ತ, ಅಪೂರ್ವವಾದಂತಹ ಅಶ್ವಹೃದಯವನ್ನು ತಿಳಿಯುವ ಜ್ಞಾನವನ್ನು ತುಂಬ ಸಂತೋಷದಿಂದ ಅನುಗ್ರಹಿಸಿದನು. ೨೯೪. ನೆನೆದೊಡನೆಯೇ ಅಗ್ನಿಸಿದ್ಧಿಯನ್ನು ಪ್ರೀತಿಯಿಂದ ನಳಮಹಾರಾಜನಿಗೆ ಕೊಟ್ಟಿರುವೆನೆಂಬುದಾಗಿ ಘನವಾದ ತೇಜೋಸ್ವರೂಪನೂ, ಸಕಲ ಲೋಕಕ್ಕೆ ಉತ್ಕೃಷ್ಟನೂ ಆದ ಅಗ್ನಿ ವರವನ್ನು ದಯಪಾಲಿಸಿದನು. ೨೯೫. ನಳಮಹಾರಾಜನಿಗೆ ಸದಾ ಯುದ್ಧದಲ್ಲಿ ಜಯವು ಲಭಿಸಲಿ ಎಂದು ಸಕಲ ಲೋಕವಿನಾಶಕನೂ, ಭಯಂಕರ ಶರೀರನೂ ಆದ ಯಮನು ವರವನ್ನು ಅನುಗ್ರಹಿಸಿದನು. ೨೯೬. ವರುಣನಿಗೆ ಆನಂದವಾಗಲು ಸುಲಲಿತವಾದ, ಪವಿತ್ರವೂ ಆದ ಜಲಸಿದ್ಧಿಯನ್ನು ಕೊಟ್ಟೆನೆಂಬುದಾಗಿ ಪ್ರೀತಿಯಿಂದಲೂ, ವಿಶ್ವಾಸ

ವ॥ ಅನಂತರಂ

ಸ್ಥಿರಗುಣಶೀಲನಂ ನಳನೃಪಾಲನನಲ್ಲದೆ ಕಾಂತೆ ಕೂರ್ವೆಯಿಂ
ವರಿಸಳದಕ್ಕುಪಾಯವಿದೆನಲ್ ನಳನಾಕೃತಿಯಂ ನಿರಂತರಂ
ಧರಿಸುವೆವೆಮ್ಮ ಭೇದವಿನಿತಿಲ್ಲದೆ ತನ್ನೃಪನಾತ್ಮಮೂರ್ತಿಯಂ
ಸುರಪತಿ ವಹ್ನಿ ಕಾಲ ವರುಣರ್ ತಳೆದರ್ ಪೆಜಪಿಂಗೆ ಸಂತತಂ ೨೯೭

ಅಂತು ನಳನಯ್ವರಾಗಿ ಸ
ಮಂತೆಸೆವ ವಿದರ್ಭನೃಪನ ಪುರದುದ್ಯಾನ
ಪ್ರಾಂತದೊಳಿರ್ದರ್ ಸತತಂ
ಚಿಂತಿಸುತಂ ಸನ್ಮುಹೂರ್ತವಂ ಸಾಧಿಸುತಂ ೨೯೮

ವ॥ ಅನ್ನೆಗಂ

ನಾನಾ ವಾಹನಕೋಟಿ ಸೇವಕಮಹಾಲಂಕಾರದಿವ್ಯಾಂಬರಾ
ನೂನದ್ರವ್ಯಸಮೇತಮುತ್ತಮಕುಲೋದ್ಭೂತರ್ ಕಳಾಕೋವಿದರ್
ಸಾನಂದಂ ಮಿಗೆ ಕಾಮರಾಜ್ಯವಿಭವಂ ಕಯ್ವಾರ್ಗುಮೆಂದಂಗನಾ
ಧ್ಯಾನಾಧೀನಪರರ್ ಸ್ವಯಂವರಮಹೋತ್ಸಾಹಕ್ಕೆ ಬಂದರ್ ನೃಪರ್ ೨೯೯

ವಾರವಿಳಾಸಿನೀನಿಕರವಿಕ್ಕುವ ಚಾಮರದಿಂ ಸುರತ್ನಕೋ
ಟೀರಮರೀಚಿಯಿಂ ರುಚಿರಕುಂಡಳಮಂಡಿತಗಂಡದೀಪ್ತಿಯಿಂ

ದಿಂದಲೂ ನಳಮಹಾರಾಜನಿಗೆ ಸರ್ವದಾ ವರವನ್ನು ಸಲ್ಲಿಸಿದನು. ವ॥ ಬಳಿಕ, ೨೯೭. ಅಚಲವಾದ ಗುಣಶೀಲನಾದ ನಳಮಹಾರಾಜನನ್ನು ಹೊರತು ತರುಣಿ (ಇತರರನ್ನು) ಪ್ರೇಮದಿಂದ ಮದುವೆಯಾಗುವುದಿಲ್ಲವಷ್ಟೆ ! ಆದಕ್ಕೆ ಇದೇ ಉಪಾಯವೆಂಬಂತೆ, ನಮ್ಮ ನಮ್ಮಲ್ಲಿನ ಭೇದಗಳು ಸ್ವಲ್ಪವೂ ಇಲ್ಲದೆ, ಸರ್ವದಾ ನಳನ ಸ್ವರೂಪವನ್ನು ಧರಿಸುವೆವು (ಎಂಬುದಾಗಿ) ಇಂದ್ರ, ಅಗ್ನಿ, ಯಮ, ವರುಣರು ತಮ್ಮ ಆಕೃತಿ ಹಿಂದುಳಿಯಲು, ಆ ಮಹಾರಾಜನ (ನಳನ) ಸ್ವರೂಪವನ್ನು ತಾಳಿದರು. ೨೯೮. ಆ ರೀತಿ ಐದು ಮಂದಿ ನಳರಾಗಿ ಸರ್ವದಾ ಆಲೋಚಿಸುತ್ತಲೂ, ಶುಭಮುಹೂರ್ತವನ್ನು ಎದುರುನೋಡುತ್ತಲೂ, ಚೆನ್ನಾಗಿ ತೋರಿಬರುವ ವಿದರ್ಭಮಹಾರಾಜನ ಊರಿನ ಉದ್ಯಾನದ ಗಡಿಯಲ್ಲಿದ್ದರು. ವ॥ ಆವೇಳೆಗೆ ೨೯೯. ವಿಧವಿಧವಾದ ವಾಹನಕೋಟಿ, ಸೇವಕರು, ಮಹತ್ತಾದ ಆಲಂಕಾರ, ದಿವ್ಯವಸ್ತ್ರ, ಕುಂದಿಲ್ಲದ ದ್ರವ್ಯಸಮೇತರಾಗಿ, ಉತ್ತಮಕುಲದಲ್ಲಿ ಹುಟ್ಟಿದವರೂ, ಕಲಾನಿಪುಣರೂ, ಸ್ತ್ರೀಚಿಂತನಾಪರರೂ ಆದ ರಾಜರು ಆನಂದ ಮೇರೆ ಮೀರಲು, ಕಾಮರಾಜ್ಯವೈಭವವು (ತಮತಮಗೆ) ಸ್ವಾಧೀನವಾಗುವುದೆಂಬುದಾಗಿ ಸ್ವಯಂವರ ಮಹೋತ್ಸವಕ್ಕೆ ಬಂದರು. ೩೦೦. ಪಣ್ಯಾಂಗನೆಯರು ಬೀಸುವ ಚಾಮರದಿಂದಲೂ, ರತ್ನಕಿರೀಟಗಳ ಕಾಂತಿಯಿಂದಲೂ, ಪ್ರಯುಕ್ತವಾದ ಕರ್ಣಕುಂಡಲಗಳಿಂದ

ಹಾರವಮಯೂಖದಿಂ ಪದಕಕಾಂತಿಯನಿರ್ಮಡಿ ಚೆಲ್ವುವೆತ್ತ ಧಾ
ತ್ರೀರಮಣರ್ ಸ್ವಯಂವರಕೆ ಬಂದರತೀವವಮನೋನುರಾಗದಿಂ ೩೦೦

ಮತ್ತಮನಂತಮಹೀಶರ್
ಚಿತ್ತಜಸನ್ನಿಭರನೇಕವೈಭವದಿಂದಾ
ಯತ್ತ ಚತುರಂಗಬಲಯುತ
ರುತ್ತಮಕುಲಜರ್ ಸ್ವಯಂವರಕ್ಕೆಯ್ತಂದರ್ ೩೦೧

ಸುಕವಿತತಿ ವೃದ್ಧವೈದ್ಯ
ಪ್ರಕರಂ ಸಾಮುದ್ರಿಕಪ್ರತಾನಂ ಮೌಹೂ
ರ್ತಿಕಸಂಘಂ ಪೌರೋಹಿತ
ನಿಕರಂ ತಮ್ಮೊಡವರಲ್ ನೃಪಾಲರ್ ಬಂದರ್ ೩೦೨

ವ॥ ಅಂತು ಬರೆ

ಮಂಗಳವಾದ್ಯದಿಂ ಕಳಸ ಕ[ನ್ನ]ಡಿಯಿಂ ದ್ವಿಜಮಂತ್ರಘೋಷದಿಂ
ದಂಗನೆಯರ್ಕಳಿಕ್ಕುವ ಸಿತಾಕ್ಷತ ಸೇಸೆಗಳಿಂದಿದಿರ್ಗೊಳು
ತ್ತಂಗಜರೂಪಸನ್ನಿಭರನುರ್ವಿಪರಂ ಸ್ವಪುರಪ್ರವೇಶಮಂ
ಕಂಗೊಳಿಪಂತು ಮಾಡಿಸಿದನುತ್ಸವದಿಂದೆ ವಿದರ್ಭಭೂಭುಜಂ ೩೦೩

ತರತರದಿಂ ಸಮಸ್ತ ಧರಣೀಶ್ವರರು ನವರತ್ನ ಹೇಮವಿ
ಷ್ಟರದೊಳನೂನವೈಭವಮುದಂ ಮಿಗಲೊಪ್ಪಿರಲರ್ಘ್ಯಪಾದ್ಯಮಂ

ಕೂಡಿದ ಕಪೋಲಸ್ಥಲತೇಜದಿಂದಲೂ, ಹಾರಗಳ ಕಿರಣಧಾರೆಯಿಂದಲೂ, ಪದಕಕಾಂತಿಯಿಂದಲೂ ಇಮ್ಮಡಿ ಸುಂದರರಾದ ಭೂಪಾಲಕರು ತುಂಬಿದ ಮನಃಪ್ರೀತಿಯಿಂದ ಸ್ವಯಂವರಕ್ಕೆ ಬಂದರು. ೩೦೧. ಅಷ್ಟೇ ಅಲ್ಲದೆ, ಸತ್ಕುಲಪ್ರಸೂತರಾದ ಮನ್ಮಥ ಸದೃಶರಾದ ಅಸಂಖ್ಯಾತ ಮಹಾರಾಜರು ಸಮಸ್ತ ವಿಜೃಂಭಣೆಯಿಂದ ತಮ್ಮ ಸ್ವಾಧೀನ ದಲ್ಲಿರುವ ಚತುರಂಗಬಲ ಸಮೇತರಾಗಿ ಸ್ವಯಂವರಕ್ಕೆ ಆಗಮಿಸಿದರು. ೩೦೨. ಸತ್ಕವಿ ಸಮೂಹ, ವೃದ್ಧರಾದ ವೈದ್ಯವೃಂದ, ಭವಿಷ್ಯಜ್ಞರ ತಂಡ, ಜೋಯಿಸರ ಗುಂಪುಗಳು ತಮ್ಮ ಜೊತೆಯಲ್ಲಿಯೇ ಬರಲು ಮಹಾರಾಜರು ಬಂದರು. ವ॥ ಹಾಗೆ ಬರಲು, ೩೦೩. ವಿದರ್ಭಮಹಾರಾಜನು ಮಂಗಳವಾದ್ಯದಿಂದಲೂ, ಕಳಶಕನ್ನಡಿಗಳಿಂದಲೂ, ವಿಪ್ರರ ಮಂತ್ರಘೋಷದಿಂದಲೂ, ಹೆಂಗಸರು ಸೂಸುವ ಬಿಳುಪಾದ ಮಂತ್ರಾಕ್ಷತೆ ಗಳಿಂದಲೂ ಮನ್ಮಥಸಮಾನರಾದ ಮಹಾರಾಜರನ್ನು ಎದುರುಗೊಂಡು, ವೈಭವ ದಿಂದ ತನ್ನ ಪಟ್ಟಣದ ಪ್ರವೇಶವನ್ನು ಶೋಭಿಸುವಂತೆ ನೆರವೇರಿಸಿದನು. ೩೦೪. ಭೀಮಮಹಾರಾಜನು ಸಕಲ ರಾಜರನ್ನೂ ವಿಧವಿಧವಾದ ನವರತ್ನಖಚಿತವಾದ ಬಂಗಾರದ ಭದ್ರಾಸನದಲ್ಲಿ (ಕುಳ್ಳಿರಿಸಿ), ಕುಂದಿಲ್ಲದ ವೈಭವದ ಸಂತೋಷವು

ನರಪತಿ ಭೀಮನಿತ್ತು ಕುಶಲೋಕ್ತಿಗಳಿಂ ವಿವಿಧೋಪಚಾರದಿಂ
ಪರಿವಿಡಿಯಿಂದ ಮನ್ನಿಸಿದನೇಂ ಕ್ರಮಯುಕ್ತನೊ ತನ್ನೃಪಾಲಕಂ ೩೦೧

ಮುನ್ನವೆ ಶೋಭಾಯುತ ಸಂ
ಪನ್ನವೆನಲ್ ಮಾಡಿಸಿಟ್ಟ ಮಂದಿರದೊಳ್ ಸೌ
ಖ್ಯೋನ್ನತಿಯಿಂದ ಪಥಶ್ರಮ
ಮಂ ನೆಟ್ಟನೆ ಕಳೆಯಿಮೆಂದು ಕಳುಪಿದನವರಂ ೩೦೫

ವ॥ ಅನಂತರಂ

ನಾಳೆ ಮುಹೂರ್ತವಾದುದರುಣೋದಯಕಾಲದೊಳೊಲ್ದನೇಕ ಭೂ
ಪಾಲಕಸಂಕುಳಂ ನೆಗಟ್ದಿ ಕಾಲವಿಳಂಬನವಾಗದಂತು ಸಂ
ಕ್ಷಾಳಿತದೇಹರಾಗಿ ನಡೆತಪ್ಪುದು ಮಂಗಳಮಂಟಪಕ್ಕೆನು
ತ್ತೋಳಿಯ ಕೇರಿಕೇರಿಗಳ ಡಂಗುರಮುರ್ವಿದುದಾ ಪುರಾಂತದೊಳ್ ೩೦೬

ಪಾಸಿದ ಪೂಗಳಂತಗಲಿ ತಾರಗೆಗತ್ತಲೆಯಂತೆ ನಿದ್ರೆ ಮು
ನ್ನೋಸರಿಸಲ್ ನೆಗಟ್ದುದಯರಾಗಮುಗುರ್ವಿಸೆ ಕಾಂತಿ ಕೈಮಿಗಲ್
ವಾಸರಕಾಂತಿಯಂ ಪರಿಸಲಂಬರದೊಪ್ಪದಿನಾಂತು ಪೂರ್ವಶೈ
ಲಾಸನದೊಳ್ ಬೆಡಂಗುವಡೆದಂ ದಿನನಾಯಕನಿಂದ್ರದಾಯಕಂ ೩೦೭

ಮೀರುವಂತೆ ಅರ್ಘ್ಯಪಾದ್ಯಗಳನ್ನಿತ್ತು, ಕ್ಷೇಮಸಮಾಚಾರಗಳನ್ನು ಕೇಳಿ, ಬಗೆಬಗೆಯಾದ ಉಪಚಾರಗಳಿಂದ ಸಕ್ರಮವಾಗಿ ಗೌರವಿಸಿದನು. ಆ ಮಹಾರಾಜನು ಎಷ್ಟು ಕ್ರಮಬದ್ಧನಾದವನೋ! ೩೦೫. ಈ ಮೊದಲೆ ಕಾಂತಿಯುಕ್ತವಾಗಿ ಸಂಪದ್ಭರಿತ ವೆಂಬಂತೆ ಅಣಿಗೊಳಿಸಿದ ಮಹಲುಗಳಲ್ಲಿ ಸುಖವೈಭವದಿಂದ ಮಾರ್ಗಾಯಾಸವನ್ನು ಹಾಯಾಗಿ ನಿವಾರಿಸಿಕೊಳ್ಳಿರೆಂದು ಅವರನ್ನು ಕಳುಹಿಸಿಕೊಟ್ಟನು. ವ॥ ಆ ತರುವಾಯ, ೩೦೬. 'ನಾಳೆಯ ದಿನ ಅರುಣೋದಯದ ವೇಳೆಗೆ ಮುಹೂರ್ತವನ್ನು ಏರ್ಪಡಿಸ ಲಾಗಿದೆ. ಮೆಚ್ಚಿ ಬಂದಿರುವ ಸಮಸ್ತ ಮಹಾರಾಜರ ಸಮೂಹವೂ ನಿಶ್ಚಯಿಸಿದ ಹೊತ್ತನ್ನು ಮೀರದಂತೆ, ಸ್ನಾನಾದಿಗಳಿಂದ ಶುಭ್ರಶರೀರರಾಗಿ ಮಂಗಳಮಂಟಪಕ್ಕೆ ಬರ ತಕ್ಕುದು.' ಎಂದು ಒಟ್ಟಾಗಿ ಬೀದಿಬೀದಿಗಳ ಡಂಗುರವು ಆ ಊರಿನ ಎಲ್ಲೆಯಲ್ಲಿ ನಾದ ಗೈದಿದುವು. ೩೦೭. ಹಾಸಿದ ಹೂಗಳಂತೆ ಚೆದರಿ, ನಕ್ಷತ್ರದ ಕತ್ತಲೆಯ ಹಾಗೆ ನಿದ್ರೆ ಮೊದಲೇ ಸರಿಯಲು, ಮೈದೋರಿದ ಉಷಃಕಾಂತಿ ಹಬ್ಬಿ ಪ್ರಭೆ ಹೆಚ್ಚಾಗಲು, ದಿನದ ಶೋಭೆಯನ್ನು ಹರಡಲು, ಆಕಾಶದಲ್ಲಿ ಇಂದ್ರದಿಕ್ಕಿನ ದಾತಾರನಾದ ಸೂರ್ಯನು ಪೂರ್ವಾ

ವ॥ ಆ ಸಮಯದೊಳ್

ಕಳಕಳಮುಣ್ಮೆ ಭೂಷಣಚಯಂ ಮಿಗೆ ಪಲ್ಲಟವಾಗೆ ಹಜ್ಜೆ ಸಂ
ಚಳಿಸೆ ಕರಂಡವಾಹಕರ ಕಯ್ವೊಲದಿಂ ಕೆಲರುಂದಣಂಗಳಿಂ
ಕೆಲರತಿವೇಗದಿಂದ ಪರಿಯಿಟ್ಟು ಕೆಲರ್ ನಡೆತಂದು ಮಂಟಪ
ಸ್ಥಳದ ವಿಶಿಷ್ಟ ವಿಷ್ಟರದೊಳಿರ್ದುದು ರಾಜಿತ ರಾಜಸಂಕುಳಂ ೩೦೮

ಸಕಂಟಲರಕ್ಷೆ ವಶ್ಯತಿಲಕಂ ಸಕಲೌಷಧಿ ಕಾಮಯಂತ್ರಮು
ದ್ರಿಕೆ ಮದನಾಗ್ನಿ ಮಂತ್ರಿತತಿ ರೋಚನಕುಂಕುಮಗಂಧಸಾರ ಪ
ದ್ಮಕಕನುಲೇಪನಂ ಮಕರಕೇತನ ಮಂಗಳನಾಮಜಾಪ್ಯವಾ
ಸ್ತಿಕರೆನಿಸಲ್ ಮನಂಗೊಳಿಸಲಿರ್ದುದು ಬಿಂಕದ ರಾಜಸಂಕುಳಂ ೩೦೯

ತೊಡವನಲಂಕೆಗೆಯ್ವ ಜನವಶ್ಯವಿಭೂತಿಯನಿಟ್ಟುಕೊಳ್ವ ಕ
ನ್ನಡಿಗಳನೊಪ್ಪ ನೋಟ್ಪ ನಿಡುದೋಳ್ಗಳನಂಟೆ[ಪ ಬಿಟ್ಟ] ಬಾಯ್ಗಳಂ
ಮಿಡುಕಿಪ ಕಾಂತೆ ಬಪ್ಪ ದೆಸೆಯಂ ನಿಸದಂ ನಡೆನೋಡಿ ನೋಡಿ ಕಂ
ಗೆಡುವ ಬಟಲ್ಕೆಯುಜ್ಜುಗದೊಳಿರ್ದುದು ಚಾಪಳ ಭೂಪಸಂಕುಳಂ ೩೧೦

ಚಲ ಪೀಠದಲ್ಲಿ ಒಪ್ಪುವಂತೆ ಬೆಡಗನ್ನು ಪಡೆದನು. ವ॥ ಆ ಹೊತ್ತಿನಲ್ಲಿ, ೩೦೮. ಶಬ್ದ ಸಂಭ್ರಮವು ಹೊರಹೊಮ್ಮಲು, ಆಭರಣಗಳ ರಾಶಿಯು ವಿಶೇಷವಾಗಿ ಚೆಲ್ಲಾಪಿಲ್ಲಿಯಾಗಲು, ಹೆಜ್ಜೆಗಳು ತೊಡರಲು, ಭರಣಿಗಳನ್ನು ಧರಿಸಿದವರ ಸಾಮೀಪ್ಯದಿಂದ ಕೆಲವರೂ, ಪಲ್ಲಕ್ಕಿಗಳಿಂದ ಕೆಲವರೂ, ವೇಗವೇಗವಾಗಿ ಧಾವಿಸುತ್ತ ಕೆಲವರೂ, ಆಗಮಿಸಿ ಮಂಟಪದ ವಿಶಿಷ್ಟವಾದ ಪೀಠಗಳಲ್ಲಿ ಶೋಭಾಯಮಾನರಾದ ರಾಜಸಮೂಹವು ಮಂಡಿಸಿದ್ದಿತು. ೩೦೯. ಕೃತಕವಾದ ರಕ್ಷೆ, ಸ್ವಾಧೀನ ತಿಲಕ, ಸಮಸ್ತ, ಮೂಲಿಕೆ ಮೋಹಯಂತ್ರಸಮೇತವಾದ ಉಂಗುರ, ಮನ್ಮಥೋದ್ವೇಗ, ಮಂತ್ರಿಸಮೂಹ, ಮನೋಜ್ಞವಾದ ಕುಂಕುಮ ಮಿಶ್ರಿತ ಗಂಧದತಿರುಳು, ಮಚ್ಚೆಗಳನ್ನು ಮುಚ್ಚಿಕೊಂಡಿರುವ ಅನುಲೇಪನಗಳು (ಮೊದಲಾದುವು) ಮನ್ಮಥನ ಶುಭನಾಮವನ್ನು ಜಪಿಸುವ ನಿವಾಸಿಗಳೆಂಬಂತೆ ಹಮ್ಮಿನ ರಾಜಸಮೂಹವು ಮನಸ್ಸನ್ನು ಸೆಳೆಯುವಂತಿತ್ತು. ೩೧೦. ಚಪಲಚಿತ್ತವಾದ ರಾಜಸಮೂಹವು ತರುಣಿ ಬರುವ ದಿಕ್ಕನ್ನೇ ಸಹಜವಾಗಿ ಮೇಲಿಂದ ಮೇಲೆ ನೋಡುತ್ತ, ಕಂಗೆಡುತ್ತ ಆಭರಣಗಳನ್ನು ಸರಿಮಾಡಿಕೊಳ್ಳುವ, ಜನರನ್ನು ಸ್ವಾಧೀನಪಡಿಸಿಕೊಳ್ಳುವ, ವಿಭೂತಿಯನ್ನು ಧರಿಸುವ, ಕನ್ನಡಿಗಳನ್ನು ಮೆಚ್ಚಿ ನೋಡಿಕೊಳ್ಳುವ, ನೀಳವಾದ ತೋಳುಗಳನ್ನು ಒಡಗೂಡಿಸುವ, ಬಿಟ್ಟ ಬಾಯಿಗಳನ್ನು

ಪಂಚನಳರೆಲ್ಲರಿಂದಂ
ಮುಂಚುವವೆಂದು ಸ್ವಯಂವರಾಲಯದ ಲಸ
ತ್ಕಾಂಚನ ಸಿಂಹಾಸನದೊಳ್
ಸಂಚಲಿಸದೆ ನೆಲಸಿದರ್ ವಿಚಿತ್ರಾಕೃತಿಯಿಂ ೩೧೧

ಕರೆ ದಮಯಂತಿಯಂ ಸಕಲಭೂಪತಿಗಳ್ ನೆರೆದಿರ್ದಪರ್ ಸ್ವಯಂ
ವರಸದನಕ್ಕೆನುತ್ತಖಿಳ ವಾರವಧೂಜನಮಂ ಪುರೋಹಿತೋ
ತ್ಕರವನನೇಕ ಸದ್ಗಣಕರಂ ಬರೆಯೊಪ್ಪುವ ಸೌವಿದಲ್ಲರಂ
ನರಪತಿಯಟ್ಟಿದಂ ವಿವಿಧ ಮಂಗಳವಾದ್ಯಸಮೇತವಾಕ್ಷಣಂ ೩೧೨

ವ॥ ಅಂತು ಕರೆಸೆ

ನವಮಣಿ ನೂಪುರಂ ರುಚಿರಮೇಖಳೆ ಮುದ್ರಿಕೆ ಹಸ್ತಕಂಕಣಂ
ನವಮಿಗುವಂಗದಂ ವಿಮಳಮೌಕ್ತಿಕಕಂಠಿಕೆ ಕರ್ಣಭೂಷಣಂ
ಯುವತಿಯಿನೊಪ್ಪುಗೇದು ಸಕಳಾವಯವಾಭರಣಂಗಳಂ ಸಖೀ
ನಿವಹವಳಂಕರಿಸೆ ಸೊಬಗಿಮ್ಮಡಿಸಿತ್ತು ಸರೋಜನೇತ್ರೆಯಾ ೩೧೩

ಸಾರಸುವರ್ಣಕಾಂತಿ ದಮಯಂತಿಯ ಪೂರ್ಣಶರೀರವರ್ಣವಿ
ಸ್ತಾರವನಾವಗಂ ಪಡೆಯಲೇದುಜಿ ಕಾಲ್ವಿಡಿದಿರ್ದ ಮಾಟಿಸ್ಕೆಯಿಂ

ಬಿಡುಕಿಸುವ ಆಯಾಸದ ಕಾರ್ಯದಲ್ಲಿ ನಿರತವಾಗಿದ್ದಿತು. ೩೧೧. ಐದು ಮಂದಿ ನಳರೂ ಎಲ್ಲರಿಗಿಂತಲೂ (ತಾವು) ಮುಂದಾಗುವೆವೆಂದು ಸ್ವಯಂವರಮಂಟಪದ ಕಾಂತಿಯುಕ್ತವಾದ ಸಿಂಹಾಸನದಲ್ಲಿ ಅಲುಗದೆ ವಿಶಿಷ್ಟವಾದ ರೂಪದಿಂದ ಸ್ಥಿತರಾದರು. ೩೧೨. ಸಮಸ್ತ ಮಹಾರಾಜರೂ ಸೇರಿದ್ದಾರೆ, ಸ್ವಯಂವರ ಮಂಟಪಕ್ಕೆ ದಮಯಂತಿಯನ್ನು ಕರೆತನ್ನಿರಿ ಎಂಬುದಾಗಿ ಸಮಸ್ತ ವೇಶ್ಯೆಯರನ್ನೂ, ಪುರೋಹಿತವೃಂದವನ್ನೂ. ಒಳ್ಳೆಯ ಜೋಯಿಸರನ್ನೂ. ಬರಲೊಪ್ಪುವ ಅರಮನೆಯ ಅಂತಃಪುರದ ಸೇವಕರನ್ನೂ ಮಹಾರಾಜನು ನಾನಾ ಮಂಗಳವಾದ್ಯಸಮೇತವಾಗಿ ಆ ಕೂಡಲೆ ಕೊಟ್ಟು ಕಳುಹಿಸಿದನು. ವ॥ ಹಾಗೆ ಕರೆಯಿಸಲು. ೩೧೩. ನವಮಣಿಖಚಿತವಾದ ಕಾಲಂದುಗೆ, ಕಾಂತಿಯುಕ್ತವಾದ ಒಡ್ಯಾಣ, ಉಂಗುರ, ಕೈಯಬಳೆ, ಹೊಸತಾದ, ಶ್ರೇಷ್ಠವಾದ ತೋಳಬಂದಿ, ಪರಿಶುದ್ಧವಾದ ಮುತ್ತಿನಹಾರ, ಕಿವಿಯ ಒಡವೆ (ಓಲೆ)ಗಳು ತರುಣಿಯಿಂದ ಶೋಭಿಸುತ್ತವೆಯೆಂದು ಸಮಸ್ತ ಅವಯವಗಳ ಆಭರಣಗಳನ್ನೂ ಸಖೀಸಮೂಹದವರು ಸರಿಪಡಿಸಲು ಪದ್ಮನೇತ್ರೆಯ ಸೌಂದರ್ಯ ದ್ವಿಗುಣವಾಗಿದ್ದಿತು. ೩೧೪. ಸಾರವತ್ತಾದ ಬಂಗಾರದ ಮೆರಗು ದಮಯಂತಿಯ ಸಂಪೂರ್ಣ ಶರೀರದ ವೈಶಾಲ್ಯವನ್ನು ಸರ್ವದಾ ಪಡೆಯಲೇದು ವಿಶೇಷವಾಗಿ ಕಾಲನ್ನು ಹಿಡಿದುಕೊಂಡ ರೀತಿಯಲ್ಲಿ ಹೆಂಗಸಿನ ಮೃದುವಾದ

ನಾರಿಯ ಕೋಮಳಾಂಘ್ರಿಗಳೊಳುಜ್ಜ್ವಲತೇಜವನಪ್ಪುಗೆಯುದ್ದ ಮೊ
ಜೇರಕವೇಂ ಮನಂಗೊಳಿಸುತಿರ್ದುವೊ ರತ್ನನಿಕಾಯದೀಪ್ತಿಯಿಂ ೩೧೪

ಲೀಲೆಯಿನಲರ್ಗಣೆಗಳ ಸಂ
ಕೀಲಿಸಿದಂ ಮದನನೆಂಬ ತೆಱದಿಂದಾಗಳ್
ಬಾಲೆಯ ಪದದೊಳ್ ಮೆಱೆದವು
ಕಾಲುಂಗುರ ವೀರಮುದ್ರೆ ಕಿಱುಮುಂಟಿಕೆಗಳ್ ೩೧೫

ಮಳಯಜಶಾಖೆಯಂದದ ಪುರಂಧ್ರಿಯ ಕೋಮಳಮಧ್ಯದಲ್ಲಿ ಮು
ಡಳಿಸಿದ ಭೋಗಿಯೋ ನವಘನಾಗಮ ಲಕ್ಷ್ಮಿಯನೊಪ್ಪಿಸುತ್ತಿದು
ಜ್ಜ್ವಲತರ ಶಕ್ರಚಾಪಲತೆಯೋ ಎನಿಪಂತಿರೆ ಕಾಂತಿಯಿಂ ತಳ
ತ್ತಳಿಸುವ ಕಾಂಚಿಕಿಂಕಿಣಿಯಳಂಕೆಪೊಳೇಂ ಕರಮೊಪ್ಪುತಿರ್ದುದೋ ೩೧೬

ವಿನುತ ನವಗ್ರಹವಬಲೆಯೊ
ಳನುಗ್ರಹಂಬಡೆಯಲೆಂದು ಬೊಟ್ಟಿಟ್ಟುದೊ ಪೇ
ಟೆನೆ ರತ್ನಖಚಿತಕಾಂತಿಯಿ
ನನುದ(ನ ?)ಯವಾಗಿರ್ದವಂಗುಲೀಯಕನಿಕರಂ ೩೧೭

ಸರಸಿರುಹದೊಳಾದಿತ್ಯನ
ಕಿರಣಂ ಸಂಕ್ರಮಿಸುವಂತೆ ದಮಯಂತಿಯ ಸ

ಪಾದಗಳ ಉಜ್ವಲವಾದ ಕಾಂತಿಯನ್ನು ಆವರಿಸಿಕೊಂಡು ಕಾಲುಗೆಜ್ಜೆಯ ಸರಪಣಿಗಳು ರತ್ನಸಮೂಹದ ಕಾಂತಿಯಿಂದ ಏನು ಮನಃಪ್ರಿಯವಾಗಿದ್ದುವೋ ! ೩೧೫. ಮನ್ಮಥನು ಲೀಲೆಯಿಂದ ಪುಷ್ಪಬಾಣಗಳನ್ನು ನಾಟಿದನೆಂಬಂತೆ ಆಗ ತರುಣಿಯ ಪಾದದಲ್ಲಿ ಕಾಲುಂಗುರ, ವೀರಮುದ್ರೆ, ಚಿಕ್ಕ ಬೆಳ್ಳಿ ಉಂಗುರಗಳು ಶೋಭಿಸುತ್ತಿದ್ದುವು. ೩೧೬. ಗಂಧದಗಿಡದ ಕೊಂಬೆಯಂತಹ ಚೆಲುವೆಯ ಮೃದುವಾದ ನಡುವಿನಲ್ಲಿ ಸುತ್ತಿಕೊಂಡಿರುವ ಸರ್ಪವೋ, ನೂತನ ಮಳೆಗಾಲದ ಮೋಡದ ಲಕ್ಷ್ಮಿಯನ್ನು ಸುತ್ತಿಕೊಂಡಿರುವ ಪ್ರಕಾಶ ಯುಕ್ತವಾದ ಮಳೆಬಿಲ್ಲೋ ಎನ್ನುವಂತೆ ಪ್ರಭೆಯಿಂದ ಥಳಥಳಿಸುವ ಬಂಗಾರದ ಡಾಬು ಜೋಡಣೆಯಿಂದ ಎಷ್ಟು ವಿಶೇಷತರನಾಗಿ ಒಪ್ಪುತ್ತಿದ್ದಿತೋ! ೩೧೭. ಸ್ತುತ್ಯವಾದ ನವಗ್ರಹ ಗಳು ತರುಣಿಯಲ್ಲಿ ಅನುಗ್ರಹವನ್ನು ಪಡೆಯಲೆಂದು ಚುಕ್ಕೆಯಿಕ್ಕಿತೋ ಎಂಬಂತೆ ರತ್ನ ಸಮೇತವಾದ ಪ್ರಭೆಯಿಂದ ಉಂಗುರಗಳ ಸಮೂಹವು ಒಪ್ಪುವಂತಿದ್ದಿತು. ೩೧೮. ತಾವರೆಯಲ್ಲಿ ಸೂರ್ಯನ ರಶ್ಮಿಯು ಆವರಿಸುವಂತೆ ದಮಯಂತಿಯ ಒಳ್ಳೆಯ ಹಸ್ತ ಕಮಲಗಳು ಮಣಿಕಟ್ಟಿನಲ್ಲಿ ಬಹಳ ಶ್ರೇಷ್ಠವೆಂಬಂತೆ ರತ್ನಕಂಕಣಗಳು ಅದೇನು

ತ್ಕರಸರಸಿಜಮಣಿಬಂಧದೊ
ಳುರುತರವೆನೆ ರತ್ನವಳಯಮೇನೊಪ್ಪಿದವೋ ೩.೧೮

ನಾರಿಯ ನುಣ್ಪುವೆತ್ತ ನಳಿತೋಳ್ಗಳೊಳಿಕ್ಕಿದ ನೂತ್ನರತ್ನ ಕೇ
ಯೂರವಳಂಕೆವೆತ್ತವತಿನಿರ್ಮಳ ಕೋಮಳ[ಇಂದು]ಕಾಂತದಿ
ಗ್ವಾರಣದಂತದೊಳ್ ತುಡಿಸಿದುಜ್ವಲ ಸದ್ವಳಯಂಗಳೆಂಬ ವಿ
ಸ್ತಾರವನಪ್ಪುಕೆಯ್ದು ರುಚಿರದ್ಯುತಿ ಪರ್ವೆ ದಿಶಾಂತರಾಳಮಂ ೩.೧೯

ಭಾವಿಸೆ ನೀಳ್ದಪಾಂಗರುಚಿ ಸಾರ್ದಿಟಿ‌‌ಿತಂದುಳಿ° ನಾಭಿಕೂಪಮಂ
ತೀವುವುದೆಂಬಿನಂ ಪೃಥುಳ ತುಂಗಕುಚದ್ವಯಮಧ್ಯದೊಳ್ ಮಯೂ
ಖಾವೃತವಾಗಿ ಸಲ್ಲಲಿತ ನಿಸ್ತುಳ ಮೌಕ್ತಿಕಹಾರಮುಪ್ಪಿ ಶೋ
ಭಾವಹವಾಯ್ತು ರಾಜಸಭೆಗುತ್ಪಲನೇತ್ರೆ ವಿದರ್ಭಪುತ್ರಿಯಾ ೩.೨೦

ಅಸಿಯಳ ಕುಚಕಳಸಂಗ
ಳ್ಗೆ ಸಮಸ್ತರ ದೃಷ್ಟಿ ಹತ್ತದಂತಂಗಭವಂ
ಹೊಸತಗಡಂ ತೊಡೆದಂದದಿ
ನೆಸೆಗುಂ ಕಸ್ತೂರಿ ವಕ್ತ್ರದಲ್ಲಿ ನಿತಾಂತಂ ೩.೨೧

ಸದಮಳ ನೂತ್ನರತ್ನಖಚಿತಸ್ಫುಟವೃತ್ತದಿನೂರ್ಜಿತಪ್ರಭಾ
ವದಿನುರುಗಂಡಮಂಡಲವನಪ್ಪಿ ಮಹಾಭ್ಯುದಯ ಪ್ರಸಿದ್ಧಿಯಿಂ

ಒಪ್ಪಿದುವೋ ! ೩.೧೯. ಹೆಂಗಸಿನ ಕೋಮಲವಾದ ನಿಡುದೋಳುಗಳಲ್ಲಿ ತೊಟ್ಟಿದ್ದ ಹೊಸತಾದ ರತ್ನನಿರ್ಮಿತವಾದ ತೋಳಬಂದಿಗಳು, ತುಂಬ ಪವಿತ್ರವೂ ಮೃದುವೂ ಆದ ಚಂದ್ರಕಾಂತಶಿಲೆಯ ದಿಗ್ಗಜದ ದಂತದಲ್ಲಿ ತೊಡಿಸಿದ ಪ್ರಕಾಶಮಾನವಾದ ಒಳ್ಳೆಯ ಬಳೆಗಳೆಂಬಂತೆ ಸುತ್ತಮುತ್ತಲೂ ಆವರಿಸಿಕೊಂಡು, ಕಿರಣಗಳ ಕಾಂತಿ ಅಂತರಿಕ್ಷವನ್ನು ಹಬ್ಬಲು ಹೊಂದುವಂತಿದ್ದುವು. ೩.೨೦. ವಿಚಾರಿಸಿನೋಡಲು, ನಿಡಿದಾದ ಕಡೆಗಣ್ಣಿನ ಕಾಂತಿ ಹೊರಹೊಮ್ಮಿ ಇಳಿಮುಖವಾಗಿ ಹೊರಟು ವಿಶೇಷವಾದ ಹೊಕ್ಕಳೆಂಬ ಬಾವಿಯನ್ನು ತುಂಬಿಕೊಡಿದೆಯೋ ಎಂಬಂತೆ, ಕನ್ನೈದಿಲೆಯಂತಹ ಕಣ್ಣುಗಳುಳ್ಳ ವಿದರ್ಭರಾಜನ ಮಗಳಾದ ದಮಯಂತಿಯು ತೊಟ್ಟಿದ್ದ ಮನೋಹರವೂ, ಅಸಮಾನವೂ ಆದ ಮುತ್ತಿನ ಸರದ ಎಳೆಗಳು ಪುಷ್ಟವಾದ ಮೊಲೆಗಳೆರಡರ ಮಧ್ಯೆ ಕಿರಣಗಳಿಂದ ಆವರಿಸಲ್ಪಟ್ಟು ಕಾಂತಿಯುಕ್ತವಾಗಿದ್ದುವು. ೩.೨೧. ತರುಣಿಯ ಕಳಸದಂತಹ ಮೊಲೆಗಳಿಗೆ ಎಲ್ಲರ ದೃಷ್ಟಿಯೂ ತಾಗದಂತೆ ಮನ್ಮಥನು ಹೊಸ ಔಷಧವನ್ನು ಲೇಪಿಸಿದಂತೆ ಮುಖದಲ್ಲಿ ಕಸ್ತೂರಿಯ ಬೊಟ್ಟು ಅತ್ಯಧಿಕವಾಗಿ ತೋರಿಬರುತ್ತದೆ. ೩.೨೨. ಪವಿತ್ರವೂ ನೂತನ ರತ್ನಖಚಿತವೂ ಸುಸ್ಪಷ್ಟವೂ ಆದ ವರ್ತುಲದಿಂದಲೂ ಸಮೃದ್ಧಿಯಾದ ಕಾಂತಿಯಿಂದಲೂ, ವಿಶೇಷವಾದ ಏಳಿಗೆಯ ಪ್ರಸಿದ್ಧಿಯಿಂದಲೂ ವಿಶಿಷ್ಟವಾದ ಕಪೋಲಸ್ಥಳ

ಸುದತಿಯ ಕರ್ಣಪತ್ರವೆರಡುಂ ಪರಿರಂಭಿಸುತಿರ್ಪುದಾವಗಂ
[ವ]ದನಶಶಿಪ್ರರೋಹರಥಚಕ್ರಯುಗಂಗಳಿವೆಂಬ ಮಾಟ್ಕೆಯಿಂ ೩೨೨

ಸತಿಯ ನೊಸಲರ್ಧಚಂದ್ರಾ
ಕೃತಿಯದಱಿಂ ಪನಿತ ಸುಧೆಯ ಬಿಂದುಗಳೆಂಬಂ
ತತಿಶಯನಯದಿಂ ಪೊಸಮೂ
ಕುತಿ ಮೆಱೆದತ್ತುಜ್ಜ್ವಲ ಪ್ರಭಾವಸ್ಥಿತಿ [ಪ್ರಸ್ರುತಿ]ಯಿಂ ೩೨೩

ಯುವತಿ ನವನಳನಿಧಾನವ
ನವಲೋಕಿಸಲೆಚ್ಚಿಕೊಂಡ ದಿವ್ಯಾಂಜನದಂ
ತೆ ವಿಳಾಸಂಬೆತ್ತಿರ್ದುದು
ಕುವಳಯದಳಲೋಚನಾಂಜನಂ ರಂಜನದಿಂ ೩೨೪

ನೀಲನವಮೇಘಮಂಡಲ
ದಾಲೋಲ ತಟಿಲ್ಲತಾವಿತಾನದ ಸೊಬಗಂ
ಸಾಲಿಡುತಿರ್ದುದು ಸತತಂ
ಬಾಲೆಯ ಸೂಸಕದ ಜೂಳೆಯುದ ರುಚಿಜಾಳಂ ೩೨೫

ವ॥ ಅಂತು ಕೈಗೆಯ್ದು

ದೆಸೆಯಂ ಬಾಸಣಿಸುತ್ತಪಾಂಗರುಚಿಯಿಂ ಹಸ್ತಾಗ್ರದಿಂ ಮೇಲುದಂ
ಸಸಿನಂಗೆಯ್ಯುತಮೊಯ್ಯನೊಯ್ಯನಿಡುತಂ ಪಾದಂಗಳಂ ಲಜ್ಜೆಯಿಂ

ಗಳನ್ನು ಆವರಿಸಿಕೊಂಡು ಮುಖಚಂದ್ರನಿಂದ ಕುಡಿಯಿಟ್ಟು ಚಕ್ರವಾಕಪಕ್ಷಿಗಳೋ ಎಂಬಂತೆ ತರುಣಿಯ ಎರಡು ಕರ್ಣಾಭರಣಗಳೂ ಸರ್ವದಾ ಆಲಿಂಗನಗೈಯುತ್ತಿರುವುವು. ೨೨೩. ಹೆಂಗಸಿನ ಹಣೆ ಅರ್ಧಚಂದ್ರಾಕೃತಿಯಂತಿದ್ದರೆ, ಅದರಿಂದ ತೊಟ್ಟಿಕ್ಕುವ ಅಮೃತಬಿಂದುಗಳಂತೆ, ವಿಶೇಷವಾದ ನಯದಿಂದ ತೇಜಃಪೂರ್ಣವಾದ ಪ್ರಭಾ ಪ್ರವಾಹದಿಂದ ಹೊಸತಾದ ಮೂಗುತಿ ವಿರಾಜಮಾನವಾಗಿದ್ದಿತು. ೩೨೪. ತರುಣಿಯು ಹೊಸತಾದ ನಳನೆಂಬ ನಿಕ್ಷೇಪವನ್ನು ನೋಡಲೆಂದು ಲೇಪಿಸಿಕೊಂಡ ದಿವ್ಯಾಂಜನದಂತೆ, ತಾವರೆಯ ದಳದಂತಹ ಕಣ್ಣುಗಳಲ್ಲಿನ ಕಾಡಿಗೆ ಮನೋಜ್ಞವಾಗಿ ವಿಲಾಸಯುಕ್ತವಾಗಿದ್ದಿತು. ೩೨೫. ತರಳೆಯ ಮುಂದಲೆಯ ಮುತ್ತಿನ ಮಾಲೆಯ ಗೊಂಡೆಯದ ಕಾಂತಿ ಸಮೂಹವು ಕಪ್ಪಾದ ಹೊಸದಾದ ಮೇಘಸಮೂಹದಲ್ಲಿ ಸ್ಫುರಿಸುವ ಮಿಂಚಿನ ಮೇಲು ಕಟ್ಟಿನ ಸೌಂದರ್ಯವನ್ನು ಸಾಲಿಟ್ಟಂತಿದ್ದಿತು. ವ॥ ಆ ರೀತಿ ಅಲಂಕೃತವಾಗಿ, ೩೨೬. ಕಡೆಗಣ್ಣ ನೋಟದಿಂದ ದಿಕ್ಕುಗಳನ್ನೆಲ್ಲ ಕವಿಯುತ್ತಲೂ, ಕೈತುದಿಯಿಂದ ಸೆರಗನ್ನು ಸರಿಮಾಡಿಕೊಳ್ಳುತ್ತಲೂ, ಮೆಲ್ಲಮೆಲ್ಲಗೆ ಹೆಜ್ಜೆಗಳನ್ನಿಡುತ್ತಲೂ, ನಾಚಿಕೆಯಿಂದ ತಲೆ

ನಸುಬಾಗುತ್ತೆನಗಾತ್ಮನಿಶ್ಚಿತವರಂ ಕೈಸಾರ್ವನೆಂತೇದು ಚಿಂ
ತಿಸುತಂ ಮಂಗಳಮಂಟಪಕ್ಕೆ ಸತಿಯೆಯ್ತಂದಳ್ ನಿಜಾನಂದದಿಂ ೩೨೬

ಮನಸಿಜಮೋಹನಾಸ್ತ್ರಮಬಲಾಕೃತಿಯಾದುದೊ ಚಂದ್ರಲೇಖೆ ಕಾ
ಮಿನಿಯೆನಿಸಿತ್ತೊ ನಿರ್ಮಲ ಸುಧಾರಸಮಂಗನೆಯಾಯ್ತೊ ಮಿಂಚು ಮಾ
ನಿನಿಯೆನಿಸಿತ್ತೊ ಭೂಮಿಗೆ ರತಿ ತಾನಿೞಿತಂದಳೊ ಪೇೞೆನಲ್ಕೆ ಮೋ
ಹನತರಮೂರ್ತಿಯಂ ತಳೆದು ಭಾವಕಿ ಬಂದಳತೀವ ಲೀಲೆಯಿಂ ೩೨೭

ಸುದತೀಯೌವನರಾಜ್ಯಮಂ ವಿಭವದಿಂದಾಳ್ವನ್ನನಂ ಭೇದಿಸಲ್
ಮದನಂ ಲಕ್ಷಣಯುಕ್ತ ಹಸ್ತಿನಿಯುನೀಗಳ್ ಸಿಂಗರಂಗೆಯ್ದು ಪ
ಸ್ತದೊಳೀಮಾಲೆಯನಿತ್ತನೋ ದಿಟವೆನಲ್ ಪೇೞೆಂಬಿನಂ ಮಂದಯಾ
ನದಿನೆಯ್ತಂದಳಪಾಂಗಕಾಂತಿ ಸೆಣಸಲ್ ಭೂಪಾಲ ಭೂಷಾರ್ಚಿಯೊಳ್ ೩೨೮

ನಗೆಮೊಗದಿಂ ಸಖೀಜನಮನೀಕ್ಷಿಸುತಂ ನಯದಿಂ ನಿಮಿರ್ದ ಸೆ
ಳ್ಳುಗುರ್ಗಳಿನೊಯ್ಯನೊಯ್ಯನಳಕಾಳಿಯನಂಟುತಮುನ್ನತಸ್ತನಂ
ಪೊಗರೆಸೆಯಲ್ ಕದಕ್ಕದಿಸೆ ಮೆಲ್ಲಡಿಯಿಕ್ಕುತಮಾಗಳೆಲ್ಲರ
ಕ್ಷಿಗೆ ಸೊಗಸಂ ತುಳುಂಕುತಮವಳ್ ನಡೆತಂದಳನೂನರಾಗದಿಂ ೩೨೯

ತಗ್ಗಿಸುತ್ತಲೂ, ನಾನು ನಿಶ್ಚಯಿಸಿಕೊಂಡಿರುವ ವರನು ನನಗೆ ಹೇಗೆ ಪ್ರಾಪ್ತನಾಗುವನೋ ಎಂಬುದಾಗಿ ಆಲೋಚಿಸುತ್ತ ಆ ವಧು ಮಂಗಳಮಂಟಪಕ್ಕೆ ಸಹಜವಾದ ಸಂತೋಷದಿಂದ ನಡೆತಂದಳು. ೩೨೭. ಮನ್ಮಥನ ಮೋಹನಾಸ್ತ್ರವು ಸ್ತ್ರೀರೂಪವನ್ನು ತಳೆಯಿತೋ, ಎಳೆಯ ಚಂದ್ರ ಕಾಮಿನಿಯ ಆಕಾರವನ್ನು ತಾಳಿತೋ, ಪರಿಶುದ್ಧವಾದ ಅಮೃತಧಾರೆಯು ಹೆಣ್ಣಾಯಿತೋ, ಮಿಂಚುಮಾನಿನಿ ಎನ್ನಿಸಿತ್ತೋ, ರತಿದೇವಿ ಭೂಲೋಕಕ್ಕೆ ತಾನಾಗಿ ಇಳಿದುಬಂದಳೋ ಹೇಳಿರಿ ಎಂಬಂತೆ ಭಾವಕಿ ಚಿತ್ತಾಕರ್ಷಕ ರೂಪವನ್ನು ಧರಿಸಿ ತುಂಬಿದ ಲೀಲೆಯಿಂದ ಬಂದಳು. ೩೨೮. ತರುಣಿಯ ಯೌವನ ರಾಜ್ಯವನ್ನು ವೈಭವದಿಂದ ಆಳುವಂಥವನನ್ನು ಶೋಧಿಸಲು, ಮನ್ಮಥನು ಲಕ್ಷಣಯುಕ್ತಳಾದ ಹಸ್ತಿನೀಜಾತಿಯ ಸ್ತ್ರೀಯನ್ನು ಶೃಂಗಾರಮಾಡಿ ಕೈಯಲ್ಲಿ ಈ ಹಾರವನ್ನು ಕೊಟ್ಟಿದ್ದು ನಿಜವೋ ಏನೋ ಎಂದು ಹೇಳುವಂತೆ, (ಆಕೆಯ) ಕಡೆಗಣ್ಣಿನ ನೋಟದ ಬೆಳಕು ರಾಜರ ಆಭರಣಕಾಂತಿಯೊಂದಿಗೆ ಸ್ಪರ್ಧಿಸುತ್ತಿರಲು ಮಂದಗಮನದಿಂದ ನಡೆದು ಬಂದಳು. ೩೨೯. ಹಸನ್ಮುಖದಿಂದ ಗೆಳತಿಯರ ಗುಂಪನ್ನು ನೋಡುತ್ತಲೂ, ಮೃದುವಾಗಿ ಚಾಚಿಕೊಂಡಿದ್ದ ಚೂಪಾದ ಉಗುರುಗಳಿಂದ ಒಯ್ಯನೊಯ್ಯನೆ ಕೂದಲುಗಳನ್ನು ಸರಿಪಡಿಸಿಕೊಳ್ಳುತ್ತಲೂ, ಉಬ್ಬಿದ ಮೊಲೆಗಳು ಕಾಂತಿ ಸೂಸುತ್ತ ಅಲುಗುತ್ತಿರಲು (ತಾಗುತ್ತಿರಲು) ಮೆಲ್ಲನೆ ಹೆಜ್ಜೆಯಿಡುತ್ತಲೂ, ಆಗ ಎಲ್ಲರ ಕಣ್ಣುಗಳಿಗೂ ಸೊಬಗನ್ನು

ಸತಿ ತಾಂಬೂಲಕರಂಕವಾಹಿನಿಯ ಮುಂಗಯ್ಯೊಳ್ ಕರಂ ತನ್ನ ಪಾ
ಣಿತಳಂ ಶೋಭಿಸೆ ಚಾಮರಂ ಧವಳ ಚಂಚತ್ತಾಳವೃಂತಂ ಸಮು
ತು ತಳಂಗೊಂಡೊಡನೆಟ್ಟಿರಲ್ ಮದನರಾಜ್ಯ ಶ್ರೀಲಸನ್ಮೂರ್ತಿವೆ
ತ್ತಿತೆನಲ್ ಭೀಮತನೂಜೆ ಪೊಕ್ಕಳೊಲವಿಂದುದ್ವಾಹಗೇಹಾಂತಮಂ ೩೩೦

ವ॥ ಅಂತು ಬಂದಿರ್ಪುದುಂ

ಭಾವಕಿ ಪಾದಪಲ್ಲವದ ಕೆಂಪಿನ ಶೋಭೆಯೊಳಿತ್ತಳೆಂಬ ಮಾ
ತೇವುದನೇಕ ಪಾರ್ಥಿವಕುಲಕ್ಕವಕೇಶಿವೆಸರ್ಗಳಿಲ್ಲದಿ
ನ್ನಾವನ ನುಣ್ಪೊಸಲ್ಗೆ [ಮುದದಿಂ] ಪವಪಟ್ಟವನೀವಳೆಂದು ನಾ
ನಾ ವಿಷಯಾಧಿಪರ್ ಪದತಳಂಗಳನೀಕ್ಷಿಸುತಿರ್ದರಾಕೆಯಾ ೩೩೧

[ಯಾ]ವಕರಾಗಮಂ ಪೊರೆದರೇಕೆಯೊ ಮೆಲ್ಲಡಿಗಳ್ಗೆ ಕಾಂತೆಯರ್
ದೇವಿ ನೃಪಾಲಚಿತ್ತದನುರಾಗರಸಂ ನಿಜಪಾದಪದ್ಮಮಂ
ತೀವಿ ವಿಲೋಚನಭ್ರಮರವಕ್ಕಜದಿಂ ಭ್ರಮಿಸುತ್ತಿರಲ್ಕೆ ಪೇಟ್
ಕೋವಿದೆಯೆಂದು ಪಾದತಳವಂ ಪದೆದೀಕ್ಷಿಸುವರ್ ನೃಪಾಲಕರ್ ೩೩೨

ಮದನಂ ವಿರಹಿಗಳಂ ಕಾ
ಯದೆ ಕಡುಪಿವೆಚ್ಚಂದುಣ್ಮಿದರುಣಾಂಬುವಿನ

ಚೆಲ್ಲುವಂತೆ ಕುಂದಿಲ್ಲದ ಸಂತೋಷದಿಂದ ಅವಳು ನಡೆದುಬಂದಳು. ೩೩೦. ತಾಂಬೂಲದ ಪೆಟ್ಟಿಗೆಯನ್ನು ಹಿಡಿದವಳ ಮುಂಗಯ್ಯಲ್ಲಿ ತನ್ನ ಕೈಯ ತಳಭಾಗವು ರಂಜಿಸಲು, ಚಾಮರ, ಶುಭ್ರವಾದ ತಾಳೆಗರಿಯ ಬೀಸಣಿಗೆಗಳನ್ನು ಹಿಡಿದವರೊಡನೆ ತರುಣಿ ಬರುತ್ತಿರಲು, ಮನ್ಮಥನ ರಾಜ್ಯಲಕ್ಷ್ಮಿಯೇ ಕಾಂತಿಯುಕ್ತವಾದ ಆಕಾರವನ್ನು ತಾಳಿತೋ ಎಂಬಂತೆ, ಭೀಮರಾಜನ ಮಗಳು ವಿವಾಹಶಾಲೆಯ ಒಳಭಾಗವನ್ನು ಪ್ರೀತಿಯಿಂದ ಪ್ರವೇಶಿಸಿದಳು. ವ॥ ಹಾಗೆ ಬಂದಿರಲು, ೩೩೧. ಭಾವಕಿಯಾದ (ದಮಯಂತಿ) ತನ್ನ ಚರಣದ ಚಿಗುರಿನ ಕೆಂಪಾದ ಕಾಂತಿಯಲ್ಲಿ ಅನೇಕ ಕ್ಷತ್ರಿಯಕುಲದವರಿಗೆ ನಿಷ್ಫಲವಾದ ಹೆಸರುಗಳನ್ನು ತಪ್ಪದೆ ನೀಡಿದರು ಎಂಬ ಮಾತಾದರೂ ಏಕೆ ? ಯಾರ ಮೃದುವಾದ ಹಣೆಗೆ ಸಂತೋಷದಿಂದ ಪಟ್ಟವನ್ನು ಕೊಡುವಳೋ ಎಂಬುದಾಗಿ ನಾನಾ ದೇಶಗಳ ಒಡೆಯರು ಆಕೆಯ ಪಾದ ತಳಗಳನ್ನೇ ನೋಡುತ್ತಿದ್ದರು. ೩೩೨. ಸ್ತ್ರೀಯರು ಮೃದುವಾದ ಪಾದಗಳಿಗೆ ಅಲತಿಗೆ ಯನ್ನು ಯಾಕೆ ಲೇಪಿಸಿದರೋ ಏನೋ ! ಮಹಾರಾಜರುಗಳ ಮನಸ್ಸಿನ ಪ್ರೇಮರಸವು ಆಕೆಯ ಪಾದಕಮಲಗಳನ್ನು ವ್ಯಾಪಿಸಿ, ಕಣ್ಣುಗಳೆಂಬ ದುಂಬಿಗಳು ಆಶ್ಚರ್ಯದಿಂದ ದಿಗ್ಭ್ರಮೆಗೊಂಡಿರಲು, ಭೂಪಾಲಕರು ದೇವಿಯು ವಿಶಾರದೆಯೇ ಸರಿಯೆಂಬುದಾಗಿ ಅಂಗಾಲುಗಳನ್ನು ಒಲಿದು ನೋಡುವರು. ೩೩೩. ಮನ್ಮಥನು ವಿರಹಿಗಳನ್ನು ರಕ್ಷಿಸದೆ ಬಲವಾಗಿ ಗುರಿಯಿಟ್ಟು ಹೊಡೆದಾಗ ಹೊಮ್ಮಿದ ರಕ್ತದ ಅಧಿಕವಾದ ಕೊಚ್ಚೆಯಲ್ಲಿ

ಗ್ಗದ ಕೊಗ್ಗೆಸಟಿರ್ೊಳ್ ಸತಿಯುಱಿ
ಯದೆ ಪದವಿಟ್ಟಂತೆ ಚರಣದರುಣಿಮಮೆಸೆಗುಂ ೩೩೩

ಸತಿಯ ಪದದ್ವಯಂ ಲಲಿತಪಲ್ಲವದೊಪ್ಪಮನಾಂತವೀಗಳೀ
ಗತಿಶಯ ಪುಷ್ಪಸಂತತಿಯರಲ್ದು ಪೊದಟ್ದುಪುವಿಂ ಮನೋರಥೋ
ನ್ನತ ಫಲಸಿದ್ಧಿ ತಪ್ಪದೆಮಗೆಂದು ನೃಪಾಲಕರೀಕ್ಷಿಸುತ್ತಿರಲ್
ಸಿತರುಚಿ[ಯುಣ್ಮಿ]ಸಿರ್ಪ ನಖಪಂಕ್ತಿಗಳೊಪ್ಪಿದವಬ್ಜನೇತ್ರೆಯಾ ೩೩೪

ಅಂಬು[ಜ]ಪದದೊಪ್ಪ[ವ]ನೆ
ಲ್ಲಂ ಬಯಸಿ ನಿರೀಕ್ಷಿಸಲ್ಕೆ ಬೆಳಗಂಗಳ ಡಾ
ಳಂ ಬಳಸೇ ಹತ್ತಿರ್ದ[ಪ]
ವೆಂಬಿನವೆಸೆದಿರ್ದುವವಳ ನಖದೀಧಿತಿಗಳ್ ೩೩೫

ಪದಕಮಲದ ಕೆಲಕೆಲದು
ಣ್ಮಿದ ಮೊಗ್ಗೆಗಳಂತೆ ಕಾಂತಿವೃತ್ತದಿನಿಂಪಂ
ಪುದಿದೆಸೆದಿರ್ದುವು ಪೆಂಪಿಂ
ಸುದತಿಯ ಮೃದುಗೂಢಗುಲ್ಫವಲ್ಪೋನ್ನತಿಯಿಂ ೩೩೬

ಮನಸಿಜನೊಲ್ದು ತನ್ನ ಬಿನದಕ್ಕೆಡೆಯಾಡುವ ಪೂಗೊಳಂಗಳೊ
ತ್ತಿನೊಳೊಗೆದಿರ್ದನೆಕ್ಕೊರೆಯ ನುಣ್ಪೊಡೆಯುಂಬಿನವೇಟಿಗ್ಗೆವತ್ತು ಕ

ತರುಣಿ ತಿಳಿಯದೆ ಕಾಲನ್ನು ಇಟ್ಟಂತೆ ಕಾಲಿನ ಕೆಂಬಣ್ಣವು ತೋರಿಬರುವುದು. ೩೩೪. ನಾರಿಯ ಪಾದಗಳೆರಡೂ ಈಗ ಸುಂದರವಾದ ಚಿಗುರಿನ ಅಚ್ಚುಕಟ್ಟನ್ನು ತಳೆದುವು. ಈಗ ಆಶ್ಚರ್ಯಕರವಾದ ಹೂವುಗಳ ಸಮೂಹವು ಅರಳಿ ಹೊರಹೊಮ್ಮುವುವು. ಇನ್ನು ತಮ್ಮ ಇಷ್ಟಾರ್ಥದ ಶ್ರೇಷ್ಠವಾದ ಸತ್ಫಲವು ತಪ್ಪದೆಂದು ಮಹಾರಾಜರು ನೋಡುತ್ತಿರಲು, ತಾವರೆಗಣ್ಣಿನ ತರುಣಿಯ ಬಿಳುಪಾದ ಕಾಂತಿ ಹೊಮ್ಮಿದ್ದ ಉಗುರಿನ ಸಾಲುಗಳು ಒಪ್ಪುವಂತಿದ್ದುವು. ೩೩೫. ಅಡಿದಾವರೆಯ ಚೆಲುವನ್ನೆಲ್ಲ ಬಯಸಿ ನೋಡಲೆಂದು ಬಿಳುಪಾದ ಕಣ್ಣುಗಳ ಕಾಂತಿಯು ಸುತ್ತುಗಟ್ಟಿ ಹತ್ತಿರುವುವೋ ಎಂಬಂತೆ, ಆಕೆಯ ಉಗುರಿನ ಕಾಂತಿಗಳು ತೋರಿಬಂದುವು. ೩೩೬. ಪಾದಪದ್ಮದ ಅಕ್ಕಪಕ್ಕಗಳಲ್ಲಿ ಹೊರಹೊಮ್ಮಿದ ಮೊಗ್ಗುಗಳೋ ಎಂಬಂತೆ ಕಾಂತಿವಲಯದಿಂದ ರಮ್ಯವಾಗಿ ತರುಣಿಯ ಮೃದುವೂ, ರಹಸ್ಯವೂ ಆದ ಮಣಿಗಂಟುಗಳು ತುಸುಮಾತ್ರವೇ ಉಬ್ಬಿಕೊಂಡು ಕೀರ್ತಿಯುಕ್ತವಾಗಿ ವ್ಯಕ್ತವಾದುವು. ೩೩೭. ಮನ್ಮಥನು ಮೆಚ್ಚಿ ತನ್ನ ವಿನೋದಾರ್ಥವಾಗಿ ಆಡ್ಡಾಡುವ ಹೂಗೊಳಗಳ ತೀರದಲ್ಲಿ ಹೊಮ್ಮಿದ್ದ ತೋರವಾದ(?)

ಣ್ಗಿನುನಯಮಪಾಗಿ ನೆಪ್ಪುವಡೆದುಜ್ವಲಕಾಂತಿಯಿನೊಳ್ಪುವೆತ್ತ ತ
ದ್ವನಿತೆಯ ಜಂಗೆಗಳ್ ವಿಟರ ಚಿತ್ತದ ಶಂಕುಗಳಲ್ತೆ ಸಂತತಂ ೩೩೭

ಅಲರ ಸರಂಗಳಿಂ ಜಗಮನಂಡಲೆಯಲ್ ಮದನಂ ಜಯಕ್ಕೆ ಬೆ
ಬಲವೆನಗೆಂದು ನೆಮ್ಮುವೆದೆಯಾದುದಱಿಂ ಸುವಿಟರ್ ನಿರಂತರಂ
ಲಲನೆಯ ಚೆಲ್ವ ನುಣ್ದೊಡೆಗಳಂ ಪದಪಿಂ ರತಿಪಂಗೆ ಯುದ್ಧದೊಳ್
ತೊಲಗದ ಕಂಭವೆನ್ನದೆಳೆವಾಳೆಯ ಕುಂಭಮನೇಕೆ ಪೋಲಿಪರ್ ೩೩೮

ಸತತಮನಂಗನುಂ ರತಿಯುಮುತ್ಸವಕೇಳಿಯೊಳಿಪ್ಪೆವೆಂದು ತ
ಮ್ಮತಿಶಯ ಹಸ್ತಕೌಶಲತೆಯಿಂ ವಿಗೆ ಬಟ್ಟಿದುವಾಗೆ ಮಾಡಿದಾ
ಕೃತಕ ನಗಂಗಳೆಂಬ ತೆಱದಿಂ ಕಡು ಬೆಟ್ಟಿದುವಾಗಿ ರಂ[ಜಿಕುಂ]
ಸತಿಯ ನಿತಂಬಮುರ್ವಿಪಮೃಗಾವಳಿಗುಕ್ಕೆವಡಿಕ್ಕೆಯೆಂಬಿನಂ ೩೩೯

ಸರಸತಿ (ಪರಸತಿ)ಯೆನಿಪಾ ತರುಣಿಯ
ಗುರುತರ ನಿರ್ಮಲ ನಿತಂಬತಟಮಂ ನೋಡಲ್
ವಿರಹಿಗಳ ನಯುಲತೆಯುಂ
ಕುಱಿಸದೆ ಪಲ್ಲವಿಸದುರ್ಬದಿರ್ಕುಮೆ ಸತತಂ ೩೪೦

ಮೃದುವಾದ ಹೆದೆಯೆಂಬುತೆ ಅಭಿವೃದ್ಧಿಗೊಂಡು ಕಣ್ಣುಗಳಿಗೆ ಪ್ರೀತಿಕರವಾಗಿ ಒಟ್ಟುಗೂಡಿ ಅತ್ಯಧಿಕವಾದ ಕಾಂತಿಯಿಂದ ಒಳ್ಳಿತಾದ ಆ ಹೆಂಗಸಿನ ಮೀನಖಂಡಗಳು ವಿಟರ ಮನಸ್ಸಿಗೆ ಸದಾ ಬಾಣಗಳಂತಿದ್ದುವಲ್ಲವೆ ? ೩೩೮. ಮದನನು ಪುಷ್ಪಬಾಣ ಗಳಿಂದ ಜಗತ್ತನ್ನು ಗೋಳಾಡಿಸಲು ತನಗೆ ವಿಜಯಕ್ಕೆ ನೆರವಾಗುವುದೆಂದು ನೆಚ್ಚಿದ ಸ್ಥಳವಾದುದರಿಂದ, ತರುಣಿಯ ಸುಂದರವಾದ ನುಣ್ದೊಡೆಗಳನ್ನು ರಸಿಕರು ಸರ್ವದಾ ಪ್ರೀತಿಯಿಂದ ಮನ್ಮಥನಿಗೆ ಯುದ್ಧದಲ್ಲಿ ಅಜೇಯವಾದ ವಿಜಯಸ್ತಂಭದಂತಿದೆಯೆನ್ನದೆ (ಅವುಗಳನ್ನು) ಎಳೆಬಾಳೆಯ ಕಂದುಗಳಿಗೇಕೆ ಹೋಲಿಸುವರೋ (ಕಾಣೆ). ೩೩೯. ಸರ್ವದಾ ಮನ್ಮಥನೂ ರತಿಯೂ ಉತ್ಸವಕ್ರೀಡೆಯಲ್ಲಿ ಇರುವೆವೆಂದು ಅತಿಶಯವಾದ ಕೈಚಳಕ ದಿಂದ ವಿಶೇಷವಾಗಿ ಪುಷ್ಟವಾಗಲು ನಿರ್ಮಿಸಿದ ಕೃತಕವಾದ ಬೆಟ್ಟಗಳೋ ಎಂಬಂತೆ, ತರುಣಿಯ ತೊಡೆಗಳು ರಾಜರೆಂಬ ಮೃಗಸಮೂಹಕ್ಕೆ ಉತ್ಸಾಹವೀಯುವ ತಂಗು ದಾಣವೋ ಎಂಬಂತೆ ತುಂಬ ದಷ್ಟಪುಷ್ಟವಾಗಿ ವಿರಾಜಿಸುತ್ತವೆ. ೩೪೦. ಸರಸ್ಸುಳ್ಳವಳೋ ಎಂಬಂತಹ ಆ ತರುಣಿಯ ದೊಡ್ಡದಾದ ಪವಿತ್ರವಾದ ತೊಡೆಗಳ ದಡವನ್ನು ನೋಡಲು, ವಿರಹಿಗಳ ಕಣ್ಣೆಂಬ ಬಳ್ಳಿ ಸರ್ವದಾ ಮೊಳಕೆಯೊಡೆಯದೆ, ಚಿಗುರದೆ, ಉಬ್ಬದೆ ಇರು

ಮೃಗನೇತ್ರೆಯ ಬಡನಡುವಂ
ಮುಗುಳಂಬಿಂ ಮದನನೆಚ್ಚ ಕಲೆಗುಟಿಯಂತಾ
ವಗಮೆಸೆದಿರ್ದುದು ಗಂಭೀ
ರಗುಣಂಬೆತ್ತಿರ್ದ ನಾಭಿ ಭೀಮಾತ್ಮಜೆಯಾ ೩೪೧

ಶೃಂಗಾರಂ ಕಾಂತೆಯ ಸ
ರ್ವಾಂಗವನಾವರಿಸಲಡರ್ದ ನಿರ್ಮಳ ಸೋಪಾ
ನಂಗಳಿವೆಂಬಂತೆಸೆಗುಂ
ಕಂಗೊಳಿಪ ವಳಿತ್ರಯಂಗಳಾ ಕೋಮಳೆಯಾ ೩೪೨

ಮನಸಿಜನಸಿತಲತೆಗೆ ನಿ
ರ್ವನೆ (?) ಹೊಗರೆತ್ತಿದಂತೆ ನುಣ್ಪಂದೆಸೆಗುಂ
ಜನನಯನಾಂಜನವೆಂಬಂ
ತನುನಯದಿಂ ರೋಮರಾಜಿ ಭೀಮಾತ್ಮಜೆಯಾ ೩೪೩

ನಾರಿ ಧರಿತ್ರಿಯೊಳ್ ಜನಿಸಿದಾಗಳೆ ತೆಳ್ಪಸಿಟೊಳ್ ಸಮಸ್ತಶೃಂ
ಗಾರರಸಂ ಕಳಾಳಿ ಪುಗುತಂ(ಮ?)ದು ಮನೋಹರಮಾರ್ಗವೆಂಬ ವಿ
ಸ್ತಾರವನಪ್ಪುಕೆಯ್ದು ವಿಟಲೋಚನಮಂ ಸೆಟೆಗೆಯ್ದು ಮಂಗಳಾ
ಕಾರಟನಿರ್ಪ ನಾಭಿವಿವರಂ ಮೆಱೆಗುಂ ಶತಪತ್ರನೇತ್ರೆಯಾ . ೩೪೪

ತ್ತದೆಯೆ ? ೩೪೧. ಮನ್ಮಥನ ಪುಷ್ಪಬಾಣದಿಂದ ಹರಿಣಾಕ್ಷಿಯ ಬಡ ನಡುವನ್ನು ಹೊಡೆದ ಗುರುತಿನ ಗುಳಿಯೋ ಎಂಬಂತೆ ಗಾಂಭೀರ್ಯ ಲಕ್ಷಣವನ್ನು ಪಡೆದ ಭೀಮ ರಾಜನ ಮಗಳಾದ ದಮಯಂತಿಯ ಹೊಕ್ಕಳು ಸರ್ವದಾ ತೋರಿಬರುತ್ತಿದ್ದಿತು. ೩೪೨. ಶೃಂಗಾರವು ತರುಣಿಯ ಅವಯವಗಳನ್ನೆಲ್ಲ ಆವರಿಸಲು ಅಡರಿದ ಪವಿತ್ರವಾದ ಮೆಟ್ಟಲುಗಳಿವೋ ಎಂಬಂತೆ ಕೋಮಲೆಯ ರಾರಾಜಿಸುವ ವಳಿತ್ರಯಗಳು ತೋರಿ ಬಂದವು. ೩೪೩. ಮನ್ಮಥನ ಕಪ್ಪಾದ ಬಳ್ಳಿಗೆ.......ಕಾಂತಿ ಬಂದಿತೋ ಎಂಬಂತೆ, ಜನರ ಕಣ್ಣಿಗೆ ಅಂಜನವೋ ಎಂಬಂತೆ ದಮಯಂತಿಯ ರೋಮಸಮೂಹವು ಪ್ರೀತಿಯಿಂದಲೂ, ಮೃದುವಾಗಿಯೂ ತೋರಿಬಂದಿತು. ೩೪೪. ತರುಣಿ ಭೂಮಂಡಲದಲ್ಲಿ ಹುಟ್ಟಿದೊಡನೆಯೇ ತೆಳುವಾದ ಹೊಟ್ಟೆಯಲ್ಲಿ ಸಮಸ್ತ ಶೃಂಗಾರ ರಸವೂ ಕಲಾಸಮೂಹವೂ ಪ್ರವೇಶಿಸುವಲ್ಲಿ (ಆದ) ಮನೋಜ್ಞವಾದ ದಾರಿಯೋ ಎಂಬುತೆ, ವೈಶಾಲ್ಯದಿಂದೊಡಗೂಡಿ, ರಸಿಕರ ಕಣ್ಣುಗಳನ್ನು ಆಕರ್ಷಿಸಿ, ಶುಭಾಕೃತಿ ಯಿಂದ ಇರುವ ತಾವರೆಗಣ್ಣಿನ ದಮಯಂತಿಯ ಹೊಕ್ಕಳ ವಿವರವು ಮೆರೆಯಿತು

ಅಡಿಗಡಿಗೆ ಮನಸಿಜಂ ಕಂ
ಡೆಡೆಯೊಳ್ ದಮಯಂತಿ ಪದುಳವೆಯೆಂದಪ್ಪಲ್
ಕಡುಬಡವಾದುದಲ್ಲದೀ
ಬಡತನವೆಲ್ಲಿಯದು ಬಗೆಯೆ ನೃಪಪುತ್ರಿಕೆಯೊಳ್ ೩೪೫

ತನ್ನೊಡಹುಟ್ಟಿದ ಜಘನಸ
ಮುನ್ನತಿಯಂ ಕಂಡು ಕಂಡು ಬಡವಾಗಿರ್ದಾ
ಕನ್ನೆಯ ಸೆಳೆನಡುವುಂಟಿ
ಲ್ಲೆನ್ನಿಸಲರಿದೆಂಬ ತೆಱದಿನೇನೊಪ್ಪಿದುದೋ ೩೪೬

ನಳಿತೋಳ್ಗಳ್ ಭುಜಗಮೃಗಾ
ವಳಿ ಪಾಶನಖಪ್ರಸೂನೋತ್ಕರ ಸಮ್ಮಿಳಿ (?)
ತ ಲತಾಳಿಗಳಂ ಗಜತೂ
ಲಾಲಾನದ ದಂಡವೆನ್ನದೇನೆಂಬುದವಂ ೩೪೭

ವ್ರಣಕಿಣಕುಂಭಮಂ ಸದೃಶವೆನ್ನದೆ ನಿತ್ಯಮಗಲ್ವ ಕೋಕಮಂ
ಗಣಿಸದೆ ಕಾಯ್ದು ಕಣ್ಣಿಡುವ ಹೋಗಳಸಂಗಳನಾವ ಮಾಟ್ಕಿಯಿಂ
ದೆಣೆಗುಡದೇಟ್ಗಿಯಿಂ ಬೆಳೆದು ನಿಶ್ಚಳಮೆಂಬಿನವೊಪ್ಪುವಂಗನಾ
ಗ್ರಣಿಯ ಕುಚಂಗಳಂ ರತಿಯಕಾಂತನ ಕಂದುಕವೆಂಬುದೊಪ್ಪದೇ ೩೪೮

ವುದು. ೩೪೫. ಮನ್ಮಥನು ನಿಮಿಷನಿಮಿಷಕ್ಕೂ ಕಂಡಕಂಡ ಕಡೆಯಲ್ಲಿ 'ಎಲೈ ದಮಯಂತಿಯೇ ಕುಶಲವೆ ?' ಎಂದು ಅಪ್ಪಿಕೊಳ್ಳಲು, ತುಂಬ ಬಡವಾದಳಲ್ಲದೆ, ವಿಚಾರಿಸಿ ನೋಡಲು ರಾಜಕುಮಾರಿಯಲ್ಲಿ ಬಡತನವುಂಟಾಗಲು ಕಾರಣವೇನಿದೆ? ೩೪೬. ತನ್ನೊಂದಿಗೇ ಹುಟ್ಟಿದ ತೊಡೆಯ ಬೆಳವಣಿಗೆಯುನ್ನು ನೋಡಿ ನೋಡಿ ಕೃಶವಾದ ಆ ಕುಮಾರಿಯ ಸೆಳೆನಡು (ಸೊಂಟ) ಇದ್ದೂ ಇಲ್ಲವೆಂಬಂತೆ ಅಸಾಧ್ಯವೆನ್ನುವ ರೀತಿಯಲ್ಲಿ ಅದೇನು ಒಪ್ಪಿ ತೋರಿಬಂದಿತೋ ? ೩೪೭. ಹಾವು ಮೃಗಸಮೂಹಗಳಿಗೆ ಪಾಶಪ್ರಾಯ ವೆನ್ನಿಸಿ, ಉಗುರಿನ ಹೂಗಳ ರಾಶಿಯಿಂದ ಕೂಡಿದ ಬಳ್ಳಿಗಳಂತಹ (?) ನೀಳವಾದ ತೋಳು ಗಳನ್ನು ಆನೆಗಳನ್ನು ಕಟ್ಟಿಹಾಕುವ ಮರದ ದುಡವೆನ್ನದೆ ಬೇರೇನು ಹೇಳಲಾದೀತು ? ೩೪೮. ಗಾಯಗಳ ಕಲೆಯಿಂದ ಕೂಡಿದ ಆನೆಗಳ ಕುಂಭಸ್ಥಳವನ್ನು ಹೋಲುತ್ತವೆ ಎನ್ನದೆ, ಪ್ರತಿನಿತ್ಯವೂ ಅಗಲುವ ಚಕ್ರವಾಕಪಕ್ಷಿಗಳೆಂದು ಗಣಿಸದೆ, ಕಾದುಕೊಂಡಿದ್ದು ಕಣ್ಣಿಡುವ ಬಂಗಾರದ ಕಳಸಗಳಿಗೆ ಯಾವುದಾದರೂ ಒಂದು ಬಗೆಯಲ್ಲಿ ಜೋಡಿಯಾಗದೆ, ಉನ್ನತಿ ಯಿಂದ ಬೆಳೆದು ಅಚಲವೋ ಎಂಬಂತೆ ಆ ತರುಣಿವರ್ಯಳ ಮೊಲೆಗಳನ್ನು ರತಿಪತಿಯಾದ

ಮನಸಿಜರಾಜ್ಯಲಕ್ಷ್ಮಿ [ಗೆ] ಸಮಂತಭಿಷೇಕಮನೊಲ್ದು ಮಾಳ್ಪ ಮೋ
ಹನ ಮದಹಸ್ತಿ ಹಸ್ತದೊಳಮರ್ದ ಸುಧಾಪರಿಪೂರ್ಣಕುಂಭದಿಂ
ಬಿನವತಿವೃತ್ತದಿಂ ರುಚಿರ ಕಾಂತಿಯಿನುನ್ನತಿವೆತ್ತು ರಂಜಿಪಂ
ಗನೆಯ ಕುಚದ್ವಯಂ ವಿಟಮನೋಜಯಮಂ ನಯಮಂ ನಿಮಿರ್ಚುಗುಂ ೩೪೯

ಅಂಗಜನ ಮನದ ಬಯಕೆಯ
ಪೊಂಗೊಡನಗ್ಗಳದ ವಿಟರ ಬಯಕೆಯ ಪೂಜಾ
ಲಿಂಗಮವೆನ್ನದೆ ಸತಿಯ ಕು
ಚಂಗಳನಸದೃಶದಲೇಕೆ ವರ್ಣಿಪರರೆಬರ್ ೩೫೦

ಶೃಂಗಾರರಸಂ ತೀವಿದ
ಹೊಂಗಳಸಂ ಭುವನವಿಜಯ ಮನಸಿಜಮದಮಾ
ತಂಗ ಕಮನೀಯ ಕುಂಭಂ
ಜಂಗಮಲತೆ ಭೀಮಸುತೆಯ ಘನಕುಚಯುಗಳಂ ೩೫೧

ಸತಿಗೆ ಸಮಸಂದ ಹೃದಯ
ಶ್ರುತಿತ್ರಯಂ ಮೂರ್ತಿವೆತ್ತು ಪೊಱಪೊಣ್ಮಿದುವೆಂ
ಬತಿಶಯ ಕೋಮಳರೇಖಾ
ತ್ರಿತಯಂ ರಂಜಿಸುವ ಕಂಬುಕಂದರವೆಸೆಗುಂ ೩೫೨

ಮನ್ಮಥನ ಚೆಂಡುಗಳೆಂದರೆ ಒಪ್ಪದೆ ಇರಲಾಗುವುದೆ ? ೩೪೯. ಮನ್ಮಥನ ರಾಜ್ಯ ಲಕ್ಷ್ಮಿಗೆ ಚೆನ್ನಾಗಿ ಅಭಿಷೇಕವನ್ನು ಮೆಚ್ಚಿ ಮಾಡುವ ಆಕರ್ಷಕವಾದ ಮದ್ದಾನೆಯ ಸೊಂಡಿಲಿನಲ್ಲಿರುವ ಅಮೃತಪೂರ್ಣವಾದ ಕುಂಭಗಳೋ ಎನ್ನುವಂತೆ ಗುಂಡಗೆ ತುಂಬಿ ಕೊಂಡು ಮನೋಜ್ಞವಾದ ಪ್ರಭೆಯಿಂದ ಉನ್ನತಿಗೊಂಡು ಶೋಭಿಸುವ ತರುಣಿಯ ಎರಡು ಮೊಲೆಗಳೂ ವಿಟರ ಮನೋಜಯವನ್ನೂ ನಯವನ್ನೂ ಉಂಟುಮಾಡು ವಂತಿವೆ. ೩೫೦. ಅವುಗಳು ಮನ್ಮಥನ ಮನದಾಸೆಯ ಹೊಂಗೊಡ, ಶ್ರೇಷ್ಠರಾದ ವಿಟರ ಅಪೇಕ್ಷೆಯ ಪೂಜಾಲಿಂಗ ಎನ್ನದೆ, ಕೆಲವರು ತರುಣಿಯ ಮೊಲೆಗಳನ್ನು ಅಸಮಾನ ವಾದುವೆಂದು ಏಕೆ ವರ್ಣಿಸುವರು ! ೩೫೧. ಚಲಿಸುವ ಬಳ್ಳಿಯಂತಹ ಭೀಮರಾಜನ ಮಗಳ (ದಮಯಂತಿಯ) ಶ್ರೇಷ್ಠವಾದ ಎರಡು ಮೊಲೆಗಳೂ ಶೃಂಗಾರರಸವು ತುಂಬಿ ಕೊಂಡ ಚಿನ್ನದ ಕಳಶ (ಮತ್ತು) ಲೋಕವನ್ನೇ ಗೆಲ್ಲುವ ಮನ್ಮಥನೆಂಬ ಮದ್ದಾನೆಯ ಮನೋಹರವಾದ ಕುಂಭಸ್ಥಲವೇ ಸರಿ. ೩೫೨. ಸ್ತ್ರೀಗೆ ಸಲ್ಲುವ ಹೃದಯಶ್ರುತಿತ್ರಯ ಗಳೂ ಸಾಕಾರಗೊಂಡು ಹೊರಹೊಮ್ಮಿದುವೋ ಎಂಬಂತೆ ಅತಿಶಯವಾದ ಕೋಮಲ ವಾದ ಮೂರು ಗೆರೆಗಳಿಂದ ವಿರಾಜಿಸುವ ಶಂಖದಂತಹ ಕಂಠವು ತೋರಿಬರುವುದು.

ಮೃಗಶಿಶುನೇತ್ರೆಯಾನನರಸಂ ಕೆಳಸೋರ್ದಪುದೆಂಬ ಚಿಂತೆ ಕೈ
ಮಿಗೆ ಮದನಂ ಪ್ರವಾಳದೆಡೆಗಟ್ಟೆಯನೊಪ್ಪಿರೆ ಕಟ್ಟಿದಂತೆ ಕಾ
ಮಿಗಳತಿಜೀವನಕ್ಕೆ ನೆಲೆಯಾಗಿಸುವಾ ಪರಿಪೂರ್ಣದಿಂ ಕರಂ
ಸೊಗಸಿನ ಸೀಮೆಯಾದಧರಬಿಂಬಮನೇನೊಗಳ್ವೆಂ ಪುರಂಧ್ರಿಯಾ ೩೫೩

ನಲ್ಲಳ ವಿಮಳಸುಧಾಧರ
ಪಲ್ಲವವರ್ಥಿಸುವವರ್ಗೆ ಕಾಮಿನಿಯೊಲಿ[ಯ]ಲ್
ಬಲ್ಲವಕತತಿಗೆಯುದು ಸಂ
ಪಲ್ಲವವಲ್ಲದೆ ಸಮಗ್ರವೆನೆ ರಂಜಿಸುಗುಂ ೩೫೪

ವದನಸುಧಾಕರಬಿಂಬದೊ
ಳೊದವಿದ ವಟವಿಟಪಿಯೆಸೆವ ತನಿವಣ್ ತಾನ
ಪ್ಪುದಱಿಂದರುಣದ್ಯುತಿಯಿಂ
ಸುದತಿಯ ಬಿಂಬಾಧರಂ ಕರಂ ರಂಜಿಸುಗುಂ ೩೫೫

ವಿಮಳ ಸುಧಾಧರದಿಂದೊ
ದಮೃತದ ಪನಿ ಬಿರ್ದು ಬಿರ್ದು ಗುಳಿಯಾಯ್ತೆಂಬಂ
ತಮರ್ದೊಪ್ಪಂಬೆತ್ತಿರ್ದುದು
ರಮಣಿಯ ಚಿಬುಕಂ ನಿತಾಂತ ಕಾಂತಿಸ್ತಬಕಂ ೩೫೬

೩೫೩. ಹರಿಣಾಕ್ಷಿಯ ಮುಖರಸವು ಕೆಳಗೆ ತೊಟ್ಟಿಕ್ಕುವುದೆಂಬ ಚಿಂತೆ ಮೇರೆಮೀರಲು ಮನ್ಮಥನು ಹವಳದ ಅಣೆಕಟ್ಟನ್ನು ಅಣಿಯಾಗಿ ನಿರ್ಮಿಸಿರುವಂತೆ ಪ್ರಣಯಿಗಳ ತುಂಬು ಬದುಕಿಗೆ ಆಧಾರವೆನ್ನಿಸುವ ಸಂಪೂರ್ಣತ್ವದಿಂದ ಕೂಡಿ ವಿಶೇಷವೂ, ಸೊಬಗಿನ ಪ್ರಾಂತವೂ ಆದ ಆ ಚೆಲುವೆಯ ಕೆಳದುಟಿಯನ್ನು ಎಷ್ಟೆಂದು ಹೊಗಳಲಿ! ೩೫೪. ತರಳೆಯ ಪವಿತ್ರವಾದ ಅಮೃತದಂತಹ ಚಿಗುರುದುಟಿ, ತರುಣಿ ಒಲಿದಿದ್ದೇ ಆದರೆ ಅಪೇಕ್ಷಿಸುವ ರಸಿಕರ (?) ಸಮೂಹಕ್ಕೆ ಅದು ಚಿಗುರುಮಾತ್ರವೆನ್ನಿಸದೆ ಪರಿ ಪೂರ್ಣವೆಂಬಂತೆ (ಬಲಿತಂತೆ) ಪ್ರಕಾಶಿಸುವುದು. ೩೫೫. ಮುಖಚಂದ್ರಬಿಂಬದಲ್ಲಿರುವ ಆಲದಮರದ ಅರಣ್ಯದಲ್ಲಿ ವ್ಯಕ್ತವಾಗುವ ಮಾಗಿದ ಹಣ್ಣಾದುದರಿಂದ, ತರುಣಿಯ ತೊಂಡೆವಣ್ದುಟಿಯು ಕೆಂಪಾದ ಕಾಂತಿಯಿಂದ ವಿಶೇಷವಾಗಿ ಶೋಭಿಸುತ್ತದೆ. ೩೫೬. ಪವಿತ್ರವೂ ಅಮೃತಸದೃಶವೂ ಆದ ಕೆಳದುಟಿಯಿಂದ ಅಮೃತದ ತೊಟ್ಟು ಬಿದ್ದೂ ಬಿದ್ದೂ ಗುಳಿಯಾಯಿತೋ ಎಂಬಂತೆ ಸರ್ವದಾ ಕಾಂತಿಸಮೂಹಯುತವಾದ

ಸತತಂ ಲಜ್ಜಾವಿನಮ್ರಾನನಸರಸಿಜ ಸತ್ಕರ್ಣಿಕಾಕಾರದಿಂ ಸಂ
ಸ್ತುತಿವೆತ್ತಾಮೋದ ವಿಸ್ತಾರದಿನೆಸೆವ ಪುರಂಧ್ರೀಲಸನ್ನಾಸಿಕಂ ದೀ
ಧಿತಿಯಿಂ ಚೆಲ್ವಾದ ಮುಕ್ತಾಫಲಮವಿರಳಮಾಗಿರ್ದ ಚಿತ್ತಪ್ರಿಯರ್ಗಾ
ಯತದಿಂ ಪ್ರಾಣಾನಿಲಂ ನೂರ್ಮಡಿಸುವ ತೆಜನಂ ಮಾಳ್ಪುದೇಂ ಚಿತ್ರಮಾಯ್ತೋ ೩೫೭

ನವಮುಕ್ತಾಶುಕ್ತಿಕೆಯೆಂ
ಬ ವಿಶೇಷಕ್ಕುಪಮೆವೆತ್ತು ಶುಭಚರಿತಕಥಾ
ರ್ಣವನಾವೆಯೆನಿಪ ಸುದತಿಯು
ಕಿವಿಯಂ ಗವಿಯೆನ್ನದಿರ್ಪರೊಳರೆ ನಿತಾಂತಂ ೩೫೮

ತನ್ನಯ ರೂಪಂ ನೋಡಲ್
ಕನ್ನಡಿಯೊಂದೆಯ್ದದೆಂದೆರಟ್ಕನ್ನಡಿಯಂ
ಕನ್ನೆಯುಮರ್ಚಿದಳೆಂಬಂ
ತುನ್ನತಿಯಿಂ ಮೆಱೆದುದವಳ ಲಲಿತಕಪೋಲಂ ೩೫೯

ಮನಸಿಜಸಂಗನಾವಿರಹಕಾತರರಂ ತಿವಿಯಲ್ಕೆ ಪೆತ್ತ ಕೂ
ರ್ಮೊನೆಯಲಗೋ ವಿಟರ್ಗೆ ಮದನಾಗಮಮಾರ್ಗವನೊಪ್ಪೆ ತೋರ್ಪ ಮಿಂ
ಚಿನ ಬೆಳಗೋ ಭುಜಂಗಮೃಗಸಂಗಮನಾರ್ದೆಸೆಯಲ್ ತೊಡರ್ಚಿದಂ
ಬಿನ ಬೆಳಗೋ ಎನಲ್ ಸೊಗಯಿಸಿಕುಂ ಕಡೆಗಣ್ ಶತಪತ್ರನೇತ್ರೆಯಾ ೩೬೦

ತರುಣಿಯ ಗಲ್ಲದಲ್ಲಿ ಅಮೃತವು ಒಪ್ಪುವಂತಿದ್ದಿತು. ೩೫೭. ಸರ್ವದಾ ನಾಚಿಕೆಯಿಂದ ಬಾಗಿದ ಮುಖಪದ್ಮದ ಕರ್ಣಿಕೆಯ (ಬೀಜಕೋಶದ) ಆಕೃತಿಯಿಂದ ಸ್ತೋತ್ರಾರ್ಹವೂ ಅಪರಿಮಿತವೂ ಆದ ಸಂತೋಷದಿಂದ ತೋರಿಬರುವ ಸುಂದರಿಯ ಶೋಭಾವಹವಾದ ಮೂಗು ಕಾಂತಿಯಿಂದ ಮನೋಜ್ಞವಾದ ಮುತ್ತಿನ ಹಣ್ಣೆನ್ನಿಸಲು, ಅಸಂಖ್ಯಾತರಾದ ಹೃದಯಪ್ರಿಯರಿಗೆ ಆಗತ್ಯವಾದ ಪ್ರಾಣವಾಯುವು ನೂರುಮಡಿಯಾಗುವ ರೀತಿಯನ್ನು ಮಾಡತಕ್ಕುದು ಎಷ್ಟು ವಿಚಿತ್ರವಾದುದೋ! ೩೫೮. ಹೊಸದಾದ ಮುತ್ತಿನ ಚಿಪ್ಪೆಂಬ ವಿಶೇಷಕ್ಕೆ ಸಾದೃಶ್ಯವಾಗಿ ಸಚ್ಚರಿತ್ರೆಯೆಂಬ ಕಥಾಸಮುದ್ರಕ್ಕೆ ನೌಕೆಯೋ ಎನ್ನಿಸುವಂತಹ ತರುಣಿಯ ಕಿವಿಯನ್ನು ದೊಡ್ಡ ಗವಿಯೆನ್ನದೆ ಇರುವವರು ಇದ್ದಾರೆಯೆ ? ೩೫೯. ತನ್ನ ಸ್ವರೂಪವನ್ನು ನೋಡಿಕೊಳ್ಳಲು ಒಂದು ಕನ್ನಡಿ ಸಾಲದೋ ಎಂಬಂತೆ ಕನ್ಯೆಯು ಎರಡು ಕನ್ನಡಿಗಳನ್ನು ಧರಿಸಿರುವಳೋ ಎಂಬಂತೆ ಆಕೆಯ ಸುಂದರವಾದ ಕೆನ್ನೆಗಳು ಅತ್ಯುನ್ನತವಾಗಿ ಮೆರೆದುವು. ೩೬೦. ಮನ್ಮಥನು ಸ್ತ್ರೀಯರ ಅಗಲಿಕೆಯಿಂದ ಕಾತರಿಸುತ್ತಿರುವವರನ್ನು ತಿವಿಯಲೆಂದು ಪಡೆದ ಹರಿತವಾದ ಮೊನೆಯುಳ್ಳ ಕತ್ತಿಯೋ, ವಿಟರಿಗೆ ಮನ್ಮಥಶಾಸ್ತ್ರಮಾರ್ಗವನ್ನು ಒಪ್ಪಿ ತೋರಿಸುವ ಮಿಂಚಿನ ಕಾಂತಿಯೋ, ವಿಟರೆಂಬ ಪ್ರಾಣಿಗಳ ಸಮಾಗಮವನ್ನು ಬೊಬ್ಬಿರಿದು ಘೋಷಿಸಲು ತೊಟ್ಟ ಬಾಣದ ಬೆಳಗೋ

ಚಳನಯುನಂಗಳಂ ಕುಸುಮಸಾಯಕನೊಪ್ಪಿರೆ ಕೊರ್ತು ಮಾಡಿದಂ
ಪಟವಿಗೆಯುಂ ತನೂದರಿಯಪಾಂಗ ಮರೀಚಿಗಳಿಂದ ಮಾಡಿದಂ
ಪಳಹರವಂ ಕರಂ ತನಗೆ ವಜ್ರದ ವರ್ಮವನೊಲ್ದು ಮಾಡಿದಂ
ಬೆಳತಿಗೆ ಕಣ್ಣ ಡಾಳವನೆನಲ್ ಮೆಱೆಗುಂ ನಯನಂ ಮೃಗಾಕ್ಷಿಯಾ ೩೬೧

ಅನುಪಮಕಾಂತಿಯಿನೊಪ್ಪುವ
ವನರುಹವದನೆಯ ವಿಶಾಲ ಲೋಚನಯುಗವಂ
ಮನಸಿಜನ ಕಯ್ಯ ಕವಲಂ
ಬೆನಲಲ್ಲದೆ ಪೆಱತನುಪಮೆಗೆಯ್ವುದನುಚಿತಂ ೩೬೨

ಎವೆಗಳೆಸಳೊಸರ್ವ ಪಾಳಂ
ನವಮಧುರಸಮೆಸೆವ [ಕಪ್ಪು] ಮಱಿದುಂಬಿಯೆನಲ್
ಯುವತಿಯ ಲೋಚನಯುಗವಂ
ಕುವಲಯ ಜಲಜಕ್ಕೆ ಸದೃಶಮೆಂಬುದು ಪ್ರಸಿಯೇ ೩೬೩

ನಯನತ್ರಿಭಾಗವಾಯ್ತಾ
ದಿಯೊಳಚ್ಚರಿಯಿಂ ತ್ರಿವರ್ಗಮವು ಪಚ್ಚುಗೊಳಲ್
ಪ್ರಿಯದಿಂದಲ್ಲದೊಡಬಲೆಯ
ನಯನವಿಭಾಗಕ್ಕೆ ಕಾರಣಂ ಪೆಱತುಂಟೇ ೩೬೪

ಎನ್ನುವಂತೆ ತಾವರೆಗಣ್ಣುಳ್ಳ ಆಕೆಯ ಕಡೆಗಣ್ಣು ಸೊಗಯಿಸುತ್ತದೆ. ೩೬೧. ಮನ್ಮಥನು ತನಗೆ ಒಪ್ಪುವಂತೆ ಚಂಚಲವಾದ ಕಣ್ಣುಗಳನ್ನು ಒಲಿದು ಮಾಡಿದನು. ಆ ತರಳೆಯ ಕಡೆಗಣ್ಣ ನೋಟಗಳಿಂದ ಬಾವುಟವನ್ನು ಮಾಡಿದನು. ತನಗೆ ಬೇಕಾದ ಧ್ವಜವನ್ನೂ (?) ವಜ್ರಕವಚವನ್ನೂ ಬಿಳುಪಾದ ಕಣ್ಣಿನ ಪ್ರಕಾಶವನ್ನೂ ಮೆಚ್ಚಿ ಮಾಡಿದನೋ ಎಂಬಂತೆ ಹರಿಣಾಕ್ಷಿಯ ಕಣ್ಣುಗಳು ಶೋಭಿಸುತ್ತಿದ್ದುವು. ೩೬೨. ಅಸದೃಶವಾದ ಕಾಂತಿಯಿಂದೊಪ್ಪುವ ಪದ್ಮಾಸನೆಯ ವಿಸ್ತಾರವಾದ ಕಣ್ಣುಗಳೆರಡನ್ನೂ ಮನ್ಮಥನ ಕೈಯೊಳಗಿರುವ ಕವಲಂಬು ಎನ್ನದೆ, ಬೇರೊಂದಕ್ಕೆ (ಅವುಗಳನ್ನು) ಹೋಲಿಸುವುದು ಅನುಚಿತವಾದದ್ದು. ೩೬೩. ಕಾಂತಿಸೂಸುವ ಕಣ್ಣರೆಪ್ಪೆಗಳು ಎಸಳುಗಳು, ಹೊಸದಾದ ಮಧುರಸವನ್ನು ವ್ಯಕ್ತಪಡಿಸುವ ಅಂಜನ (ಕಾಡಿಗೆ) ದುಂಬಿಯ ಮರಿಯೆನ್ನಿಸಿದರೆ, ತರುಣಿಯ ಕಣ್ಣುಗಳೆರಡನ್ನೂ ಕನ್ನೈದಿಲೆ, ತಾವರೆಗಳಿಗೆ ಸಮಾನವಾದುವೆನ್ನುವುದು ಸುಳ್ಳಾದೀತೆ ? ೩೬೪. ಮೊತ್ತಮೊದಲಿನಲ್ಲಿ ಮೂರು ವರ್ಗಗಳೂ (ಗುಣತ್ರಯ ? ಧರ್ಮಾರ್ಥ ಕಾಮಗಳು) ಆಶ್ಚರ್ಯಕರವಾಗಿ ತಮ್ಮತಮ್ಮಲ್ಲಿ ಅಭಿಮಾನದಿಂದ ಹಂಚಿಕೊಳ್ಳಲು ಕಣ್ಣು ಮೂರು ಭಾಗವಾಯಿತು. ಹಾಗಿಲ್ಲದಿದ್ದಲ್ಲಿ ಆ ಹೆಣ್ಣಿನ ಕಣ್ಣಿನ ವಿಭಾಗಕ್ಕೆ ಬೇರೆ ಕಾರಣ

ಮದನಂ ಪ್ರಿಯದಿಂ ನಯನಾಂ
ತದೊಳಂಜನರೇಖೆದೆಗೆವ ಪದದೊಳ್ ಮಱೆದೋ
ವದಿ(ದೆ ?) ಮೇಲೆ ರೇಖೆದೆಗೆದಂ
ದದಿನೆಸೆಗುಂ ನಿಮಿರ್ದ ಪುರ್ಬು ಕಮಲಾನನೆಯಾ ೩೬೫

ವನಿತೆಯ ಮುಖವಾದಂ ಶಶಿ
ಯೆನಗಿನ್ನಿವಳುತ್ತಮಾಂಗವೆಡೆಯೆಂದೊಲ್ದಾ
ತನ ಕಪ್ಪು ನೆಲಸಿದತ್ತೆನೆ
ಯನುನಯದಿಂ ಕುಟಿಲಕುಂತಳಂ ರಂಜಿಸುಗುಂ ೩೬೬

ಆಲಿವರಲ್ಗಳನೊಳಕೊಂ
ಡಾಲಂಬಿಸುವಮಳ ನೀಲಮೇಘದ ತೆಱನಂ
ಪೋಲಿಸಲೊಲ್ಲದೆ ಪೆಱತಂ
ಪೋಲಿಸುವುದೆ ಸತಿಯ ಮಿಸುಪ ಪೊಸಪೂಮುಡಿಯಂ ೩೬೭

ಹಿಮಕರಬಿಂಬಮಂ ಸುಧೆಯೊಳದ್ದಿದವೊಲ್ ನಯಕಾಂತಿವೆತ್ತ ಚೆ
ಲ್ವಮರ್ದ ಮುಖಂ ಪ್ರವಾಳಲತೆಯಂ ಪೊಸಮಾಣಿಕದೊಪ್ಪವಿಟ್ಟವೊಲ್
ನಿಮಿರ್ದಧರಂ ಮನೋಜನಲಗಂ ಕುಡಿಮಿಂಚಿನೊಳದ್ದಿದಂತೆ ತೋ
ರ್ಪಮಳವಿಳೋಚನಂ ಮೆಱೆವುತಿರ್ದವು ನೀರಜಪತ್ರನೇತ್ರೆಯಾ ೩೬೮

ಮಿರುವುದೆ ? ೩೬೫. ಮನ್ಮಥನು ಪ್ರೀತಿಯಿಂದ ಕಣ್ಣಿನ ಅಂಚಿನಲ್ಲಿ ಕಾಡಿಗೆಯ ರೇಖೆಯನ್ನು ಎಳೆಯುವ ಸಂದರ್ಭದಲ್ಲಿ ಮರೆತು ಗಮನಿಸದೆ ಗೆರೆಯನ್ನು ಬರೆದನೋ ಎಂಬಂತೆ ಪದ್ಮಮುಖಿಯ ನಿಡಿದಾದ ಹುಬ್ಬು ತೋರಿಬರುತ್ತಿದ್ದಿತು. ೩೬೬. ನನಗೆ ಈ ತರುಣಿಯ ಮುಖವೇ ಚಂದ್ರನಾದನು. ಇನ್ನು ಈಕೆಯ ಶಿರಸ್ಸೇ (ತಕ್ಕ) ಸ್ಥಳವೆಂದು ಮೆಚ್ಚಿ ಚಂದ್ರನ ಕಲೆ ನೆಲಸಿತ್ತೋ ಎಂಬಂತೆ, ಕೊಂಕು ಕೊಂಕಾದ ಕೂದಲು ಪ್ರೀತಿಯಿಂದ ಶೋಭಾಯಮಾನವಾಗಿದ್ದಿತು. ೩೬೭. ಆಲಿಕಲ್ಲುಗಳನ್ನು ಧರಿಸಿ ಜಗ್ಗುತ್ತಿರುವ ಶ್ರೇಷ್ಠವಾದ ಕಪ್ಪುಮೋಡದ ಪ್ರಕಾರದೊಂದಿಗೆ ಹೋಲಿಸುವುದನ್ನು ಹೊರತು, ತರುಣಿಯ ಮಿರುಗುವ ಹೊಸಮುಡಿಯನ್ನು ಬೇರೊಂದಕ್ಕೆ ಹೋಲಿಸಬಹುದೆ ? ೩೬೮. ಚಂದ್ರಬಿಂಬವನ್ನು ಅಮೃತದಲ್ಲಿ ತೊಯ್ದಂತೆ ನಯಕಾಂತಿಗಳಿಂದ ಕೂಡಿ ಸೌಂದರ್ಯಯುತವಾಗಿದ್ದ ತಾವರೆದಳದಂತಹ ಕಣ್ಣುಳ್ಳ ದಮಯಂತಿಯ ಮುಖವೂ, ಹವಳದ ಬಳ್ಳಿಯನ್ನು ಹೊಸಮಾಣಿಕ್ಯದಿಂದ ಒಪ್ಪವಿಟ್ಟಂತೆ ಮುಂದೆ ಬಾಗಿದ್ದ ಕೆಳದುಟಿಯೂ; ಮನ್ಮಥನ ಕತ್ತಿಯನ್ನು ಬಳ್ಳಿಮಿಂಚಿನಲ್ಲಿ ಅದ್ದಿದ ಹಾಗೆ ತೋರಿಬರುವ ಪವಿತ್ರವಾದ

ಅಕಳಂಕೇಂದುನಿಭಾಸ್ಯೆಯಾಭರಣದಿಂ ಕೆಯ್ಗೆಯ್ದು ಸೌಗಂಧಮಾ
ಲಿಕೆಯಂ ಹಸ್ತದೊಳಾಂತು ನಾಲ್ಕು ದೆಸೆಯಂ ತನ್ನಂಕದೊಳ್ ಸಂದ ನಾ
ಯಕನಂ ನೋಡುತ ಮಂದಹಾಸಮೆಸೆಯಲ್ ಸೌಂದರ್ಯಸಲ್ಲಾಪಕೌ
ತುಕಮಂ ಸಾಲಿಡುತಾಳಿಯರ್ಗೆ ನಡೆತಂದಳ್ ಕಾಂತೆ ಸಂಪ್ರೀತಿಯಿಂ ೩೭೯

ಬಾಲಕಿ ಸೌಗಂಧಿಕ ನವ
ಮಾಲಿಕೆಯಂ ಪಿಡಿದು ಬಂದಳಡರ್ದೀಕ್ಷಿಪ ಭೂ
ಪಾಲರ ನಿವಿಡ ವಿಲೋಚನ
ಮಾಲಿಕೆಯಂ ತಳೆದಳೆಂಬ ತೆಱದಿಂದಾಗಳ್ ೩೭೦

ನಾಕಿಗಳಂದದಯ್ವರಿವರಾಕೃತಿಯಂ ದಮಯಂತಿಕಾಂತೆಯಾ
ಲೋಕಿಪಳಲ್ಲದೆಮ್ಮನವಲೋಕಿಪಳೇ ವರಿಸಲ್ಕೆನುತ್ತತಿ
ವ್ಯಾಕುಳಚಿತ್ತರಾಗಿರೆ ನೃಪಾಲಕರಂಗಜಮಂತ್ರಮೂರ್ತಿಯಂ
ತಾಕೆ ಸಭಾಸ್ಥಳಕ್ಕೆ ವನಮಾಲಿಕೆಯಂ ಪಿಡಿದೊಯ್ಯನೆಯ್ದಿದಳ್ ೩೭೧

ಇದು ಮಾಣಿಕ್ಯದ ಮಾಲೆಯೋ ರುಚಿರಮುಕ್ತಾಮಾಲೆಯೋ ನೀಲರ
ತ್ನದ ನುಣ್ಮಾಲೆಯೊ ಪೇೞೆನಲ್ಕಧರರಾಗಂ ನೀಳ್ದಪಾಂಗಾಂಶು ನೀ

ಕಣ್ಣುಗಳೂ ವಿರಾಜಿಸುತ್ತಿದ್ದವು. ೩೭೯. ನಿಷ್ಕಳಂಕವಾದ ಚಂದ್ರಸದೃಶವಾದ ಮುಖವುಳ್ಳ ಆಕೆ ಆಭರಣದಿಂದ ಅಲಂಕೃತಳಾಗಿ, ಸೌಗಂಧಿಕ ಪುಷ್ಪಮಾಲೆಯನ್ನು ಕೈಯಲ್ಲಿ ಹಿಡಿದು, ನಾಲ್ಕು ದಿಕ್ಕುಗಳನ್ನೂ ತನ್ನ ಪಕ್ಕದಲ್ಲಿದ್ದ ನಾಯಕನನ್ನೂ ನೋಡುತ್ತಲೂ, ಮುಗುಳ್ನಗೆ ತೋರಿಬರಲು, ಸಖಿಯರಿಗೆ ಸೌಂದರ್ಯವಿಲಾಸದ ಆಶ್ಚರ್ಯವನ್ನು ಉಂಟುಮಾಡುತ್ತ ತರುಣಿ ಪ್ರೀತಿಯುಕ್ತಳಾಗಿ ನಡೆದುಬಂದಳು. ೩೭೦. ಆವರಿಸಿಕೊಂಡು ನೋಡುವ ರಾಜರ ವಿಸ್ತಾರವಾದ ಕಣ್ಣುಗಳ ಮಾಲಿಕೆಯನ್ನು ತಳೆದಳೋ ಎಂಬ ರೀತಿಯಲ್ಲಿ ಬಾಲಕಿ 'ಸೌಗಂಧಿಕಪುಷ್ಪದ ಹೊಸತಾದ ಹಾರವನ್ನು ಹಿಡಿದುಕೊಂಡು ಆಕೆ ಬಂದಳು. ೩೭೧. ದೇವತೆಗಳಂತಹ ಈ ಐವರ ಸ್ವರೂಪವನ್ನು ತರುಣಿಯಾದ ದಮಯಂತಿ ನೋಡುವಳಲ್ಲದೆ, ನಮ್ಮನ್ನು ವರಿಸಲು ಅವಲೋಕಿಸುವಳೆ ಎನ್ನುತ್ತ ರಾಜರು ತುಂಬ ಚಿಂತಾಕುಲ ಮನಸ್ಕರಾಗಿರಲು, ಆಕೆ ಮನ್ಮಥನ ಮೂರ್ತಿಯಂತೆ ವನಮಾಲಿಕೆಯನ್ನು ಹಿಡಿದುಕೊಂಡು ಕೂಡಲೆ ಸಭಾಮಂಟಪಕ್ಕೆ ಬಂದಳು. ೩೭೨. ಇದು ರತ್ನಗಳ ಮಾಲೆಯೋ, ಕಾಂತಿಯುಕ್ತವಾದ ಮುತ್ತಿನ ಮಾಲೆಯೋ, ನೀಲರತ್ನದ ಮೃದುವಾದ ಮಾಲೆಯೋ ಹೇಳೆಂಬಂತೆ, ಕೆಳದುಟಿಯ ಕೆಂಪು, ವಿಸ್ತಾರವಾದ ಕಡೆಗಣ್ಣಿನ ನೋಟದ ಕಿರಣ, ಘೋಷದಂತೆ ಕಪ್ಪಾದ ಬಣ್ಣವುಳ್ಳ ಕೂದಲಿನ ಮಿರುಗು, ಒಡವೆಗಳ

ರದವರ್ಣಾಳಕಕಾಂತಿಭೂಷಣಮಣಿಪ್ರದ್ಯೋತಿ ತೇರ್ಕೈಸಿ ಪ
ರ್ವಿದ ಸೌಗಂಧಿಕಮಾಲೆಯಂ ಧರಿಸಿದಳ್ ತನ್ವಂಗಿ ಹಸ್ತಾಗ್ರದೊಳ್ ೩೭೨

ಮಿಗೆ ತನುಕಾಂತಿಯಿಂದೆಸೆವ ಕಂಪಿನ ಸಂಪಗೆಮಾಲೆಯಂತೆ ಸೆ
ಳ್ಳುಗುರ್ಗಳ ಕಾಂತಿಯಿಂ ಸದೃಶಮಿಲ್ಲದ ಮಲ್ಲಿಗೆಮಾಲೆಯಂತೆ ಪಾ
ಣಿಗಳುರುಕಾಂತಿಯಿಂ ಸೊಬಗುಗುಂದದ ಬಂದುಗೆಮಾಲೆಯಂತೆ ತೋ
ರ್ಪಗಣಿತಗಂಧದಿಂ ಮಿಸುಪಮಾಲಿಕೆಯಂ ಪಿಡಿದಾಕೆಯಿರ್ದ್ದಳ್ ೩೭೩

ಆಬಲೆ ನಿಜಸ್ವಯಂವರಮಹೋತ್ಸವದೊಪ್ಪುವ ಪುಷ್ಪಮಾಲೆಯಂ
ನಿಬಿಡಕರಾಗ್ರದಿಂ ಪಿಡಿದಿರಲ್ ಮಱಿದುಂಬಿಯ ಬಂಬಲುಜ್ಜ್ವಲ
ಸ್ತಬಕನಿಭಕ್ಕೆ ಬಂದೆಱಗಿ ಝೇಂಕರಿಸಲ್ ಮೆಱೆದತ್ತು ನುಣ್ಣುರಂ
ಸೊಬಗಿನ ಡಂಗುರಂಬಿಡಿದು ಸಾಱುವವೊಲ್ ದಮಯಂತಿಕಾಂತೆಯಾ ೩೭೪

ನಱುಗಂಪು ಮೆಱೆವ ಸಂಪಗೆ
ಗೆಱಗಿದ ಮಱಿದುಂಬಿಯಂತೆ ಕಾಂತೆಯ ಕಯ್ಯೊಳ್
ಮಿಱುಗುವ ಪೂಮಾಲೆಗೆ ಮೆ
ಯ್ಮಱೆದಿರ್ದ್ದುವು ನೃಪವಿಲೋಚನಭ್ರಮರಂಗಳ್ ೩೭೫

ಮಣಿಪ್ರಭೆಗಳು ಪ್ರತಿಸ್ಪರ್ಧಿಸುತ್ತಿರಲು (?) (ಮೇಲುಗೈಯಾಗಿರಲು ?) ಆ ತರುಣಿ ಹಬ್ಬಿದ ಸೌಗಂಧಿಕಪುಷ್ಪದ ಹಾರವನ್ನು ಕೈತುದಿಯಲ್ಲಿ ಧರಿಸಿದ್ದಳು. ೩೭೩. ಅತ್ಯಧಿಕವಾದ ಶರೀರಕಾಂತಿಯಿಂದ ತೋರಿಬರುವ ಸುವಾಸನಾಯುಕ್ತವಾದ ಸಂಪಗೆಮಾಲೆಯಂತೆಯೂ, ನಿಡಿದಾದ ಉಗುರುಗಳ ಕಾಂತಿಯಿಂದ ಅಸಮಾನವಾದ ಮಲ್ಲಿಗೆಮಾಲೆಯಂತೆಯೂ, ಕೈಗಳ ಅಮಿತವಾದ ಕಾಂತಿಯಿಂದ ಸೌಂದರ್ಯವು ಕಡಮೆಯಾಗದ ಬಂದುಗೆಮಾಲೆಯಂತೆಯೂ ನಾನಾ ಸುಗಂಧಗಳಿಂದ ಸುವ್ಯಕ್ತವಾಗಿ ಹೊಳೆಯುವ ಪುಷ್ಪಮಾಲಿಕೆಯನ್ನು ಹಿಡಿದುಕೊಂಡು ಆಕೆ ಬಂದಳು. ೩೭೪. ತರುಣಿ ತನ್ನ ಸ್ವಯಂವರ ಮಹೋತ್ಸವದಲ್ಲಿ ಒಪ್ಪುವ ಹೂವಿನ ಹಾರವನ್ನು ಪುಷ್ಟವಾದ ಬೆರಳುಗಳ ತುದಿಯಿಂದ ಹಿಡಿದಿರಲು ಮರಿದುಂಬಿಗಳ ಗುಂಪು ಪ್ರಕಾಶಮಾನವಾದ ಹೂಗೊಂಚಲಿನ ಮೇಲೆ ಬಂದು ಕುಳಿತು ಝೇಂಕರಿಸಲು ತರಳೆ ದಮಯಂತಿಯ ಚೆಲುವಿನ ಡಂಗುರವನ್ನು ಹಿಡಿದು ಸಾರುವಂತೆ ಆ ನುಣ್ದನಿ ಮೆರೆದಿತ್ತು. ೩೭೫ ಒಳ್ಳೆಯ ಪರಿಮಳವನ್ನು ಬೀರುವ ಸಂಪಗೆ ಹೂವಿಗೆರಗಿದ ಮರಿದುಂಬಿಯಂತೆ, ತರುಣಿಯ ಕೈಯಲ್ಲಿ ಪ್ರಕಾಶಿಸುತ್ತಿರುವ ಹೂಮಾಲೆಗೆ

ವ॥ ಅನಂತರಂ

ಭಾರತಿ ಭೀಮನಂದನೆಯ ಗಾಡಿಯನೀಕ್ಷಿಸಲೆಂದು ಬಂದು ತ
ನ್ನಾರಿಯ ಮೇಳದಾಳಿಯರೊಳಾಕೆ ಕಳಾವತಿಯೆಂಬ ನಾಮ ವಿ
ಸ್ತಾರವನಾಂತು ತತ್ಸಮಯದೊಳ್ ದಮಯಂತಿಗೆ ದೇಶದು
ರ್ವೀರಮಣರ್ಕಳಂ ಪದೆದು ತೋಱಿಸುತಿರ್ದಳನೇಕ ಚಿತ್ರದಿಂ ೩೭೬

ವ॥ ಅದೆಂತೆನೆ

ಯುವತೀರತ್ನವಮೂಲ್ಯವಂತದು ಶಿರೋಲಂಕಾರವಾಗುತ್ತಿರಲ್
ನವರತ್ನಾಭರಣಂಗಳಂಗಕಷಣಂ ತಾವಾಗಳೇಬಾಚ್ತ್ರಿಯೆಂ
ದು ವಿಶೇಷಾಂಟರರಂಜಿತಾವಯವನೀತಂ ಬಾ[ಲ ?]ಳ ಭೂಪಾಳನು
ತ್ಸವದಿಂದೀಕ್ಷಿಸು ಕಾಂತೆಯೆಂದು ಕುಱುಪಂ ಕಣ್ಸನ್ನೆಯಿಂ ತೋಱಿದಳ್ ೩೭೭

ಅಳವಡಲುಟ್ಟ ಗಂಡುಡಿಗೆ ಮಿಂಚುವ ಪಲ್ ಕಮನೀಯ ವೇಣಿ ವ
ರ್ತುಳತಿಳಕಂ ತಳತ್ತಳಿಪ ಮೆಯ್ವೆಳಗುನ್ನತ ಕಂಬುಕಂಠವ
ಗ್ಗಳವೆನಿಸಲ್ ಮನಂಗೊಳಿಸಿ ಕರ್ಣದೊಳುಜ್ಜ್ವಲಚಂಪಕಂ
ತೊಳಗುವ ಧರ್ಮಶೀಲನತಿಸಜ್ಜನ ಗೂರ್ಜರನಬ್ಜಲೋಚನೇ ೩೭೮

ರಾಜರ ಕಣ್ಣುಗಳೆಂಬ ದುಂಬಿಗಳು ಮೈಮರೆತಿದ್ದುವು. ವ॥ ಆಮೇಲೆ ೩೭೬. ಶಾರದೆ ಭೀಮರಾಜನ ಮಗಳಾದ ದಮಯಂತಿಯ ಸೌಂದರ್ಯವನ್ನು ನೋಡಬೇಕೆಂದು ಬಂದು, ಆ ತರುಣಿಯ ಒಡನಾಡಿ ಸಖಿಯರ ವೃಂದದಲ್ಲಿ ಕಳಾವತಿಯೆಂಬ ಹೆಸರನ್ನು ತಾಳಿ, ಆ ಸಮಯದಲ್ಲಿ ದಮಯಂತಿಗೆ ನಾನಾ ದೇಶದ ರಾಜರುಗಳನ್ನು ಅನೇಕ ವೈಶಿಷ್ಟ್ಯಗಳಿಂದ ಒಲಿದುತೋರಿಸುತ್ತಿದ್ದಳು. ವ॥ ಅದು ಹೇಗೆಂದರೆ, ೨೭೭. ನಾರೀರತ್ನವೆಂಬುದು ಅಮೂಲ್ಯವಾದುದು. ಅದು ಹಾಗೆ ತಲೆಗೆ ಭೂಷಣವಾಗುತ್ತಿರಬೇಕಾದರೆ, ನವರತ್ನಖಚಿತ ವಾದ ಒಡವೆಗಳು ಶರೀರಕ್ಕೆ ತಾವು ಕ್ಲೇಶದಾಯಕವೂ ಅಪ್ರಯೋಜಕವೂ ಎಂದು ವಿಶೇಷ ರೀತಿಯಾದ ವಸ್ತ್ರರಂಜಿತ ಅಂಗಗಳುಳ್ಳ ಈತನು ಲಾಳಭೂಪಾಲ ! ಎಲೈ ಕಾಂತೆ, ಸಂತೋಷದಿಂದ ನೋಡು ಎಂಬುದಾಗಿ ಗುರುತನ್ನು ಕಣ್ಣಿನ ಸಂಜ್ಞೆಯಿಂದ ತೋರಿದಳು. ೩೭೮. ಉಟ್ಟ ಗಂಡುಡಿಗೆ ಹೊಂದಿಕೊಂಡಿರಲು, ಹೊಳೆಯುವ ಹಲ್ಲು, ಮನೋಹರವಾದ ಜಡೆ, ಗುಂಡಗಿರುವ ತಿಳಕ, ಥಳಥಳಿಸುವ ಶರೀರಪ್ರಭೆ, ಉನ್ನತವಾದ ಶಂಖದಂತಹ ಕಂಠ, ಶ್ರೇಷ್ಠವೆನ್ನಿಸುವಂತೆ ಮನಸ್ಸನ್ನು ಸೆಳೆಯುವ ಕಿವಿಗಳಲ್ಲಿ ಶೋಭಿಸುವ ಸಂಪಗೆ, ಬೆಳಗುವ ಧರ್ಮಪರ, ಒಳ್ಳೆಯ ನಡೆಯುಳ್ಳ (ಈತ), ಎಲೈ ತಾವರೆಗಣ್ಣಿನ ತರಳೆಯೆ,

ಕೋಪದೊ(ದ ?)ಳುರ್ಕಿಯೇ ತನಗೆ ಮೆಯ್ಸಿರಿ ಕರ್ಕಶದೇಹಿ ಸಂತತಂ
ಚಾಪಲಚಿತ್ತನುಗ್ರಮುಖನುದ್ಧತಸಾಹಸಿಕಂ ಪ್ರವಾಸಿ ಮಿ
ಥ್ಯಾಪರನಲ್ಪಕಾರ್ಯರತನೀತನನೀಕ್ಷಿಸು ಶಾಂತೆ ಕೋಂಕಣ
ಕ್ಷ್ಮಾಪತಿ ಕೋಂಕಣಂ ನಿನಗೆ ಕಿಂಕರನಪ್ಪೊಡೆ ಪಂಕಜೇಕ್ಷಣೇ ೩೭೯

ಸಂಗೀತಪ್ರಿಯನಲ್ಪಜೀವಿ ವಿಕಟಾಂಗಂ ಸಂತತಂ ಭೋಜನಾ
ಭ್ಯಂಗಾಸ್ನಾದಿ ನಿರಂತರಂ ವ್ಯಸನಿ ಕಾವ್ಯಾಲಾಪದೂರಂ ಸ್ಥಿರಂ
ಶೃಂಗಾರಾನ್ವಿತನೂರ್ಧ್ವ ರೋಮಶಭುಜಂ ನೋಡೀತನಂ ಕಾಂತೆ ಸ
ತ್ಸಂಗಕ್ಕಿರ್ದ ವರಾಳಭೂರಮಣನಂ ಕಾರುಣನೇತ್ರಂಗಳಿಂ ೩೮೦

ವಿಲಸದ್ರಕ್ತ ವಿಭೂಷಣದ್ಯುತಿಕರಂ ಸರ್ವಾಂಗವಂ ಪರ್ವಿ ನಿ
ರ್ಮಲರೂಪಂ ತಳೆದಿರ್ದನಾತನಧಿಕಂ ಪುಣ್ಯಾತ್ಮಕಂ ಧಾರ್ಮಿಕಂ
ಕುಲಪೂತಂ ಶುಚಿ ದೀರ್ಘದೇಹಿ ಸತತಂ ಭೋಗಪ್ರಿಯಂ ಸದ್ಭುಜಾ
ಬಲಯುಕ್ತಂ ಮಿಥಿಳೇಶನೀಕ್ಷಿಸೊಲವಿಂ ಶುಕ್ಲೇಶಬಿಂಬಾನನೇ ೩೮೧

ಸುಕೃತಿ ದಯಾಲು ತೀವ್ರಭುಜವಿಕ್ರಮಿ ಸತ್ಕುಲಜಾತನೂರ್ಜಿತ
ಪ್ರಕಟಗುಣಾಧಿಕಂ ಛಲಿ ಕಳಾಕುಶಲಂ ಸುಖಿ ದೀರ್ಘಸೂತ್ರಿ ಲೌ

ಗೂರ್ಜರ. ೩೭೯. ಕೋಪಾವೇಶವೇ ತನಗೆ ಶರೀರಸಂಪತ್ತು, ಒರಟು ದೇಹವುಳ್ಳವನು, ಸರ್ವದಾ ಚಂಚಲಮನಸ್ಕನು, ಭಯಂಕರವಾದ ಮುಖವುಳ್ಳವನು, ಉದ್ಧತ ಸಾಹಸಿ, ಪ್ರವಾಸಪ್ರಿಯ, ಸುಳ್ಳುಗಾರ, ಅಲ್ಪಕಾರ್ಯೋದ್ಯುಕ್ತನಾದ ಈತನೇ ಕೊಂಕಣದೇಶದ ಅಧಿಪತಿ. ಎಲೈ ತಾವರೆಗಣ್ಣುಳ್ಳ ಕಾಂತೆಯೇ, ಕೊಂಕಣನು ನಿನಗೆ ಸೇವಕನಾಗಬಯಸಿದರೆ ನೋಡು. ೩೮೦. ಸಂಗೀತಾಭಿಲಾಷಿ, ಅಲ್ಪಜೀವಿ, ವಿಕೃತ ಶರೀರವುಳ್ಳವನು, ಸರ್ವದಾ ಊಟ, ಸ್ನಾನಾದಿಗಳಲ್ಲಿ ಅನುರಕ್ತ, ಸರ್ವದಾ ವ್ಯಾಕುಲ ಚಿತ್ತ, ಕಾವ್ಯಾಲಾಪವರ್ಜಿತ, ಜಡ, ಶೃಂಗಾರಲೋಲ, ನಿಡಿದಾದ ಕೂದಲುಳ್ಳ ಭುಜವುಳ್ಳವನು, ಎಲೈ ಕಾಂತೆ, ವರಾಳರಾಜನಾದ ಈತನನ್ನು ದಯಾದೃಷ್ಟಿಗಳಿಂದ ನೋಡು. ೩೮೧. ಶೋಭಿಸುವ ಕೆಂಪಾದ ಒಡವೆಗಳ ಕಾಂತಿ ವಿಶೇಷವಾಗಿ ಎಲ್ಲಾ ಅವಯವಗಳನ್ನೂ ವ್ಯಾಪಿಸಿ, ಪವಿತ್ರವಾದ ರೂಪವನ್ನು ತಳೆದಿರುವ ಆತನೇ ತುಂಬ ಪುಣ್ಯಶಾಲಿ, ಧರ್ಮಪರ, ಸತ್ಕುಲಜ, ಶುಚಿ, ಉನ್ನತ ಶರೀರವುಳ್ಳವನು, ಸರ್ವದಾ ಭೋಗಪ್ರಿಯ, ಒಳ್ಳೆಯ ಭುಜಬಲಶಾಲಿ, ಮಿಥಿಳಾಧಿಪತಿ. ಎಲೈ ಚಂದ್ರಮುಖಿಯೇ ಪ್ರೀತಿಯಿಂದ ನೋಡು. ೩೮೨. ಸುಕೃತಶಾಲಿ, ದಯಾಳು, ಅಧಿಕಬಾಹು ಪರಾಕ್ರಮಿ, ಸದ್ವಂಶಜ, ಪ್ರವರ್ಧಮಾನನೂ, ಸುಪ್ರಸಿದ್ಧನೂ ಆದ ಅಧಿಕ ಗುಣಶಾಲಿ, ಛಲಗಾರ, ಕಲಾನಿಪುಣ, ಸುಖಪುರುಷ, ದೀರ್ಘಸೂತ್ರಿ (?), ಇಹ ಮತ್ತು ಪಾರಮಾರ್ಥಿಕ ಲಕ್ಷಣ

ಕಿಕ ಪರಮಾರ್ಥಲಕ್ಷಣವಿಚಕ್ಷಣನೀತನನೊಲ್ದು ನೋಡು ಭಾ
ವಕಿ ವರಕೋಸಲೇಶ್ವರನಧೀಶ್ವರನಪ್ಪೊಡೆ ಸತ್ಪಯೋಧರೇ ೩೮೨

ಕುಮತವಿಚಾರಿ ಗೋತ್ರಕಲಹಪ್ರಿಯನಾಗಮದ್ವೈದದೂರನ
ಕ್ರಮಯುತನರ್ಥರತ್ನಪತಿ ಮೂರ್ಖಜನಾಶ್ರಯನಿಂಗಿತಜ್ಞನ
ಸ್ತಮಿತ ವಿರೋಧಿಸೈನ್ಯನತಿಸಾಹಸಿ ಬಾಂಧವವೈರಿಯಿತ್ತಲು
ತ್ತಮಕುರುದೇಶವಲ್ಲಭನನೀಕ್ಷಿಸು ಪದ್ಮದಳಾಯತೇಕ್ಷಣೇ ೩೮೩

ಸತತಂ ಸತ್ಕವಿತಾಪ್ರಸಂಗನಿರತಂ ಸಂಗೀತ ಸಾಹಿತ್ಯವಿ
ಶ್ರುತನೌದಾರ್ಯಪರಂ ವಿಚಿತ್ರ ನವರತ್ನಾಲಂಕೃತಂ ಪಾಪವ
ರ್ಜಿತನತ್ಯಂತ ಕೃಪಾಲು ಭೋಗಿ ವನಿತಾಸಂಗಪ್ರಿಯಂ ನೋಡಲೇ
ಸತಿ ಕರ್ನಾಟನೃಪಾಳನಂ ಗುಣಗಣಕ್ಷೀರಾಬ್ಧಿ ಕಲ್ಲೋಲನು ೨೮೪

ಕುಟಿಲಶರೀರಿ ಧರ್ಮಪರನಾಗಮಕೋವಿದನಿಂಗಿತಜ್ಞನು
ತ್ಕಟ ವಿನಯೋಕ್ತಿಶೀಲನಬಲಾಜನಲೋಲನತೀವಧೂರ್ತನ
ಸ್ಫುಟ ಹೃದಯಂ ವಿಚಿತ್ರ ಧವಳಾಂಬರಶೋಭಿತನುಗ್ರವೈರಿ ದು
ರ್ಘಟನೆನಿಪಾಂಧ್ರಭೂಪತಿಯನಂಗನೆ ಭಾವಿಸಿ ನೋಡು ಗಾಡಿಯಿಂ ೩೮೫

ನಿಪುಣನಾದ ಈತನೇ ಶ್ರೇಷ್ಠವಾದ ಕೋಸಲೇಶ್ವರನು. ಸತ್ಪಯೋಧರೆಯಾದ (ಸುಸ್ತನಗಳುಳ್ಳ) ಭಾವಕಿಯೆ, (ನಿನಗೆ) ಒಡೆಯನಾಗುವ ಪಕ್ಷದಲ್ಲಿ ಮೆಚ್ಚಿ ನೋಡು. ೩೮೩. ದುರಾಲೋಚನಪರ, ಬಾಂಧವಕಲಹಾಸಕ್ತ, ಶಾಸ್ತ್ರದೈವಬಾಹಿರ, ಅಕ್ರಮನಿರತ ಸಂಪತ್ತು ರತ್ನಗಳ ಅಧಿಪತಿ, ಮೂರ್ಖರಿಗೆ ಆಶ್ರಯನು, ಬಲ್ಲಿದ, ಶತ್ರುಸೈನ್ಯಸಂಹಾರಕ, ಅತಿಬಲಶಾಲಿ, ಬಂಧುದ್ವೇಷಿ, ಇತ್ತಲಿರುವ ಉತ್ತಮ ಕುರುದೇಶದ ಒಡೆಯನನ್ನು ತಾವರೆದಳದಂತಹ ಕಣ್ಣುಳ್ಳವಳೆ ನೋಡು. ೩೮೪. ಸರ್ವದಾ ಸತ್ಕವಿತಾಪ್ರಸಂಗ ಮಗ್ನ, ಸಂಗೀತ ಸಾಹಿತ್ಯನಿಷ್ಣಾತ, ಉದಾರಿ, ವಿಶಿಷ್ಟವಾದ ನವರತ್ನಗಳಿಂದ ಅಲಂಕೃತನಾಗಿರುವವನು, ಪಾಪವಿಮುಕ್ತ, ಅತ್ಯಂತ ದಯಾಳು, ಭೋಗಿ, ಸ್ತ್ರೀಸಹವಾಸಪ್ರಿಯ ನೋಡುವುದೇನು ಹೆಣ್ಣೆ, ಗುಣಸಮೂಹವೆಂಬ ಅಮೃತಸಮುದ್ರದ ತೆರೆಯಂತಿರುವವನು ಕರ್ನಾಟ ರಾಜ. ೩೮೫. ವಕ್ರವಾದ ದೇಹವುಳ್ಳವನು, ಧರ್ಮಾಸಕ್ತ, ಶಾಸ್ತ್ರ ವಿಶಾರದ, ಬಲ್ಲಿದ, ಅಧಿಕವಾದ ವಿನಯೋಕ್ತಿನಿರತನು, ಸ್ತ್ರೀಜನಾನುರಕ್ತ, ಅತಿನೀಚ, ಅಸ್ಪಷ್ಟವಾದ ಹೃದಯವುಳ್ಳವನು, ಚಿತ್ರಮಯವಾದ ಶುಭ್ರವಸ್ತ್ರಶೋಭಿತ, ಭಯಂಕರವಾದ ವೈರಿಗಳಿಗೆ ಅಸಾಧ್ಯನೆನ್ನಿಸಿದ ಆಂಧ್ರಮಹಾರಾಜನನ್ನು, ಎಲೈ ಹೆಣ್ಣೇ, ಸುಂದರ

ಹಾರಾಢ್ಯಾಭರಣಂ ಸುಗಂಧಕುಸುಮಂ ದಿವ್ಯಾಂಬರಂ ರತ್ನಕೋ
ಟೀರಂ ಚಂದನ ಕುಂಕುಮಾಗರು ನಿಜಾಂಗಾಲೇಪನಂ ಸೂತ್ನಕ
ರ್ಪೂರಂ ಸಾರವನಾರತಂ ನೆಲಸಿದೀತಂ ಪಾಂಡ್ಯಭೂಪಾಲನೊ
ಲ್ದೋರಂತೀಕ್ಷಿಸು ಕಾಂತೆ ಕಾಂತತನುವಂ ಸಂಪ್ರೀತಿಯಿಂದಾ[ಂ]ತನಂ ೩೮೬

ಮೌಳಿಯೊಳಾಂತ ರತ್ನಮಕುಟಂ ಹಣೆಗಿಟ್ಟ ವಿಭೂತಿ ತೊಟ್ಟ ಭೂ
ಪಾಳಿ ವಿಳಾಸಿನೀನಿಕರವಿಕ್ಕುವ ಚಾಮರಮಿಂದ್ರಭೋಗಮು
ತ್ತಾಳ ಮನಂ ಶಿವಸ್ತುತಿಯಿನನಾರತವೊಪ್ಪುವ ಪುಣ್ಯದೇಹಿ ತಾಂ
ಚೋಳಮಹೀಭುಜಂ ಸುದತಿ ವಿಭಾವಿಸಿ ನೋಡು ನಿಜಪ್ರರೂಢಿಯಿಂ ೩೮೭

ಈತಂ ಸಿಂಹಮಹೀಪತಿ
ಯಾತಂ ಪೂರ್ವೇಮುಕಾಮಭೂಪಾಲಂ ಮ
ತ್ತೀತಂ ನೇಪಾಳಂ ತಾ
ನೀತಂ ಸೌಭಾಗನೃಪಾಲನೀತಂ ಗೌಡಂ ೩೮೮

ಮಲಯಜನೃಪಾಲನೀತಂ
ಕಳಿಂಗನೀತಂ ಮತಂಗನೀತಂ ಕಾಶೀ
ಸ್ಥಳವಲ್ಲಭನೀತಂ ಜಾಂ
ಗಲನೀತಂ ಮಾಗಧೇಶ್ವರಂ ತಾನೀತಂ ೩೮೯

ವಾಗಿ ಭಾವಿಸಿ ನೋಡು. ೩೮೬. ಹಾರವೇ ಮೊದಲಾದ ಆಭರಣಗಳುಳ್ಳವನು, ಸುವಾಸನಾಯುಕ್ತವಾದ ಹೂವನ್ನು ಮುಡಿದವನು. ಶ್ರೇಷ್ಠವಸ್ತ್ರಧಾರಿ, ರತ್ನಕಿರೀಟಿ, ಗಂಧ, ಕುಂಕುಮ, ಅಗರುಗಳನ್ನು ತನ್ನ ಶರೀರಕ್ಕೆ ಲೇಪಿಸಿಕೊಂಡಿರುವವನು, ಹೊಚ್ಚ ಹೊಸತಾದ ಕರ್ಪೂರಸಾರವನ್ನು ಸರ್ವದಾ ಪಡೆದಿರುವ ಈ ಪಾಂಡ್ಯಮಹಾರಾಜನ ಶೋಭಿಸುವ ಶರೀರವನ್ನು ಆತನನ್ನು, ಎಲೈ ತರುಣಿಯೆ, ಪ್ರೀತಿಪೂರ್ವಕವಾಗಿ ನೋಡು. ೩೮೭. ತಲೆಯಲ್ಲಿ ರತ್ನಕಿರೀಟವನ್ನು ಧರಿಸಿರುವವನು, ಹಣೆಗೆ ವಿಭೂತಿ ಇಟ್ಟುಕೊಂಡು, ಆಭರಣಗಳನ್ನು ಧರಿಸಿರುವವನು, ವಿಲಾಸಿನಿಯರ ಸಮೂಹದವರು ಬೀಸುವ ಚಾಮರಗಳು, ಇಂದ್ರವೈಭವದಿಂದ ದೊಡ್ಡ ಮನಸ್ಸುಳ್ಳವನು, ಸರ್ವದಾ ಶಿವಸ್ತುತಿಯಿಂದೊಪ್ಪುವವನೂ, ಪುಣ್ಯ ಶರೀರವುಳ್ಳವನೂ ತಾನಾದ ಚೋಳಭೂಪಾಲನೀತ, ಎಲೈ ತರುಣಿಯೆ, ಸಹಜವಾದ ಪ್ರೌಢಿಮೆಯಿಂದ ವಿಚಾರಿಸಿ ನೋಡು. ೩೮೮. ಈತ ಸಿಂಹರಾಜ, ಈತ ಪೂರ್ವದಲ್ಲಿರುವ ಕಾಮಭೂಪಾಲ. ಮತ್ತೆ ಈತನಾದರೋ ನೇಪಾಳರಾಜ, ಈತ ಸೌಭಾಗನೃಪಾಲ. ಈತ ಗೌಡರಾಜ. ೩೮೯. ಈತ ಮಲಯಪರ್ವತದ ನೃಪಾಲ, ಈತ ಕಳಿಂಗದೇಶಾಧಿಪತಿ. ಈತ ಮತಂಗಭೂಪ. ಈತ ಕಾಶೀ

ಎಲೆ ದಮಯಂತಿ ನೋಡಧಿಕಭಾಗ್ಯವನಿತ್ತಲುದಾತ್ತ ಮೂರ್ತಿಯಿಂ
ನಳನೃಪರೈವರಾದರನಳಪ್ರತಿಮರ್ ಕಡುದಣ್ಣನಾಯ್ತು ನಿ
ನ್ನೊಲವು ಮನೋವನಂ ಬೆಳೆದು ಪಲ್ಲವಿಸಿತ್ತು ಶರೀರಕಾಂತಿಯು
ಜ್ಜ್ವಲವೆನಿಸಿತ್ತೆನುತ್ತಬಲೆ ತೋಱಿಸಿದಳ್ ನಿಜಭಾವಗರ್ಭದಿಂ ೩೯೦

ತವದಿಂ ನೋಡಕ್ಕ ನಿತ್ಯಂ ಶುಚಿಗಳಹಿತಗೋತ್ರಾರಿಗಳ್ ಧರ್ಮರಾಜರ್
ಭುವನಪ್ರಸ್ತುತ್ಯರಾಶಾಭರಿತ ವಿಮಳಕೀರ್ತಿಪ್ರಸಿದ್ಧರ್ ನಿಜೋಷ್ಠೋ
ದ್ಭವ ಪೀಯೂಷಪ್ರಿಯರ್ ಭೂಸುರಕುಲವಿಭವಖ್ಯಾತರೆಂದೈವರಂ ವಾ
ಕ್ಯವಿಶೇಷಂ ಕಯ್ಮಿಗಲ್ ತೋಱಿದಳಖಿಳಕಳಾವಂತೆ ತತ್ಕಾಂತೆಗಾಗಳ್ ೩೯೧

ನೋಡು ಸಹಸ್ರದೃಷ್ಟಿಮ(ವೆ?) ಆಸೀತನನೀತನುದಾತ್ತ ತೇಜನಂ
ನೋಡಲೆ ತಂಗಿ ಭಾಳಲಿಪಿಯಂ ತೊಡೆವಗ್ಗದ ವೀರನೀತನಂ
ನೋಡು ನಿತಾಂತ ಜೀವನಸಮೃದ್ಧಿಯೊಳಿಪ್ಪ ಮಹಾನುಭಾವನಂ
ನೋಡು ಮಗುಳ್ದು ನೋಡಧಿಕನೊರ್ವನೆ ತನ್ನೃಪನೆಂದು ತೋಱಿದಳ್ ೩೯೨

ಕುವಲಯನೇತ್ರೆ ಭಾವಕಿ ಕಳಾವತಿ ಬಂದ ನೃಪಾಲರೆಲ್ಲರಂ
ವಿವರಿಸಿ ಪೇಳ್ದು ಪಂಚನಳರಂ ದಮಯಂತಿಗೆ ತೋಱಿ ಸಂತತಂ

ಸ್ಥಳದ ಒಡೆಯ. ಈತ ಜಾಂಗಲ, ತಾನೀತನು ಮಾಗಧೇಶ್ವರ. ೩೯೦. ಎಲೈ ದಮಯಂತಿ, ಅಪಾರವಾದ ಭಾಗ್ಯವನ್ನು ಈ ಕಡೆ ನೋಡು! ಉದಾತ್ತ ರೂಪವನ್ನು ತಳೆದು ಐದು ಮಂದಿ ನಳನೃಪರಿದ್ದಾರೆ. ಅಗ್ನಿಸದೃಶರು, ನಿನ್ನ ಪ್ರೇಮ ತುಂಬ ತಂಪಾಯಿತು. ಮನಸ್ಸೆಂಬ ವನವು ಬೆಳೆದು ಚಿಗುರೊಡೆದಿತ್ತು. ಶರೀರದಪ್ರಭೆ ಅಧಿಕವೆನ್ನಿಸಿತು ಎಂಬುದಾಗಿ ಸಹಜಭಾವದಿಂದ ಕೂಡಿ ತರುಣಿ ತೋರಿಸಿದಳು. ೩೯೧. ಅಕ್ಕ, ಬಿಡದೆ ಇನ್ನು ನೋಡು! ಸರ್ವದಾ ಶುದ್ಧರು. ಗೋತ್ರದ್ವೇಷಿಗಳಿಗೆ ಶತ್ರುಗಳು, ಧರ್ಮಪರಾಯಣರಾದ ರಾಜರು, ಲೋಕಖ್ಯಾತರು, ದಿಗ್ಭರಿತವಾದ ಸತ್ಕೀರ್ತಿಪ್ರಸಿದ್ಧರು, ತಮ್ಮ ತುಟಿಗಳಿಂದ ಉದಿಸುವ ಅಮೃತಪ್ರಿಯರು, ಬ್ರಾಹ್ಮಣ ಕುಲವೈಭವ ಪ್ರಸಿದ್ಧರು ಎಂಬುದಾಗಿ ಐವರನ್ನೂ, ಮಾತಿನ ಸರಣಿಗೂ ಮಿಗಿಲೆನ್ನುವಂತೆ, ಸಮಸ್ತ ಕಲಾವಿದೆಯಾದ ಆ ಕಾಂತೆ ತೋರಿಸಿದಳು. ೩೯೨. ಸಾವಿರ ನೋಟಗಳಿಂದ ಕೂಡಿರುವ ಈತನನ್ನು ನೋಡು. ಉದಾತ್ತ ತೇಜಸ್ವಿಯಾದ ಈತನನ್ನು ನೋಡು. ಎಲೈ ತಂಗಿ, ಹಣೆಬರಹವನ್ನು ಬರೆಸುವ ಶ್ರೇಷ್ಠ ವೀರನಾದ ಈತನನ್ನು ನೋಡು. ಸರ್ವದಾ ಜೀವನಪ್ರವೃದ್ಧಿಗೆ ಆಧಾರನಾಗಿರುವ (ನೀರಿಗೆ ನೆಲೆಯಾದ ವರುಣ) ಮಹಾನುಭಾವನನ್ನು ನೋಡು. ಆ ಮಹಾರಾಜನೊಬ್ಬನೇ ಅಧಿಕನಾದವನು. (ಅವನನ್ನು) ಪುನಃ ಪುನಃ ನೋಡೆಂದು ತೋರಿಸಿದಳು. ೩೯೩. ತಾವರೆಗಣ್ಣುಳ್ಳವಳೂ ಭಾವಕಿಯೂ ಕಲಾವಿದೆಯೂ ಆದ ಯುವತಿ ಬಂದಿದ್ದ ಮಹಾರಾಜರೆಲ್ಲರನ್ನೂ ವಿವರಿಸಿ

ಭುವನದೊಳಿಪ್ಪವರ್ ಬಹಳ ತೇಜಮನಾಂತು ಹರಿಪ್ರತಾಪದಿಂ
ಯುವತಿ ನಿತಾಂತಧರ್ಮಪರರಾದವರುಂಟೆಯೆನುತ್ತೆ ಮೆಚ್ಚಿದಳ್ ೩೯೩

ವ॥ ಆಗಳ್

ಮಾತಿನ ಭೇದಮಂ ಲಲಿತರೂಪ ವಿಭೇದವನಂಗಭೇದಮಂ
ಜಾತಿಯ ಭೇದಮಂ ಸಹಜ ಚೇಷ್ಟೆಯ ಭೇದವನಾಸ್ಯಭೇದಮಂ
ನೀತಿಯ ಭೇದಮಂ ತಿಳಿವವರ್ಗರಿದೆಂಬವೊಲಿರ್ದರಂಗನಾ
ಪ್ರೀತಿಯಿನಂದು ಪಂಚನಳರುನ್ನತ ವಿಷ್ಟರದೊಳ್ ವಿಳಾಸದಿಂ ೩೯೪

ಸುಮನೋಮೂರ್ತಿಗಳಪ್ರತರ್ಕ್ಯಮಹಿಮರ್ ತೇಜಸ್ವಿಗಳ್ ದಿವ್ಯಕಾಂ
ತಿಮಯರ್ ನೋಡೆ ಮಹಾಕುಲೀನರಸಮರ್ ಲೋಕೈಕನಾಥರ್ ಪರಾ
ಕ್ರಮಿಗಳ್ ದಿಗ್ಗಜಸತ್ತ್ವಯುಕ್ತರನಿಶಂ ನಾನಾಧ್ವರ ಪ್ರಾಕ್ತನೋ
ತ್ತಮರಾಗಿರ್ದ ವಿದಗ್ಧ ಪಂಚನಳರಂ ತನ್ವಂಗಿ ಕಂಡಳ್ಕಿದಳ್ ೩೯೫

ಪಂಚನಳರೆನ್ನ ಮನದೊಳ್
ಪಂಚಾನಳರಾಗಿ ನಿಂದರಿವರೊಡವೆರಸಲ್
ಪಂಚತ್ವದಿಂ ವಿಭೂತಿಪ
ದಂ ಚೆಲ್ವಿಕೆವಡೆಯದಿರ್ಪುದೇ ತತ್ಕ್ಷಣದೊಳ್ ೩೯೬

ಹೇಳಿ, ಐವರು ನಳರನ್ನೂ ದಮಯಂತಿಗೆ ತೋರಿಸಿ, ಸರ್ವದಾ ಲೋಕದಲ್ಲಿರುವವರೂ, ಅಪಾರ ಕಾಂತಿಯುಕ್ತರೂ ಆಗಿ, ಸಿಂಹಪರಾಕ್ರಮದಿಂದ ಸದಾ ಧರ್ಮಾನುರಾಗಿಗಳಾದವರು ಉಂಟೆ ಎಂಬುದಾಗಿ ಮೆಚ್ಚಿದಳು. ವ॥ ಆಗ ೩೯೪. ನುಡಿಯ ವ್ಯತ್ಯಾಸವನ್ನೂ ಸ್ಫುರದ್ರೂಪದ ವ್ಯತ್ಯಾಸವನ್ನೂ ಶರೀರವ್ಯತ್ಯಾಸವನ್ನೂ ಜಾತಿಯ ವ್ಯತ್ಯಾಸವನ್ನೂ ಸ್ವಾಭಾವಿಕ ವರ್ತನೆಯ ವ್ಯತ್ಯಾಸವನ್ನೂ ಮುಖವ್ಯತ್ಯಾಸವನ್ನೂ ನೀತಿಯ ವ್ಯತ್ಯಾಸವನ್ನೂ ತಿಳಿಯುವವರಿಗೆ ಅಸಾಧ್ಯವೋ ಎಂಬಂತೆ ಸ್ತ್ರೀಕಾಂಕ್ಷೆಯಿಂದ ಅಂದು ಐವರು ನಳರೂ ಉನ್ನತ ಸಿಂಹಾಸನದಲ್ಲಿ ವಿಲಾಸದಿಂದ ಕುಳಿತಿದ್ದರು. ೩೯೫. ಮನೋಜ್ಞಸ್ವರೂಪರೂ, ತರ್ಕಾತೀತರಾದ ಮಹಿಮರೂ, ತೇಜಸ್ವಿಗಳೂ, ದಿವ್ಯಪ್ರಭಾಯುಕ್ತರೂ, ನೋಡಲು ಸದ್ವಂಶಜರೂ, ಅಸಮಾನರೂ, ಸಮಸ್ತ ಲೋಕಗಳಿಗೆ ಒಡೆಯರೂ, ಸಾಹಸಿಗಳೂ, ದಿಗ್ಗಜಗಳಂತೆ ಶಕ್ತಿಶಾಲಿಗಳೂ, ಸರ್ವದಾ ವಿಧವಿಧವಾದ ಯಜ್ಞಕಾರ್ಯಗಳಲ್ಲಿ ಪ್ರಾಚೀನ ಶ್ರೇಷ್ಠರೂ ಆಗಿದ್ದ ಐವರು ನಳರನ್ನು ಆ ತರುಣಿ ನೋಡಿ ಭಯಚಕಿತಳಾದಳು. ೩೯೬. ಪಂಚನಳರು ನನ್ನ ಮನಸ್ಸಿನಲ್ಲಿ ಪಂಚಾಗ್ನಿಗಳಂತೆ ನಿಂತಿರುವರು. ಇವರೊಂದಿಗೆ ಕೂಡಲು ಪಂಚಭೂತಯುಕ್ತವಾಗಿ ಮಹತ್ವಪದವಿಯು ಆ ಕೂಡಲೆ

ವ॥ ಮದನಂತರಂ

ರವಿಯೊರ್ಬಂ ಧರೆಗೆಲ್ಲದಿರ್ವರೊಳರೇ ಉಂಟಾದೊಡಂ ಪೆರ್ಚಿ ಮೂ
ಡುವರೇ ಮೂಡಿದರಾದೊಡದ್ಭುತವೆನಿಪ್ಪುತ್ಪಾತವೊಂದಲ್ಲದ
ಬ್ಜವಿಕಾಸಂ ನೆರೆಗೊಂಡು ಕೋಕಮಿಥುನಂ ಪಾರ್ದಿಸಿರಲ್ ಮುಬ್ಬು ಪಿಂ
ಗುವುದೇ ಭಾವಿಸಿ ಪೇಱ್ ಕಳಾವತಿ ಮಹತ್ಕೌಟಿಲ್ಯಮೇಂ ಸತ್ಯಮೇ ೩೯೭

ಮಗುವೆನಿಸಿರ್ಪೆನಿಂದು ನಳನಲ್ಲದೆ ಮಿಕ್ಕವರೆನ್ನ ಚಿತ್ತದೊಳ್
ಬಗೆವೊಡಮಿಾ ಸ್ವಯಂವರಕೆ ಬಂದವರಂ ಬಯಸಿಕ್ಷೀಸಲ್ ಮನಂ
ಸೊಗಸುವೊಡಂ ಸುಗಂಧಕುಸುಮೋಜ್ಜ್ವಲಮಾಲಿಕೆ ದಿವ್ಯಮೆಂದು ಮೆ
ಲ್ಲಗೆ ದಮಯಂತಿ ಪಂಚನಳರಾನನಮಂ ಪೆಱಪಿಂಗಿ ನೋಡಿದಳ್ ೩೯೮

ಉಭಯಕುಲಪ್ರಸಿದ್ಧಿಯೆನಗುಳ್ಳೊಡಮೊರ್ನುಡಿಯುಳ್ಳೊಡಂ ಸಮು
ತಭಿಜನಸಂಗಮುಳ್ಳೊಡಮದೋಷಮದುಳ್ಳೊಡಮಂಗಜಾತಸ
ನ್ನಿಭ ನಳನೆನ್ನ ಕಾಂತನೆನಿಪುತ್ಸವಮುಳ್ಳೊಡಮೊಲ್ಮೆಯುಳ್ಳೊಡಂ
ಶುಭತರಮೂರ್ತಿ ಪೂರ್ವನಳನಿರ್ಪುದು ಪಿಂಗುವುದನ್ಯರಾದವರ್ ೩೯೯

ತನ್ನ ಮಹಾವ್ರತಂ ಸಹಜವಾದೊಡೆ ಚಿತ್ತದೊಳನ್ಯವಸ್ತು ತಾಂ
ಮುನ್ನೆಲೆಗೊಳ್ಳದಿರ್ದೊಡೆ ನಿಜೋಕ್ತಿಗಳ್ ಪುಸಿ ಪೊರ್ದದಿರ್ದೊಡಾ

ಸೌಂದರ್ಯವನ್ನು ಪಡೆಯದೆ ಇರುವುದೆ ? ವ॥ ಎಂದು, ಆ ಬಳಿಕ ೩೯೭. ಭೂಮಂಡಲಕ್ಕೆ ಸೂರ್ಯನೊಬ್ಬನೇ ! ಇಬ್ಬರಿರುವರೆ ? ಹಾಗಿದ್ದಲ್ಲಿ ಹೆಚ್ಚಿ ಉದಿಸುವರೆ ? ಉದಿಸಿದ ಪಕ್ಷದಲ್ಲಿ, ಭಯಂಕರವಾದ ಹಾನಿಮಾತ್ರವೊಂದಲ್ಲದೆ, ತಾವರೆಯ ಹೂವರಳಿ ಸುವ್ಯವಸ್ಥಿತವಾಗಿ, ಚಕ್ರವಾಕಯುಗ್ಮಗಳು ಎದುರುನೋಡುತ್ತಿರಲು ಮಸುಕು ಹಿಂಗಬಲ್ಲುದೇ ? ಎಲೈ ಕಳಾವತಿ, (ನೀನೇ) ಭಾವಿಸಿ ಹೇಳು, ದೊಡ್ಡ ಮೋಸವು ಸತ್ಯವಾದೀತೆ ? ೩೯೮. ಮಗುವಾಗಿದ್ದೇನೆ. ಈ ದಿನ ನಳನನ್ನು ಹೊರತು ಉಳಿದವರನ್ನು ನನ್ನ ಮನಸ್ಸಿನಲ್ಲಿ ಭಾವಿಸಿದ್ದೇ ಆದರೆ, ಈ ಸ್ವಯಂವರಕ್ಕೆ ಬಂದವರನ್ನು ನೋಡಿ ಮನಸ್ಸು ಸಂತೋಷಪಟ್ಟಿದ್ದೇ ಆದರೆ, ಸೌಗಂಧಿಕಪುಷ್ಪಮಾಲೆಯೇ ಪರೀಕ್ಷಿಸುವ ಒರೆಗಲ್ಲಾಗಲೆಂದು, ಮೆಲ್ಲಗೆ ದಮಯಂತಿ ಐವರು ನಳರ ಮುಖಗಳನ್ನು ಹಿಂದೆ ಸರಿದು ನೋಡಿದಳು. ೩೯೯. ಉಭಯ ವಂಶಖ್ಯಾತಿ ನನಗಿದ್ದಲ್ಲಿ, ಒಂದೇ ಒಂದು ಮಾತು ಮಾತ್ರವಿದ್ದಲ್ಲಿ, ಚೆನ್ನಾಗಿ ಸದ್ವಂಶಜರ ಸ್ನೇಹವಿದ್ದಲ್ಲಿ, ನಿಷ್ಕಳಂಕವಾಗಿದ್ದಲ್ಲಿ, ಮನ್ಮಥಸದೃಶನಾದ ನಳನು ನನ್ನ ಪತಿಯೆಂಬ ಸಂತೋಷವಿದ್ದಲ್ಲಿ, ಪ್ರೇಮವಿದ್ದಲ್ಲಿ ಶುಭಪ್ರದಸ್ವರೂಪನಾದ ಪೂರ್ವನಳನು ಹಾಗೆಯೇ ಇರಲಿ ; ಇತರರ (ರೂಪ) ಹಿಂಗಲಿ. ೪೦೦. ನನ್ನ ಮಹಾವ್ರತ ಸಹಜವಾಗಿದ್ದಲ್ಲಿ, ಮನಸ್ಸಿನಲ್ಲಿ ಬೇರಾವ ವಸ್ತುವೂ ತಾನು ಈ ಮೊದಲು ನೆಲಸ

ಸನ್ನದೊಳಿರ್ದ ಪಂಚನಳರೊಳ್ ಪಡೆದಾಂ ಮನವೊಲ್ದು ಮುನ್ನ ಕಂ
ಡೆನ್ನ ನಳಂ ನಿಜಾಕೃತಿಯೊಳಿಕ್ಕಿತರರ್ ಪೆಱಪಿಂಗುಗೀಕ್ಷಣಾ ೪೦೦

ಮನದೊಳಗನ್ಯರಂ ಬಗೆವೊಡಾಂ ನಳಭೂಪತಿಯಲ್ಲದೊರ್ವರಂ
ನೆನೆವರೆ ಬೇಱೆ ದೇವತೆಗಳುಂಟೆ[ನೆ] ಕಂಡರನಾಸೆಗೆಯ್ವೊಡೆ
ನ್ನಿನಿಯನ ಮೂರ್ತಿ ದಿವ್ಯವದಱಿಂ ನಳನಿರ್ಕೆ ನಟರ್ ತೊಲಂಗುಗೆಂ
ದನುಪಮಮಾಲೆಯಂ ನೆಗಪಿದಳ್ [ಮಿಗೆ] ಮಿಕ್ಕ ನಳರ್ ಭಯಂಗೊಳಲ್ ೪೦೧

ಎನಗಿನ್ನೇಕಿತರ ಪ್ರಶಂಸೆ ಶರಣಾರ್ ನೀನಲ್ಲದೆನ್ನಾಣ್ಮನಂ
ಮನದೊಳ್ ಭಾವಿಸಿ ಕಯ್ಗಳಂ ಮುಗಿದು ಪುಣ್ಯಶ್ಲೋಕನಂ ಸಂತತಂ
ನೆನೆಯುತ್ತಂ ದಮಯಂತಿ ಪಂಚನಳರೊಳ್ ಮಿಥ್ಯಾನಳರ್ ಪಿಂಗಿ ಪೂ
ರ್ವನಳಂ ಮತ್ಪತಿಯಕ್ಕೆನುತ್ತೆ ಭರದಿಂ ಬಂದಿಕ್ಕಿದಳ್ ಮಾಲೆಯಂ ೪೦೨

ನಿರುಪಮರಾಗದಿಂ ಕುಸುಮಮಾಲಿಕೆಯಂ ದಮಯಂತಿಯಿಕ್ಕಲಾ
ಸುರಪತಿ ವಹ್ನಿ ಕಾಲ ವರುಣರ್ ಸಹಜಾಕೃತಿಯಿಂದೆ ಪಿಂಗಿರಲ್
ಪರಮಪವಿತ್ರನುತ್ತಮ ಚರಿತ್ರನಶೇಷಗುಣಾನ್ವಿತಂ ನಳಂ
ಧರಿಸಿ ನಿಜಸ್ವರೂಪದಿನದೇನೆಸೆದಿರ್ದನೊ ಸೌಮ್ಯಸಂಪದಂ ೪೦೩

ದಿದ್ದಲ್ಲಿ, ದಿಟವಾದ ಮಾತುಗಳು ಸಟೆಯಾಗದಿದ್ದಲ್ಲಿ ಸಮೀಪದಲ್ಲಿರುವ ಐವರು ನಳರಲ್ಲಿ ನಾನು ಮನಮೆಚ್ಚಿ ಪಡೆದಿರುವ ಮೊದಲ ನಳನು ಸಹಜಸ್ವರೂಪದಲ್ಲಿ ತೋರಿಬಂದು, ಇತರರು ಈ ಕೂಡಲೆ ಹಿಂದೆ ಸರಿಯಲಿ. ೪೦೧. ನಾನು ಮನಸ್ಸಿನಲ್ಲಿ ಇನ್ನೊಬ್ಬರನ್ನು ಭಾವಿಸಿದಲ್ಲಿ ನಳಮಹಾರಾಜನೊಬ್ಬನನ್ನು ಹೊರತು ಬೇರೆಯವರನ್ನು ಸ್ಮರಿಸಿದಲ್ಲಿ, ಬೇರೆ ದೇವರುಗಳುಂಟು ಎನ್ನಲು, ಕಂಡಕಂಡವರನ್ನು ಆಸೆಪಟ್ಟಿದ್ದೇ ಆದರೆ, ನನ್ನ ಪ್ರಿಯನ ಮೂರ್ತಿಯೇ ಅದಕ್ಕೆ ತಕ್ಕ ಒರೆಗಲ್ಲು (ದಿಬ್ಬ). ಆದ್ದರಿಂದ, (ನೈಜವಾದ) ನಳ ನಿರಲಿ, ಕಪಟಿಗಳು ತೊಲಗಲಿ ಎಂಬುದಾಗಿ, ಉಳಿದ ನಳರು ಭಯಪಡುವಂತೆ ಅಸದೃಶ ವಾದ ಮಾಲೆಯನ್ನು ಮೇಲೆ ಎತ್ತಿದಳು. ೪೦೨. ನನಗೆ ಉಳಿದವರ ಹೊಗಳಿಕೆಯೇಕೆ ? ನಿನ್ನನ್ನು ಬಿಟ್ಟು ಬೇರೆ ಯಾರು ಆಶ್ರಯದಾತರು ? ತನ್ನ ಇನಿಯನನ್ನು ಮನಸ್ಸಿನಲ್ಲಿ ಭಾವಿಸಿ, ಕೈಗಳನ್ನು ಮುಗಿದು, ಪುಣ್ಯಶ್ಲೋಕನನ್ನು ಸದಾ ಸ್ಮರಿಸುತ್ತ ದಮಯಂತಿ ಐವರು ನಳರಲ್ಲಿ ಕಪಟ ನಳರು ಹಿಂಗಿ, ಪೂರ್ವ ನಳಮಹಾರಾಜನು ನನ್ನ ಗಂಡನಾಗಲಿ ಎಂಬುದಾಗಿ ಸಡಗರದಿಂದ ನಡೆದುಬಂದು ಮಾಲೆಯನ್ನು ಹಾಕಿದಳು. ೪೦೩. ಅಸದೃಶ ವಾದ ಪ್ರೇಮದಿಂದ ದಮಯಂತಿ ಪುಷ್ಪಮಾಲೆಯನ್ನು ಹಾಕಲು, ದೇವೇಂದ್ರ, ಅಗ್ನಿ, ಯಮ, ವರುಣರು ತಮ್ಮ ಸಹಜರೂಪದಿಂದ ಹಿಂದುಳಿಯಲು, ಪರಮ ಪವಿತ್ರನೂ ಶ್ರೇಷ್ಠ ಚಾರಿತ್ರನೂ, ಸಮಸ್ತ ಗುಣಶಾಲಿಯೂ, ಸೌಮ್ಯಸಂಪನ್ನನೂ ಆದ ನಳನು ನೈಜ

ವ॥ ಆಗಳ್

ಭಂಗುರ ಮಿಥ್ಯಾಜ್ಞಾನಂ
ಪಿಂಗಲೊಡಂ ಹೃದಯದಮಳ ಸಮ್ಯಗ್ಜ್ಞಾನಂ
ಕಂಗೊಳಿಸುವಂತಿರ್ದಂ
ಮಂಗಳಕರಮೂರ್ತಿ ವೀರನಳಭೂಪಾಲಂ ೪೦೪

ಪ್ರತಿಸೂರ್ಯಂ ಪಿಂಗಿದಾದಿತ್ಯನೊ ಘನತಿಮಿರಂ ಪಿಂಗಿದಿಂದುವೋ ಚ
ತ್ತತಮಂ ಪಿಂಗಿರ್ದ ದಿವ್ಯಾತ್ಮನೊ ತಿಳಿವೊಡಸಾಧ್ಯಂ ದಲೆಂಬಂತೆ ದೇಹ
ದ್ಯುತಿ ನೀಳ್ದಾಚ್ಛಾದಿಸಲ್ ಭೂಪನ ತನುವನಲಂಕಾರ ಸರ್ವಸ್ವಶೋಭಾ
ನ್ವಿತನಾಗಿರ್ದಂ ನಳಂ ಕಂತದೊಳೆಸೆದಿರೆ ಪೂಮಾಲೆ ಸಲ್ಲೀಲೆಯಿಂದಂ ೪೦೫

ಮನಸಿಜಮೂರ್ತಿ ನಿನ್ನ ಕೃಪೆಯಿಲ್ಲದ ದೂಸಜಿನೀಯರಲ್ಗಳಂ
ಬಿನತೆಱದಿಂ ಮದೀಯತನುವಂ ಕೊಱಚಾಡಿದವೆಂದವಂ [ದಲಂ]
ಗನೆ ಮಿಗೆ ಕಟ್ಟಿಯೊಪ್ಪಿಸಿದಳೆಂಬಿನಮೊಪ್ಪುವ ಪುಷ್ಪಮಾಲೆಯಂ
ಜನಪತಿಯೊಪ್ಪುಗೊಂಡು ಸೊಬಗಂ ತಳೆದಂ ಮುಳಿಯಲ್ ನೃಪಾಲಕರ್ ೪೦೬

ವ॥ ಆಗಳ್

ನಿನ್ನ ಪತಿವ್ರತಾಗುಣಮನಾರ್ ಕೆಡಿಸಲ್ ಬಗೆದಿರ್ದೊಡಾಕ್ಷಣಂ
ನಿನ್ನಯ ಕೋಪವಹ್ನಿಯಿನವರ್ ಮಿಗೆ ಭಸ್ಮಮನೆಯ್ದುಗೆಂದು ಸೌ

ರೂಪವನ್ನು ಧರಿಸಿ ಅದೇನು ತೋರಿದನೋ ! ವ॥ ಆಗ, ೪೦೪. ಕ್ಷಣಿಕವಾದ ಮಿಥ್ಯಾಜ್ಞಾನವು (ಅಸತ್ಯಪ್ರಜ್ಞೆ) ಹಿಂಗಿದೊಡನೆಯೇ ಎದೆಯಲ್ಲಿನ ಪವಿತ್ರವಾದ ಸಮ್ಯಗ್ ಜ್ಞಾನವು (ಸತ್ಯಪ್ರಜ್ಞೆ) ಹೊಳೆಹೊಳೆಯುವಂತೆ ಶುಭ ಆಕೃತಿಯುಳ್ಳ ವೀರನಳಮಹಾರಾಜನಿದ್ದನು. ೪೦೫. ಪ್ರತಿಸೂರ್ಯನು ಹಿಂಗಿದ ರವಿಯೋ, ಕತ್ತಲೆ ಹಿಂಗಿದ ಚಂದ್ರನೋ, ಮನಸ್ಸಿನ ಅಂಧಕಾರವು ಅಡಗಿದ ಪವಿತ್ರವಾದ ಆತ್ಮನೋ, ಅರ್ಥಮಾಡಿಕೊಳ್ಳಲು ಅಸಾಧ್ಯವೋ ಎಂಬಂತೆ ಶರೀರಪ್ರಭೆ ವ್ಯಾಪಿಸಿ ಮಹಾರಾಜನ ದೇಹವನ್ನು ಆವರಿಸಿರಲು, ಕೊರಳಿನಲ್ಲಿ ಮನೋಜ್ಞವಾಗಿ ಹೂವಿನ ಮಾಲೆಯು ತೋರಿಬರುತ್ತಿರಲು ನಳನು ಸಮಸ್ತ ಅಲಂಕಾರದಿಂದಲೂ ಪ್ರಕಾಶಮಾನನಾಗಿದ್ದನು. ೪೦೬. ಎಲೈ ಮನ್ಮಥಮೂರ್ತಿಯಂತಹ ನಳನೆ ! ನಿನ್ನ ದಯೆಯಿಲ್ಲದಕಾರಣದಿಂದ ಈ ಹೂವುಗಳು ಬಾಣಗಳಂತೆ ನನ್ನ ಶರೀರವನ್ನು ಕಾಡಿದುವು ಎಂಬುದಾಗಿ, ಆ ತರುಣಿ ಅಂದು ಅವುಗಳನ್ನು ಕಟ್ಟಿ ಒಪ್ಪಿಸಿದಳೋ ಎಂಬಂತೆ ಅಣಿಯಾದ ಹೂವಿನಹಾರವನ್ನು ಮಹಾರಾಜನು ಸ್ವೀಕರಿಸಲು, (ಉಳಿದ) ರಾಜರು ಮುನಿಸಿಕೊಂಡಿರಲು, (ತಾನು) ಚೆಲುವಾಗಿದ್ದನು. ವ॥ ಆಗ, ೪೦೭. ನಿನ್ನ ಪಾತಿವ್ರತ್ಯವನ್ನು ಯಾರು ಕೆಡಿಸಲು ಆಲೋಚಿಸುವರೋ ಆ ಕೂಡಲೆ ನಿನ್ನ ಕೋಪಾಗ್ನಿಯಿಂದ ಅವರು ನಿಶ್ಶೇಷವಾಗಿ ಸುಟ್ಟು ಬೂದಿಯಾಗಲೆಂದು

ಪ್ಪೋನ್ನತ ಚಿತ್ತದಿಂ ವರವನಿತ್ತು ದಿಶಾಧಿಪರಂಬರಕ್ಕೆ ಬೇ
ಗಂ ನಡೆದರ್ ಬಟಿಕ್ಕಬಲೆಗಾಯ್ತು ನಳಪ್ರತಿಪತ್ತಿಯುತ್ಸವಂ ೪೦೭

ಅನಿಮಿಷಪತಿ ಮೊದಲಾದವ
ರನುತಾಪದಿನಂದು ಬಂದ ಬಟ್ಟೆಯನೆಯ್ದಲ್
ಜನಪತಿಗಳಿತ್ತ ಪೋಳಂ (?)
ದೆನುತೆರ್ದರ್ ಕೈದುಗೊಂಡು ಲಜ್ಜಾಪತಿಯಿಂ ೪೦೮

ವ॥ ಅಂತೆರ್ದು

ಅಣಿಯರನಾಡಿ ನಮ್ಮನಿಬರಂ ದಮಯಂತಿ ಸಮಂತು ಮಿಕ್ಕರಂ
ಗಣಿಸದೆ ಕೂರ್ಮೆಯಿಂ ವರಿಸಿ ಮಾಲೆಯನಿಕ್ಕಿದಳಾಸೆವಟ್ಟು ಪ
ಲ್ಲಣಿಸು ಹಯಂಗಳಂ ಬರಿಸು ಸೇನೆಯನೆಂದು ಸಮಸ್ತ ಭೂಪರಾ
ಕ್ಷಣದೊಳಿದಿರ್ಚಲೆಂದು ಬಗೆದಂದವರಂ ಮಿಗೆ ಸುತ್ತಿ ಮುತ್ತಿದರ್ ೪೦೯

ಎಮ್ಮಯ ಲಜ್ಜೆವೋಸರಿಸಲೀ ದಮಯಂತಿಯನೊಯ್ವ ಗಂಡನಾ
ವಂ ಮದನಾರಿಯೋ ದನುಜವೈರಿಯೊ ಮಿಕ್ಕವರೆಂತು ಪೋಗಲ
ಕ್ಕುಂ ಮದದಂತಿಯಿಂ ತುಳಿಸಿದಲ್ಲದೆ ಮಾಣ್ಪೆವೆನುತ್ತ ಭೂಪರಾ
ರ್ಪಿಂ ಮಿಗೆ ಕೋಪದಿಂ ಮುಳಿದು ಮುತ್ತಿದರಾರ್ದು ನಳಕ್ಷಿತೀಶನಂ ೪೧೦

ದಿಕ್ಪಾಲಕರು ಸುಖವಾಗಿ ಉದಾರ ಮನಸ್ಸಿನಿಂದ ವರವನ್ನು ಕೊಟ್ಟು, ಶೀಘ್ರವಾಗಿ ಆಕಾಶದತ್ತ ನಡೆದರು. ಆ ತರುವಾಯ ತರುಣಿಗೆ ನಳನೊಂದಿಗೆ ಗೌರವಯುತವಾಗಿ ಉತ್ಸವವು ನೆರವೇರಿತು. ೪೦೮. ದೇವೇಂದ್ರನೇ ಮೊದಲಾದವರು ಪಶ್ಚಾತ್ತಾಪದಿಂದ ಅಂದು ಬಂದ ದಾರಿಯನ್ನು ಹಿಡಿಯಲು, ಇತ್ತ ನಾಚಿಗೆಗೆ ಗುರಿಯಾದ ರಾಜರು ಆಯುಧ ಸನ್ನದ್ಧರಾಗಿ ಭುಗಿಲೆಂದು ಮೇಲೆದ್ದರು. ವ॥ ಹಾಗೆ ಎದ್ದು ೪೦೯. ದಮಯಂತಿ ಈ ನಮ್ಮೆಲ್ಲರನ್ನೂ ವಿಶೇಷವಾಗಿ ಕಡೆಗಂಡು, ಉಳಿದವರನ್ನು ಅಂತೆಯೇ ಲೆಕ್ಕಿಸದೆ, ಪ್ರೇಮದಿಂದ ಒಲಿದು ಆಸೆಪಟ್ಟು (ನಳನಿಗೆ) ಹೂಮಾಲೆಯನ್ನು ಹಾಕಿದಳು. ಕುದುರೆಗಳಿಗೆ ಹಲ್ಲಣವನ್ನು ಜೋಡಿಸಿ ಸಿದ್ಧಪಡಿಸಿರಿ, ಸೈನ್ಯವನ್ನು ಕರೆತನ್ನಿ ಎಂಬುದಾಗಿ ರಾಜರೆಲ್ಲ ಆ ಕ್ಷಣದಲ್ಲಿ ಮೇಲೆಬೀಳಲೆಂದು ಮನಸ್ಸುಮಾಡಿ ಅವರನ್ನು ಸುತ್ತುಗಟ್ಟಿ ಮುತ್ತಿದರು. ೪೧೦. ನಮ್ಮ ಮಾನವನ್ನು ಕಳೆಯುವಂತೆ ಈ ದಮಯಂತಿಯನ್ನು ಕರೆದುಕೊಂಡು ಹೋಗುವ ಧೀರನಾವನು ? ಹರನೋ ? ಹರಿಯೋ ? ಉಳಿದವರು ಹೇಗೆ ಹೋಗಲಾದೀತು ? ಮದ್ದಾನೆಯಿಂದ ತುಳಿಸದೆ ಬಿಡುವುದಿಲ್ಲ ಎನ್ನುತ್ತ ರಾಜರು ಪರಾಕ್ರಮದಿಂದಲೂ, ಅತ್ಯಧಿಕವಾದ ಕೋಪದಿಂದಲೂ ಕಿಡಿಕಿಡಿಯಾಗಿ ಅಬ್ಬರಿಸಿ

ವರಿಸದ ಕಾಂತೆಯಂ ವರಿಸಿಕೊಂಡ ಮನಃಪ್ರಿಯನಂ ನಿಜಸ್ವಯಂ
ವರ ಸದನಕ್ಕೆ ಸೀಳ್ದು ಪೊಸತೋರಣಮಂ ಸಮಕಟ್ಟಿ ಪೋಪೆವೆಂ
ದರಸುಗಳೆಲ್ಲರುಂ ನಳನೃಪಾಲಕನಂ ತವೆ ಮುತ್ತಲುಗ್ರಕೇ
ಸರಿ ಕರಿಮಧ್ಯದೊಳ್ ನೆಲಸಿದುದದಿನಿರ್ದನಿಳಾಧಿನಾಯಕಂ ೪೧೧

ಉರದೊಳ್ ಕೌಸ್ತುಭರತ್ನಮಂ ಮುರಹರಂ ತಾಳ್ದಂದದಿಂ[ದೀ ನೃಪಂ]
ಧರಿಸಲ್ ಪ್ರಾಪ್ತವೆ ಕಾಂತಿವೆತ್ತ ದಮಯಂತೀರತ್ನಮಂ ವಕ್ಷದೊಳ್
ಧರಿಸಲ್ ತನ್ನಿಷಧೇಶನಲ್ಲದಿತರರ್ ತಾಳ್ವಂದು ಸಾಮಾನ್ಯಕುಂ
ಜರವಾಶಾಗಜದಂದದಿಂ ಧರಿಸವೇ [ಪೆಂ]ಪಿಂ ಧರಾಭಾರಮಂ ೪೧೨

ವ॥ ಎಂದು ಸಕಲಜನವಾದಂ ನೆಗಟೆ

ಯುವರಾಜಪ್ರಭುಪಟ್ಟದೊಳ್ ನಳನೃಪಂ ಭೂಪಾಲರಂ ಗೆಲ್ದು ಶೌ
ರ್ಯವಿದಂ ದಿಗ್ವಿಜಯಪ್ರಸಿದ್ಧಿಗೆ ಜಯಸ್ತಂಭಂಗಳಂ ನಟ್ಟ ಸ
ತ್ತ್ವವನಂ[ದಂತ]ಱಿದಿರ್ದುಮಿಂದು ತೊಡೆಯಲ್ ಬಂದಿರ್ದರಂ ಕೊಂದುಕೂ
ಗುವನೆಂದಲ್ಲಿ ಕೆಲಂಬರೋಸರಿಸಿದರ್ ಮತ್ತಿರ್ದವರ್ ಮುತ್ತಿದರ್ ೪೧೩

ಸಿಂಗದ ಕಯ್ಯ ಮತ್ತಗಜಮೌಕ್ತಿಕಮಂ ಸೆಳೆತಪ್ಪೆನೆಂಬ ಮೂ
ರ್ಖಂಗೆಣೆಯಾಗಿ ಭೂಪರರೆಬರ್ ಮುಳಿದೆಯ್ದುರೆ ಕಂಡು ನೈಷಧಂ

ನಳಮಹಾರಾಜನನ್ನು ಮುತ್ತಿದರು. ೪೧೧. ಒಲಿಯದ ಹೆಣ್ಣನ್ನೂ ಒಲಿಸಿಕೊಂಡ ಪ್ರಣಯಿಯನ್ನು ಸ್ವಯಂವರಮಂಟಪಕ್ಕೆ ಸೀಳಿ ಹೊಸ ತೋರಣವನ್ನು ಚೆನ್ನಾಗಿ ಕಟ್ಟಿ ಹೋಗುವೆವು ಎಂಬುದಾಗಿ ಸಮಸ್ತ ರಾಜರೂ ನಳಮಹಾರಾಜನನ್ನು ವಿಶೇಷವಾಗಿ ಮುತ್ತಲು ಭೂಮಂಡಲದ ಒಡೆಯನಾದ ನಳನು ಆನೆಗಳ ನಡುವೆ ಕೆರಳಿದ ಸಿಂಹ ನಿಂತಂತಿದ್ದನು. ೪೧೨. ಶ್ರೀ ವಿಷ್ಣುವು ಕೌಸ್ತುಭರತ್ನವನ್ನು ಎದೆಯಲ್ಲಿ ಧರಿಸಿರುವಂತೆ, ಶೋಭಿಸುವ ದಮಯಂತಿಯೆಂಬ ರತ್ನವನ್ನು ಆ ನಿಷಧದೇಶದ ಒಡೆಯನು ಹೊರತಾಗಿ ಇತ್ತರರು ಹೃದಯದಲ್ಲಿ ಧರಿಸಲು ಲಭಿಸುವುದೆ ? ಸಾಧಾರಣ ಆನೆಗಳು ದಿಗ್ಗಜಗಳಂತೆ ಕೀರ್ತಿಯುತವಾಗಿ ಭೂಭಾರವನ್ನು ಧರಿಸಬಲ್ಲುವೆ ? ವ॥ ಎಂಬುದಾಗಿ ಎಲ್ಲ ಜನರ ಮಾತುಗಳು ನಡೆಯುತ್ತಿರಲು. ೪೧೩. ನಳಮಹಾರಾಜನು ಯುವರಾಜಪದವಿಯಲ್ಲಿ ರುವಲ್ಲಿ, ರಾಜರನ್ನು ಗೆದ್ದು, ಪ್ರತಾಪಶಾಲಿ ದಿಗ್ವಿಜಯದ ಪ್ರಖ್ಯಾತಿಗಾಗಿ ಜಯಸ್ತಂಭ (ಗೆಲ್ಗಂಬ)ಗಳನ್ನು ಹೂಡಿದ್ದ ಸಾಮರ್ಥ್ಯವನ್ನು ಅಂದು ಹಾಗೆ ತಿಳಿದಿದ್ದೂ ಇಂದು ಹೋರಾಡಲು ಬಂದಿದ್ದವರನ್ನು ಸಂಹರಿಸಿ ಘೋಷಿಸುವೆನೆನ್ನಲು, ಕೆಲವರು ಅತ್ತ ಸರಿದರು ; ಉಳಿದಿದ್ದವರು ಮೇಲೆ ಬಿದ್ದರು. ೪೧೪. ಸಿಂಹದ ಕೈಯಲ್ಲಿರುವ ಮದಿಸಿದ ಆನೆಯ ಮುತ್ತನ್ನು ಸೆಳೆತರುವೆನೆಂಬ ಮೂರ್ಖನನ್ನು ಹೋಲುವಂತೆ ಕೆಲವು ರಾಜರು

ಸಂಗರಧೈರ್ಯವಮೂರ್ತಿಯಂವರಂ ಬಗೆಗೊಳ್ಳದೆ ಪೇರುವಮಧ್ಯದು
ತ್ತುಂಗ ಮೃಗಾರಿಯಂತೆ ನೆಲಸಿರ್ದನತಿಪ್ರಬಲಪ್ರತಾಪದಿಂ ೪೧೪

ಬಿಡು ಬಿಡು ನೈಷಧೇಂದ್ರ ದಮಯಂತಿಯನಲ್ಲದೊಡಿಲ್ಲಿ ಕೊಂಡುಪೋ
ದೊಡೆ ನಿಜಸತ್ತ್ವವಂ ತಿಳಿಯಲಪ್ಪುದೆನುತ್ತರೆಬರ್ ಮಹೀಭುಜರ್
ಕಡುಮುಳಿದಾರ್ದು ಕೋಲ್ವಳೆಯನಿರ್ದೆಸೆಯೊಳ್ ಸುರಿಯಲ್ ಕೆರಳ್ದು ಬೊ
ಬ್ಬಿಡುತದಟಿದಂ ನಳನೃಪಾಲಕನುಗ್ರಲಯಾಗ್ನಿಯಂದದಿಂ ೪೧೫

ಎಸುವಿಡಿವಟ್ಟಿಪೊಯ್ವ ತಿವಿವೌಂಕುವ ನೂಕುವ ಬೊಬ್ಬೆಗೊಟ್ಟು ಚೋ
ದಿಸುವ ಪೊಡರ್ಪುದೋರ್ಪ ಪೆಱಪಿಂಗುವ ಮುಂಗುಡಿಗೆಯ್ದಿ ಬಯ್ದು ರ್ಝಂ
ಕಿಸುವ ಸಡಿಲ್ವ ಮೆಯ್ದೆಗೆವ ಗಾಯವನೊಡ್ಡುವ ಸೇದೆವೆತ್ತು ರ್ಝೊಂ
ಪಿಸುವ ಕನಲ್ದು ಕಯ್ಮಿಱಿವ ಸಂಕುಳಯುದ್ಧವತೀವ ಭೀಕರಂ ೪೧೬

ಖರ್ವಮತಿಪ್ರಸಿದ್ಧನಿವನಲ್ಲವೆ ತನ್ನ ಸುತಾಸ್ವಯಂವರ
ಕ್ಕುರ್ವಿಯ ಭೂಪರಂ ಕರೆಸಿ ಲಜ್ಜೆಯನಿರ್ಕುಳಿಗೊಂಡನೀತನೊಳ್
ಸರ್ವಗವಾರ್ತೆಯಂ (?)ಪು (ಪ ?)ಸುಗೆಗೊಂಡಪೆವೆಂದರೆಬರ್ ಮಹೀಭುಜರ್
ದೋರ್ವಲದಿಂದ ಭೀಮನೃಪನಾಲಯಮಂ ಕಡುಕೆಯ್ದು ಮುತ್ತಿದರ್ ೪೧೭

ಕುಪಿತರಾಗಿ ಬರಲು, ಯುದ್ಧವೀರಸ್ವರೂಪನಾಡ ನಿಷಧಾಧಿಪತಿ ನೋಡಿ, ಅವರನ್ನು ಲಕ್ಷಿಸದೆ ರಾಶಿಯ ನಡುವೆ ಇರುವ ಉನ್ನತವಾದ ಸಿಂಹದಂತೆ, ಬಹಳ ಬಲಿಷ್ಠವಾದ ಪ್ರತಾಪದಿಂದ ನಿಂತಿದ್ದನು. ೪೧೫. ನಿಷಧರಾಜನೆ, ದಮಯಂತಿಯನ್ನು ಬಿಡು ಬಿಡು ! ಹಾಗಲ್ಲದೆ ಇಲ್ಲಿ ಅಪಹರಿಸಿಕೊಂಡು ಹೋದದ್ದೇ ಆದರೆ, ನಿಜಸಾಮರ್ಥ್ಯವನ್ನು ತಿಳಿಯಲಾದೀತು ಎನ್ನುತ್ತ ಕೆಲವು ರಾಜರು ತುಂಬ ಕೋಪಿಸಿಕೊಂಡು ಆರ್ಭಟಿಸಿ, ಎರಡು ಕಡೆಗಳಲ್ಲಿಯೂ ಬಾಣದ ಮಳೆಯನ್ನು ಕರೆಯಲು, ನಳಮಹಾರಾಜನು ಭಯಂಕರವಾದ ಪ್ರಳಯಾಗ್ನಿಯಂತೆ ಕೆರಳಿ ಪ್ರತಾಪದಿಂದ ಅಬ್ಬರಿಸುತ್ತ ಅವರನ್ನು ಬೆನ್ನಟ್ಟಿದನು. ೪೧೬. ಹೊಡೆಯುವ, ಚುಚ್ಚುವ, ಬೆನ್ನಟ್ಟಿಬಡಿವ, ತಿವಿವ, ಔಂಕುವ, ನೂಕುವ, ಬೊಬ್ಬಿರಿದು ಪ್ರಚೋದಿಸುವ, ಶೌರ್ಯತೋರುವ, ಹಿಂದೆ ಸರಿವ, ಮುಂದೆಬಂದು ಬೈದು ಗದರಿಸುವ, ಸಡಿಲವಾಗುವ, ಮೈಮರೆಸಿಕೊಳ್ಳುವ, ಗಾಯವನ್ನು ಮಾಡುವ, ಆಯಾಸಗೊಂಡು ಜೋಲುವ, ಕೆರಳಿ ಕೈಮರೆವ ದ್ವಂದ್ವಯುದ್ಧ ಬಹಳ ಭಯಂಕರವಾಗಿತ್ತು. ೪೧೭. ಗಿಡ್ಡನಾದ ಇವನು ಸುಪ್ರಸಿದ್ಧನಲ್ಲವೆ ? ತನ್ನ ಮಗಳ ಸ್ವಯಂವರಕ್ಕೆ ಭೂಮಂಡಲದ ರಾಜರನ್ನೆಲ್ಲ ಬರಮಾಡಿಕೊಂಡು ಮಾನವನ್ನು ದೋಚಿದನು. ಈತನಲ್ಲಿರುವ ಸಮಸ್ತವನ್ನೂ (?) ಹಂಚಿಕೊಳ್ಳುವೆವೆಂದು ಕೆಲವು ರಾಜರು ಭಾಹುಬಲದಿಂದ

ವ॥ ಅಂತು ಮುತ್ತೆ

ಘನತರಸೇನೆಯಿಂ ನಿಜಭುಜಾಬಲದಿಂ ಸಹಜಪ್ರತಾಪದಿಂ
ಮನದನುರಾಗದಿಂ ನಿಷಧಭೂಪತಿ ಯುದ್ಧದೊಳಾಂತು ವೈರಿವಾ
ಹಿನಿಗಿದಿರಾಂತು ತೋಳ್ವಲವನೊಂದಿನಿಸಂ ಸವಿದೋಱಲಾಕ್ಷಣಂ
ಘನಘಟೆ ಗಾಳಿಯಿಂ ಪರಿವವೊಲ್ ಪರೆದತ್ತು ವಿರೋಧಿಸಂಕುಳಂ ೪೨೮

ವ॥ ಅನಂತರಂ

ಪ್ರುಸಿಯಂ ಸತ್ಯಮಧರ್ಮವಂ ಸಹಜಧರ್ಮಂ ಕೋಪಮಂ ಶಾಂತಿ ಸಾ
ಹಸಮಂ ಬುದ್ಧಿಯಮಂತ್ರಮಂ ಶ್ರುತಿಯನಾಚಾರಂಗಳಂ ಸತ್ಕುಲಂ
ಪಿಸುಣಂ ಸೈರಣೆ ಗೆಲ್ವವೊಲ್ ಖಳನೃಪಾಲಶ್ರೇಣಿಯಂ ಗೆಲ್ದನ
ರ್ಕಸಮಂ ನೈಷಧಚಕ್ರವರ್ತಿ ಸತತಂ ಸತ್ಕೀರ್ತಿಕಾಂತಾಧಿಪಂ ೪೨೯

ಜನಪತಿ ನೈಷಧಂ ರಿಪುನೃಪವ್ರಜಮಂ ಕಡುಕೆಯ್ದು ಬೆಂಕೊಳಲ್
ಮನದಟಲಿಂದವರ್ ಘನತರವ್ಯಥೆಯಿಂ ದಮಯಂತಿಕಾಂತೆ ಕೇಳ್
ನಿನಗೆ ಸಪತ್ನಿಯಕ್ಕೆ ವಿಜಯಾಂಗನೆಯೆಂದುಱೆ ಕೋಪಿಸುತ್ತೆ ಭೋಂ
ಕೆನೆ ಪರೆದರ್ ಗಜಾಶ್ವತತಿಯಿಲ್ಲದೆ [ಬೇಗನೆ] ಬಂದ ಬಟ್ಟೆಯೊಳ್ ೪೩೦

ಭೀಮರಾಜನ ಅರಮನೆಯನ್ನು ರಭಸದಿಂದ ಮುತ್ತಿದರು. ವ॥ ಹಾಗೆ ಮುತ್ತಲು. ೪೧೮. ನಿಷಧಮಹಾರಾಜನು ತನ್ನ ಬಾಹುಬಲದಿಂದಲೂ, ಸ್ವಾಭಾವಿಕವಾದ ಸಾಮರ್ಥ್ಯದಿಂದಲೂ, ಮನಸ್ಸಿನ ಪ್ರೀತಿಯಿಂದಲೂ ಯುದ್ಧದಲ್ಲಿ ಶ್ರೇಷ್ಠವಾದ ಸೈನ್ಯವನ್ನು ಅವಲಂಬಿಸಿ, ಶತ್ರುಸೈನ್ಯಕ್ಕೆ ಎದುರಾಗಿ ನಿಂತು ತೋಳಿನ ಶಕ್ತಿಯನ್ನು ಸ್ವಲ್ಪಮಾತ್ರವೇ ರುಚಿತೋರಿಸಲು, ಆ ಕೂಡಲೆ ಶತ್ರುಸಮೂಹವು ಮಳೆಗಾಲದ ಮೋಡಗಳ ಗುಂಪು ಗಾಳಿಯಿಂದ ಚೆದುರುವಂತೆ ಚೆಲಾಪಿಲ್ಲಿಯಾಯಿತು. ವ॥ ಆ ಬಳಿಕ, ೪೨೯. ಸುಳ್ಳನ್ನು ಸತ್ಯವೂ, ಅಧರ್ಮವನ್ನು ಸಹಜಧರ್ಮವೂ, ಕೋಪವನ್ನು ಶಾಂತಿಯೂ, ಸಾಹಸವನ್ನು ಬುದ್ಧಿಯೂ, ಅಮಂತ್ರವನ್ನು ಶ್ರುತಿಗಳೂ, ಅನಾಚಾರಗಳನ್ನು ಒಳ್ಳೆಯಕುಲವೂ, ಅಸೂಯೆಯನ್ನು ಸಹನೆಯೂ ಗೆಲ್ಲುವಂತೆ ನೀಚರಾಜರ ಪಂಕ್ತಿಯನ್ನು ಸೂರ್ಯಸಮಾನನೂ, ಸರ್ವದಾ ಸತ್ಕೀರ್ತಿಕಾಂತೆಯ ಒಡೆಯನೂ ಆದ ನೈಷಧಚಕ್ರವರ್ತಿಯು ಜಯಿಸಿದನು. ೪೩೦. ನೈಷಧಮಹಾರಾಜನು ಶತ್ರುಸಮೂಹವನ್ನು ರಭಸದಿಂದ ಬೆನ್ನಟ್ಟಲು ಅವರು ಮನಸ್ಸಿನಲ್ಲಿ ಉಂಟಾದ ದುಃಖದಿಂದಲೂ, ವಿಶೇಷವಾದ ವ್ಯಥೆಯಿಂದಲೂ "ಎಲೈ ದಮಯಂತಿ ಕಾಂತೆ ಕೇಳು, ನಿನಗೆ ವಿಜಯಲಕ್ಷ್ಮಿ ಸವತಿಯಾಗಲಿ" ಎಂದು ಅತ್ಯಂತ ಕೋಪದಿಂದ ಆನೆ, ಕುದುರೆಗಳು ಸೈನ್ಯವಾವುದೂ ಇಲ್ಲದೆ ಕೂಡಲೆ ಬಂದದಾರಿಯಲ್ಲಿ ಚೆದರಿದರು.

ಲಲನಾಸ್ನೇಹರಸಪ್ರವೃತ್ತಿ ಭುವನಸ್ತೋತ್ರೈಕಪಾತ್ರಂ ಸಮು
ಜ್ಜ್ವಲ ದೋರ್ದಂಡಬಲಾನ್ವಿತಂ ರಿಪುಹರಂ ತೇಜಸ್ವಿಯಾಗಿರ್ದ ತ
ನ್ನಳದೀಪಕ್ಕೆ ವಿಪಕ್ಷವಂ ತಳೆದು ಬಂದುರ್ವೀಶ್ವರರ್ ಶೀಘ್ರದಿಂ
ಶಲಭಪ್ರಾಪ್ತಿಯನೈದಿದರ್ ಪಲಬರಿರ್ದರ್ ಭೀತಿಯಿಂದೋಡಿದರ್ ೪೨೧

ಶರದಮಳೇಂದು ರೋಹಿಣಿ ನಭೋಂಗಣದೊಳ್ ಮೆಱೆವಂತೆ ಪಲ್ಲವಾ
ಧರೆ ದಮಯಂತಿಯುಂ ನಳನೃಪಾಲಕನುಂ ತನುಕಾಂತಿಯಿಂ ಸ್ವಯಂ
ವರಗೃಹದಲ್ಲಿರಲ್ ಪಡೆದು ಭೀಮನೃಪಂ ನಡೆತಂದು ತದ್ವಧೂ
ವರರನತೀವ ಮಂಗಳಮಹೋತ್ಸವದಿಂ ಬಿಗಿಯಪ್ಪಿ ಪೆರ್ಚಿದಂ ೪೨೨

ವ॥ ಆಗಳ್

ಕಳಕಳಸಂಭ್ರಮಂ ನೆಲಸೆ ಭೀಮನೃಪಾಲನನಂತ ಬಂಧುಸಂ
ಕುಳವಖಿಳಾಪ್ತರಾತ್ಮಸಚಿವರ್ ವರನಾರಿಯರುತ್ತಮ ದ್ವಿಜಾ
ವಳಿ ನಲಿದತ್ತಲಿತ್ತಲೆಡೆಯಾಡಿ ಸಮಂತು ವಿವಾಹಗೇಹಮಂ
ಗಳ[ಕರ]ವಾದ ಪೆರ್ಗೆಲಸದುಜ್ಜುಗವಂ ತಳೆದಿರ್ದುದಾವಗಂ ೪೨೩

ಹಸೆಗಳನಿಕ್ಕು ಮಜ್ಜನದ ಮಂದಿರದೊಳ್ ಪೊಸಗಂಧತೈಲವಂ
ಸಸಿಮುಖಿಯರ್ಕಳಿಂ ತರಿಸು ಮಂಗಳವಾದ್ಯವನೇಟ್ಗೆಯಿಂದ ಬಾ

೪೨೧. ಸ್ತ್ರೀಸ್ನೇಹಾಸಕ್ತಿಯಿಂದ ಸಮಸ್ತ ಪ್ರಪಂಚದ ಸ್ತುತಿಗೆ ಪಾತ್ರನಾದವನೂ, ಅತ್ಯುಜ್ವಲವಾದ ಬಾಹುಬಲದಿಂದ ಕೂಡಿದವನೂ, ಶತ್ರುನಿವಾರಕನೂ, ತೇಜಸ್ವಿಯೂ ಆಗಿದ್ದ ಆ ನಳನೆಂಬ ದೀಪಕ್ಕೆ ಮಹಾರಾಜರು ಒಡನೆಯೇ ಬಂದು ಮುತ್ತಿ ರೆಕ್ಕೆ ಕಳೆದು ಕೊಂಡ ದೀಪದ ಹುಳುಗಳ ಸ್ಥಿತಿಯನ್ನು ಪಡೆದರು. ಇನ್ನು ಇದ್ದಂತಹ ಹಲವರು ಹೆದರಿ ಓಡಿಹೋದರು. ೪೨೨. ಶರತ್ಕಾಲದ ಪವಿತ್ರವಾದ ಚಂದ್ರ ಮತ್ತು ರೋಹಿಣಿಗಳು ಆಕಾಶವಲಯದಲ್ಲಿ ವಿರಾಜಿಸುವಂತೆ ಚಿಗುರಿನಂತಹ ತುಟಿಯುಳ್ಳ ದಮಯಂತಿಯೂ, ನಳಮಹಾರಾಜನೂ (ತಮ್ಮ) ಶರೀರಪ್ರಭೆಯಿಂದ ಸ್ವಯಂವರ ಮಂಟಪದಲ್ಲಿರಲು ಪ್ರೀತಿಯಿಂದ ಭೀಮಮಹಾರಾಜನು ನಡೆತಂದು ಆ ವಧೂವರರನ್ನು ತುಂಬಿದ ಮಂಗಳ ಮಹೋತ್ಸವದಿಂದ ಬಲವಾಗಿ ಅಪ್ಪಿಕೊಂಡು ಹಿಗ್ಗಿದನು. ವ॥ ಆಗ ೪೨೩. ಕಳಕಳಿಸುವ ಸಡಗರವು ನೆಲಸಲು, ಭೀಮರಾಜನ ಸಮಸ್ತ ನೆಂಟರ ಗುಂಪೂ, ಎಲ್ಲ ಆಪ್ತರೂ, ಆತ್ಮಸಚಿವರೂ, ಶ್ರೇಷ್ಠ ನಾರಿಯರೂ, ಉತ್ತಮ ಬ್ರಾಹ್ಮಣ ವೃಂದವೂ ಸಂತೋಷಗೊಂಡು ಅತ್ತಿತ್ತ ಓಡಾಡುತ್ತ ಚೆನ್ನಾಗಿ ವಿವಾಹಮಂಟಪದ ಮಂಗಳಕರವಾದ ದೊಡ್ಡ ದೊಡ್ಡ ಕೆಲಸಗಳಲ್ಲಿ ಯಾವಾಗಲೂ ತೊಡಗಿದ್ದರು. ೪೨೪. ಎಲ್ಲಿ ನೋಡಿದರೂ ಹಸೆಗಳನ್ನು ಹಾಕಿರಿ, ಸ್ನಾನಗೃಹದಲ್ಲಿ ಹೊಸತಾದ ಗಂಧ ತೈಲವನ್ನು ಚಂದ್ರಮುಖಿಯರಿಂದ ತರಿಸಿರಿ, ಅಭಿವೃದ್ಧಿಯ ಸಲುವಾಗಿ ಮಂಗಳ ವಾದ್ಯ

ಜಿಸು ನವರತ್ನದಾರತಿಗಳಂ ಸಮಕಟ್ಟು ಪುರೋಹಿತರ್ ಎಲಂ
ಬಿಸಲೆಡೆಯುಂಟೆ ಕೂಡಿ ಮಧುಪರ್ಕವನೆಂಬವರೆಲ್ಲಿ ನೋಟ್ಟೊಡಂ ೪೨೪

ಸನೆಗಳ ತೊಂಡಲಂ ಮಿಸುಪ ಬಾಸಿಗವಂ ತರಿಸುಜ್ಜ್ವಲಪ್ರಸಾ
ಧನವನಳಂಕಿಗೆಯ್ದ ತಿಳವಸ್ತ್ರಯುಗಂಬಿ(ಪಿ ?)ಡಿ ಶುಭ್ರಲಾಜೆಯಂ
ವನಿತೆಯರಾಯ್ದು ತಂದಿರಿಸಿ ನುಣ್ದನಿಯಂ ಧವಳಾಖ್ಯಮಂ ಸುವಾ
ಸಿನಿಯರೊಜಲ್ದು ಪಾಡಿಯೆನುತಿರ್ಪ ರವಂ ಪರೆದಿರ್ದುದೆಲ್ಲಿಯುಂ ೪೨೫

ಕರಸರಸೀರುಹಕ್ಕೆ ನರನಾಥನ ವೇಣಿಯ ದಿವ್ಯಗಂಧಮಂ
ಪೊರೆದಪವೆಂಬ ತಮ್ಮ ಮನದುತ್ಸವವೊಪ್ಪುವಿನಂ ಸರೋಜಮಂ
ಕರಜದಿನೊಯ್ಯನೊಯ್ಯನೆ ಬಿದಿರ್ಚಿ ಕದಂಬಸುಗಂಧತೈಲಮಂ
ತರುಣಿಯರೊಲ್ದು ಪೂಸಿದರಿಳೇಶನ ಮೌಳಿಗೆ ಲೋಲನೇತ್ರೆಯರ್ ೪೨೬

ವ॥ ಬಟಿಯಿಂ

ಬಾಲಕಿಯರ್ [ಸು]ವರ್ಣಕಳಶಂಗಳ ನಿರ್ಮಳವಾರಿಯಂ ಮಹೀ
ಪಾಲನ ಮೌಳಿಯೊಳ್ ಪಸರಿಸಲ್ ಜಲಧಾರೆಗಳಿಕ್ಕೆಲಂಗಳಿಂ
ಸಾಲಿಡಲುರ್ವಿಯೊಳ್ ಮೆಱೆದುದುಜ್ಜ್ವಲ ಮಜ್ಜನಶೋಭೆ ಸಂತತಂ
ನೀಲಬಳಾಹಕಂ ವಿಮಳವಾರಿಯನಾಂತಿಳೆಗೀವ ಮಾಟ್ಕೆಯಿಂ ೪೨೭

ವನ್ನು ಬಾರಿಸಿರಿ. ನವರತ್ನಖಚಿತವಾದ ಆರತಿಯನ್ನು ಅಣಿಮಾಡಿರಿ, ಪುರೋಹಿತರು ತಡೆಯಲೆಡೆಯುಂಟೆ, ಮಧುಪರ್ಕವನ್ನು ಸಿದ್ಧಪಡಿಸಿರಿ ಎನ್ನುವವರಿದ್ದರು. ೪೨೫. ಮೊಗ್ಗುಗಳ ಗೊಂಚಲನ್ನೂ, ಪ್ರಕಾಶಿಸುವ ಬಾಸಿಂಗವನ್ನೂ (ಹೂವಿನ ಹಾರವನ್ನೂ) ತರಿಸಿರಿ. ಬೆಳಗುವ ಅಲಂಕಾರಸಾಧನಗಳಿಂದ ಅಲಂಕೃತವಾದ ತಿಳ (?) ಜೋಡಿ ವಸ್ತ್ರಗಳನ್ನು (ಅಂತರ ಪಟ ?) ಹಿಡಿಯಿರಿ, ಶುದ್ಧವಾದ ಅರಳನ್ನು ಸ್ತ್ರೀಯರು ಆರಿಸಿ ತಂದಿಡಿರಿ, ಸವಿಯಾದ ದನಿಯನ್ನೂ, ಧವಳದ ಹಾಡನ್ನೂ ಸುವಾಸಿನಿಯರು ಮೆಚ್ಚಿ ಪಾಡಿರಿ ಎಂಬ ಶಬ್ದವು ಎಲ್ಲೆಲ್ಲಿಯೂ ಹಬ್ಬಿದ್ದಿತು. ೪೨೬. ಮಹಾರಾಜನ ಕೂದಲಿನ ಶ್ರೇಷ್ಠವಾದ ಗಂಧವನ್ನು ತಮ್ಮ ಕೈದಾವರೆಗಳಿಗೆ ಲೇಪಿಸಿಕೊಳ್ಳುವೆವು ಎಂಬ ತಮ್ಮ ಮನದ ಉತ್ಸವವು ಒಪ್ಪುವಂತೆ, ಕೂದಲುಗಳನ್ನು ಕೈ ಉಗುರುಗಳಿಂದ ಒಯ್ಯನೊಯ್ಯನೆ ಬಿಡಿಸಿ, ಕದಂಬದ ಸುಗಂಧತೈಲವನ್ನು ಚಂಚಲಾಕ್ಷಿಯರಿಂದ ತರುಣಿಯರು ಮೆಚ್ಚಿ ಮಹಾರಾಜನ ತಲೆಗೆ ಬಳಿದರು. ವ॥ ಆ ತರುವಾಯ ೪೨೭. ತರುಣಿಯರು ಬಂಗಾರದ ಕಳಶಗಳಲ್ಲಿದ್ದ ಸ್ವಚ್ಛವಾದ ನೀರನ್ನು ಮಹಾರಾಜನ ತಲೆಯಮೇಲೆ ಸುರಿಯಲು, ನೀರಿನ ಧಾರೆಗಳು ಎರಡು ಕಡೆಗಳಿಂದಲೂ ತೊಟ್ಟಿಕ್ಕಲು ಉಜ್ವಲವಾದ ಸ್ನಾನದ ಆ ಕಾಂತಿ, ಸರ್ವದಾ ಕಪ್ಪಾದ ಮೋಡಗಳ ಸಾಲು ಪವಿತ್ರವಾದ ನೀರನ್ನು ಭೂಮಿಗೆ ಎರೆಯುವ

ಆ ಕ್ರಮದಿಂ ದಮಯಂತಿಯ
ವಕ್ರಶಿರೋಜಕ್ಕೆ ತೈಲವಂ ಸಿಂಪಿಸಿದರ್
ಶಕ್ರಸ್ತ್ರೀಸನ್ನಿಭೆಯರ್
ಚಕ್ರಯುಗಸ್ತನೆಯರಮಳ ಕಮಳಾನನೆಯರ್ ೪೨೮

ಆ ವಿಧದಿಂ ದಮಯಂತಿಯ
ಭಾವಕಿಯರ್ ವಿಮಳ ಮಜ್ಜನಂಬುಗಿಸಿದರಾ
ಶಾವಿವರಮನೆಯ್ದಲ್ ನಾ
ನಾವಾದ್ಯಂ ಸಕಳ ಬಂಧುಜನಸಂವೇದ್ಯಂ ೪೨೯

ತದನಂತರಮವರಿರ್ಬರ್
ಮೃದುವಸ್ತ್ರಾಭರಣಮಾಲಿಕಾ ಲೇಪನಸಂ
ಪದದಿಂದುದ್ವಾಹನಿವಾ
ಸದ ಪಸೆಗೆಯ್ತಂದು ಕುಳ್ಳಿದರ್ ನಲವಿಂದಂ ೪೩೦

ಮಧುರೋಕ್ತಿಯಿಂದ ಭೂಪಂ
ಮಧುಪರ್ಕವನೆಸಗಲಖಿಳವಾದ್ಯಂ ದುಗ್ಧಾಂ
ಬುಧಿಘೋಷದಂತೆ ಪೊಣ್ಮಲ್
ವಿಧುಮುಖಿಯಂ ಧಾರೆಯೆರೆಯಲುದ್ಯತನಾದಂ ೪೩೧

ಆ ವಿಜಯೋತ್ಸವಂ ಶುಭಮುಹೂರ್ತವೆನಲ್ ದಮಯಂತಿಯಂ [ಕರಂ]
ಭೂವರ ನೈಷಧಂಗೆ ಗುಣಿ ಭೀಮನೃಪಂ ಜಲಧಾರೆಯಿಂ ತುರಂ

ರೀತಿಯಲ್ಲಿ ಧರಾಮಂಡಲದಲ್ಲಿ ಶೋಭಿಸಿತು. ೪೨೮. ಅಪ್ಸರಸಮಾನರೂ, ಚಕ್ರವಾಕಗಳಂತೆ ಮೊಲೆಯುಳ್ಳವರೂ, ಪವಿತ್ರವಾದ ಕಮಲಾನನೆಯರೂ ಅದೇ ರೀತಿಯಲ್ಲಿ ದಮಯಂತಿಯ ಕೊಂಕಾದ ಕುರುಳುಗಳಿಗೆ (ಗುಂಗುರುಗೂದಲುಗಳಿಗೆ) ತೈಲವನ್ನು ಬಳಿದರು. ೪೨೯. ಆ ರೀತಿಯಿಂದ ದಮಯಂತಿಯ ಸಖಿಯರು ಶ್ರೇಷ್ಠ ಸ್ನಾನ ಮಾಡಿಸಿ ಹೊರಡಲು ಅನೇಕ ವಿಧವಾದ ವಾದ್ಯದೊಡನೆ ಸಕಲ ಬಂಧುಜನರೂ ಕೂಡಿದರು. ೪೩೦. ಆ ತರುವಾಯ ನಳ ಮತ್ತು ದಮಯಂತಿಯರಿಬ್ಬರೂ ಮೃದುವಾದ ವಸ್ತ್ರಗಳು, ಒಡವೆಗಳು ಮತ್ತು ಹೂಮಾಲೆಗಳನ್ನು ಧರಿಸಿ, ವಿವಾಹದ ಮನೆಯ ಹಸೆಗೆ ಬಂದು ಪ್ರೀತಿಯಿಂದ ಕುಳಿತರು. ೪೩೧. ಸವಿನುಡಿಯಿಂದ ಮಹಾರಾಜನು ಮಧುಪರ್ಕವನ್ನು ಅಣಿಗೊಳಿಸಲು, ಸಮಸ್ತ ವಾದ್ಯಗಳೂ ಕ್ಷೀರಸಮುದ್ರ ಘೋಷಿಸಿದಂತೆ ನಾದಗೈಯಲು ಚಂದ್ರಮುಖಿಯನ್ನು ಧಾರೆಯೆರೆದುಕೊಡಲು (ಭೀಮನೃಪಾಲನು) ತೊಡಗಿದನು. ೪೩೨. ಆ ವಿಜಯೋತ್ಸವವೇ ಶುಭಮುಹೂರ್ತವೆನ್ನಿಸಲು, ನಾನಾ ತೆರನಾದ ಮಂಗಳವಾದ್ಯಗಳ ವಿಶೇಷ ಘೋಷದಿಂದ ತನ್ನ ವಂಶವನ್ನು ಭಾವಿಸಿ ವರ್ಣಿಸಲು,

ಗಾವಳಿ ವಾರಣೌಘಸಹಿತಂ ಮನವೊಲ್ದಿೞಿದಂ ನಿಜಾನ್ವಯಂ
ಭಾವಿಸಿ ಬಣ್ಣಿಸಲ್ ವಿವಿಧಮಂಗಳವಾದ್ಯವಿಶೇಷಘೋಷದಿಂ ೪೩.೨

ಪೊಸತೆನೆ ವಿ[ವಾ]ಹಹೋಮವ
ನೆಸಗಿ ಬೞಿಕ್ಕಮರ್ದ ಸಪ್ತಪದಿಯಂ ಮೆಟ್ಟಲ್
ಪಸರಿಸಿರೆ ಮಂತ್ರತತಿ ಷ
ಡ್ರಸಭೋಜನದೆಸೆವ ಬೂವದೆಡೆಯಾಯ್ತಾಗಳ್ ೪೩.೩

ಮಣಿಮಯದೀಪವುಜ್ಜ್ವಲಿಸೆ ರನ್ನದ ಕೇವಣದೆಟ್ಗಿಯೊಪ್ಪುವ
ಡ್ಡಣಿಗೆಯೊಳಿಟ್ಟು ಹೊನ್ನ ಹರಿಯಾಣವನೋರಣವಾಗಿ ಬಟ್ಟಲಂ
ಗಣನೆಗಳಿಲ್ಲದಿಟ್ಟೆಡದ ಮಿಂಚುವ ಗಿಂಡಿಗಳೊಪ್ಪೆ ಚೆನ್ನ ಬಿ
ಜ್ಜಣಿಗೆ ಕರಂ ಮನಂಗೊಳಿಸಲಿಂತೆಡೆಯಾದುದು ಬೂವದೂಟದೊಳ್ ೩೩.೪

ಮುದದಿಂ ಕೂತೆರ್ೞಡವಂದ ನಿಬ್ಬಣಿಗರಂ ಸಂಗೀತಸಾಹಿತ್ಯಕೋ
ವಿದರಂ ಬಂಧುಗಳಾದ ಭೂಪತಿಗಳಂ ವಿದ್ವಜ್ಜನಶ್ರೇಣಿಯಂ
ಮೃದುಪೀಠಂಗಳನಿಕ್ಕಿ ರಾಜಕುಲವೃದ್ಧಾದಿಕ್ರಮಂ ರಂಜಿಸಲ್
ಪದಪಿಂ ಪಂಕ್ತಿಗಳಾಗಿ ಕುಳ್ಳಿರಿಸಿದರ್ ವಾಕ್ಯೋಪಚಾರಂಗಳಿಂ ೪೩.೫

ಗುಣಶಾಲಿಯಾದ ಭೀಮಮಹಾರಾಜನು ದಮಯಂತಿಯನ್ನು ಮಿಗಿಲಾಗಿ ನಿಷಧದೇಶದ ದೊರೆಯಾದ ನಳಮಹಾರಾಜನಿಗೆ ಕುದುರೆಗಳ ಸಮೂಹ, ಆನೆಗಳ ಗುಂಪಿನೊಂದಿಗೆ ಮನ ಮೆಚ್ಚಿ ಕೈನೀರನ್ನೆರೆದು ಕೊಟ್ಟನು. ೪೩.೩. ಹೊಸತೆಂಬಂತೆ ವಿವಾಹದ ಹೋಮವನ್ನು ಮಾಡಿ, ಅನಂತರ ಸಪ್ತಪದಿಯನ್ನು ಮೆಟ್ಟಲು, ಮಂತ್ರಸಮೂಹವು ಆವರಿಸಲು, ಷಡ್ರಸೋಪೇತವಾದ ಭೋಜನವು ಅಣಿಯಾಗಿರಲು ಬೂವಕ್ಕೆ ಸಿದ್ಧವಾಯಿತು. ೪೩.೪. ಮಣಿಖಚಿತವಾದ ದೀಪಗಳು ಬೆಳಗಲು, ರತ್ನದಿಂದ ಕೇವಣಿಸಿದ ಒಪ್ಪುವ ಅಡ್ಡಣಿಗೆಯ ಮೇಲೆ ಚಿನ್ನದ ತಟ್ಟೆಯನ್ನಿಟ್ಟು, ಒಪ್ಪವಾಗಿ ಲೆಕ್ಕವಿಲ್ಲದಷ್ಟು ಬಟ್ಟಲುಗಳನ್ನು ಇಟ್ಟು, ಎಡಗಡೆಯಲ್ಲಿ ಹೊಳೆ ಹೊಳೆಯುವ ಗಿಂಡಿಗಳೊಪ್ಪಲು, ಚೆನ್ನಾಗಿರುವ ಬೀಸಣಿಗೆಗಳು ವಿಶೇಷವಾಗಿ ಮನಸ್ಸನ್ನು ಒಲಿಸಲು ಬೂವದೂಟವು ಈ ರೀತಿ ಏರ್ಪಟ್ಟಿತು. ೪೩.೫. ಸಂತೋಷದಿಂದ ಒಲಿದು ಒಡಗೂಡಿಬಂದ ನಿಬ್ಬಣಿಗರನ್ನು, ಸಂಗೀತ ಸಾಹಿತ್ಯಗಳಲ್ಲಿ ಪ್ರವೀಣರಾದವರನ್ನು, ನಂಟರಾದ ಮಹಾರಾಜರುಗಳನ್ನು, ವಿದ್ವಾಂಸರ ವೃಂದವನ್ನು, ರಾಜಕುಲವೃದ್ಧರೇ ಮೊದಲಾದವರು ಕ್ರಮಾನುಗತವಾಗಿ ಶೋಭಿಸಲು, ಮೃದುವಾದ ಆಸನಗಳನ್ನು ಏರ್ಪಡಿಸಿ, ಪ್ರೀತಿಯಿಂದಲೂ ಮಾತುಕತೆಗಳ

ಒಡನೊಟ್ಟಿಕ್ಕವನೀಶ್ವರಂ ಕರೆವಿನಂ ಸಲ್ಲಜ್ಜೆಯಿಂ ಕಾಂತೆ ಮೆ
ಲ್ಲಡಿಯಂ ಪಿಂದಿಡುತಂ ಮುಗುಳ್ನಗೆ ಮಿಗಲ್ ಕಂಡಾಳಿಯರ್ ಸೋಂಕಿ ಕೈ
ವಿಡಿದೊಲ್ದೊಯ್ಯನೆ ತಂದು ಕುಳ್ಳಿರಿಸಿ ನಾನಾ ಭಕ್ಷ್ಯಭೋಜ್ಯಂಗಳಂ
ಕಡುಪೆರ್ಚಿಂ ಬಡಿಸಲ್ಕದೇಂ ಮೆರೆ³ದುದೋ ಬೂವಂ ಪ್ರಮೋದಾವಹಂ ೪೩೭

ಅಳಕಂ ನೀಳಬಳಾಹಕಂ ಘನರವಂ ಸತ್ಕಿಂಕಿಣೀ ಸಿಂಜಿನೀ
ವಳಯಂಧ್ವಾನಮನೇಕ ಭೂಷಣಮ[ಣಿ] ಜ್ಯೋತ್ಸ್ನಾಳಿ ಗೋತ್ರಾರಿ ಚಾ
ಪಳಚಾಪಂ ತಮಗೆಂಬಿನಂ ಸಹಜಲಾವಣ್ಯಾಮೃತಾಸಾರಮಂ
ಲಲನಾಸಂತತಿ ಸಾಲಿಡಲ್ ಸೊಗಸದೇ ಬೂವಂ ಜಗತ್ಪಾವನಂ ೪೩೮

ಅಧರಸುಧಾರಸಂ ಕುಶಲಹಸ್ತಸುಧಾರಸಮಿಂಪುವೆತ್ತ ವಾ
ಕ್ಸುಧೆಯರಸಂ ಕಟಾಕ್ಷಸಿತಕಾಂತಿಸುಧಾರಸಮಾತ್ತ ಯೌವನಾಂ
ಬುಧಿಯಸುಧಾರಸಂ ಕರಜದೀಪ್ತಿಸುಧಾರಸಮೊಪ್ಪಲೊಪ್ಪಿದರ್
ವಿಧುಮುಖಿಯರ್ ನಿಜಾವಯವಷಡ್ರಸಮಂ ಸವಿದೋರ್ಪ ಮಾಟ್ಕೆಯಿಂ ೪೩೯

ಉಪಚಾರಗಳಿಂದಲೂ, ಪಂಕ್ತಿ ಪಂಕ್ತಿಗಳಾಗಿ ಕೂಡಿಸಿದರು. ೪೩೭. ಮಹಾರಾಜನು ಸಹಪಂಕ್ತಿ ಭೋಜನಕ್ಕೆ ಕರೆಯುವತನಕ, ತರುಣಿಯಾದ ದಮಯಂತಿ ತುಂಬು ನಾಚಿಕೆಯಿಂದ ಮೆಲ್ಲಡಿಗಳನ್ನು ಹಿಂದೆ ಹಿಂದೆ ಇಡುತ್ತ, ಮುಗುಳ್ನಗೆಯನ್ನು ಸೂಸಲು, ಅದನ್ನು ನೋಡಿ ಸಖಿಯರು, ಆಕೆಯ ಪಕ್ಕಕ್ಕೆ ಸರಿದು, ಕೈಹಿಡಿದು, ಪ್ರೀತಿಯಿಂದ ಕೂಡಲೆ ತಂದು ಕೂಡಿಸಿ, ನಾನಾ ವಿಧವಾದ ಭಕ್ಷ್ಯ ಭೋಜ್ಯಗಳನ್ನು ವಿಶೇಷವಾದ ಉತ್ಸಾಹದಿಂದ ಬಡಿಸಲು, ಬೂವದ ಆನಂದೋತ್ಸಹವು ಅದೆಷ್ಟು ಮೆರೆಯಿತೋ. ೪೩೮. ಕೂದಲೇ ಕಪ್ಪಾದ ಮೋಡಗಳು, ಒಳ್ಳೆಯ ಗೆಜ್ಜೆ ಮತ್ತು ಕಾಲಂದುಗೆಗಳ ನಾದವೇ ಗುಡುಗಿನ ಶಬ್ದ, ನಾನಾ ಆಭರಣಗಳ ಮಣಿಖಚಿತವಾದ ಬೆಳುದಿಂಗಳ ಸಮೂಹವೇ ಅಸ್ಥಿರವಾದ ಇಂದ್ರಧನುಸ್ಸು (ಕಾಮನ ಬಿಲ್ಲು) ತಮಗೆ ಎಂಬಂತೆ, ಆ ತರುಣಿಯರ ಸಮೂಹವು ಸಮಸ್ತ ಲಾವಣ್ಯಾಮೃತಸಾರವನ್ನು ಸಾಲಿಡಲು, ಲೋಕ ಪಾವನವಾದ ಬೂವವು ಸೊಗಸದೆ ಇದ್ದೀತೆ ? ೪೩೯. ಕೆಳದುಟಿಯ ಸುಧಾರಸ, ಚತುರ ಹಸ್ತದ ಸುಧಾರಸ, ಹಿತವಾದ ಮಾತಿನ ಸುಧಾರಸ, ಕಡೆಗಣ್ಣ ನೋಟದ ಬಿಳುಪಾದ ಸುಧಾರಸ, ಪ್ರಾಪ್ತವಾದ ಪ್ರಾಯಸಮುದ್ರದ ಸುಧಾರಸ, ಕೈ ಉಗುರಿನ ಕಾಂತಿಯ ಸುಧಾರಸ ಎಂಬಿವು ಒಪ್ಪುವಂತಿರಲು, ಚಂದ್ರಮುಖಿಯರು ತಮ್ಮ ಅವಯವ ಷಡ್ರಸವನ್ನು ಸವಿದೋರಿಸುವ ರೀತಿಯಲ್ಲಿ ಒಪ್ಪವಾಗಿ ತೋರಿ

ವಳಯಂಗಳ್ ಸೂಡಗಂ ಕಂಕಣತತಿ ನಿಗಳಂ ಹಸ್ತಸೂತ್ರಂ ಲಸತ್ಕೋ
ಮಳಲಾಕ್ಷಾರಕ್ತರಾಗಂ ನವಮಣಿಮಯ ನೂತ್ನಾಂಗುಲೀಯಂ ಕರಂ ಕಂ
ಗೊಳಿಸಿರ್ಪಾವೋದ ಹಸ್ತಾಬ್ಜದಿನನುಪಮ ನಾನಾಪದಾರ್ಥಂ ಪ್ರಸಿದ್ಧಂ
ಗಳನೊಯ್ಯಾರಂಗಳಿಂದಂ ಬಡಿಸಿದರರೆಬರ್ ಕಾಂತೆಯರ್ ಪಂಕ್ತಿಗಾಗಳ್ ೪೩೯

ನೇವುರದ ರವಂ ಕಾಂಚಿಗೆ
ಕೇವಣಿಸಿದ ಕಿಂಕಿಣೀರವಂ ಮಣಿಮಯರು
ಕ್ಪೀವರ ಕೇಯೂರರವಂ
ತೀವಿರಲೆಡೆಯಾಡಿ ಬಡಿಸಿದರ್ ಕೋಮಳೆಯರ್ ೪೪೦

ಪರಡಿ ಕಿಱುಗೋದಿಸೇವಗೆ
ಸರವಳಿಗೆ ಸುಗಂಧಕಟವೆಯಕ್ಕಿಯ ಪಾಕಂ
ಪರಿವಡೆಯಲಣ್ಣೆವಾಲಿಂ
ಬೆರಸಿದ ಸಕ್ಕರೆಯ ತುಯ್ಯಲಿಕ್ಕಿದರರೆಬರ್ ೪೪೧

ರಸವದ್ಗೋಧೂಮದಿಂ ಪಾವನತರ ಯವೆಯಿಂ ಮಾಷದಿಂ ಮುದ್ಗದಿಂದಂ
ಪೊಸಕಂಗಿಂ ಶಾಲಿಯಿಂದಾಢಕಿಯಿನಮಲ ನಿಷ್ಪಾವದಿಂ ರಂಜಿಸಲ್ ಭ
ಕ್ಷ್ಯಸಹಸ್ರಂ ಶರ್ಕರಾಮಿಶ್ರಣದಿನರೆಬರಬ್ಜಾಸ್ಯೆಯರ್ ಬಡ್ಡಿಸಲ್ ಕಂ
ಗೆಸೆದತ್ತುದ್ವಾಹಸದ್ಭೋಜನವನುಪಮ ಪಂಚೇಂದ್ರಿಯಪ್ರೀತಿಯಾಗಲ್ ೪೪೨

ಬಂದರು. ೪೩೯. ಬಳೆಗಳು, ಕಡಗ, ಕಂಕಣಸಮೂಹ, ಸರಪಳಿ, ಕೈದಾರ, ಪ್ರಕಾಶಮಾನವಾದ ಕೋಮಳ ಲಾಕ್ಷಾರಸದ ಕೆಂಪು, ನವಮಣಿಮಯವಾದ ಹೊಸ ಉಂಗುರಗಳಿಂದ ವಿಶೇಷವಾಗಿ ಶೋಭಿಸುವ ಆನಂದದಾಯಕವಾದ ಕರಕಮಲಗಳಿಂದ ಸುಪ್ರಸಿದ್ಧವಾದ ನಾನಾ ಬಗೆಯ ತಿಂಡಿತಿನಿಸುಗಳನ್ನು ಕೆಲವು ತರುಣಿಯರು ಸಾಲು ಸಾಲಾಗಿದ್ದ ಜನಕ್ಕೆ ಆಗ ವೈಯಾರದಿಂದ ಬಡಿಸಿದರು. ೪೪೦. ಕಾಲಂದುಗೆಯ ಶಬ್ದ, ಡಾಬಿಗೆ ಜೋಡಿಸಿದ್ದ ಗೆಜ್ಜೆಗಳ ಶಬ್ದ, ಮಣಿಮಯವಾದ ಕಾಂತಿಯುಕ್ತವಾದ ದಪ್ಪನಾದ ತೋಳಬಂದಿಗಳ ಶಬ್ದಗಳು ತುಂಬಿರಲು, ಕೋಮಳೆಯರು ಅತ್ತಿತ್ತ ಓಡಾಡುತ್ತ ಬಡಿಸಿದರು. ೪೪೧. ಪರಡಿ, ಚಿಕ್ಕ ಗೋಧಿಯ ಸೇವಗೆ, ಸರವಳಿಗೆ, ಸುಗಂಧಯುಕ್ತವಾದ ಅಕ್ಕಿಯ ಪಾಕಗಳು ಕ್ರಮವಾಗಿರಲು, ಅಣ್ಣೆವಾಲನ್ನು ಬೆರಸಿದ ಸಕ್ಕರೆಯ ಪಾಯಸವನ್ನು ಕೆಲವರು ಬಡಿಸಿದರು. ೪೪೨. ರಸವತ್ತಾದ ಗೋಧಿಯಿಂದಲೂ, ಶ್ರೇಷ್ಠವಾದ ಜವೆಗೋಧಿಯಿಂದಲೂ, ಉದ್ದಿನಿಂದಲೂ, ಹೆಸರುಕಾಳಿನಿಂದಲೂ, ಹೊಸತಾದ ಅಡಕೆಯಿಂದಲೂ, ಅಕ್ಕಿಯಿಂದಲೂ, ತೊಗರಿಯಿಂದಲೂ, ಪವಿತ್ರವಾದ ಅವರೆಯಿಂದಲೂ, ಸಕ್ಕರೆಯಿಂದೊಡಗೂಡಿದ ಸಹಸ್ರ ಭಕ್ಷ್ಯಗಳು ರಂಜಿಸುತ್ತಿರಲು, ಕೆಲವು ಕಮಲಮುಖಿಯರು ಬಡಿಸಲು ಆ ಕಲ್ಯಾಣದ ಸದ್ಭೋಜನವು ಅಸದೃಶವಾದ ಪಂಚೇಂದ್ರಿಯ ಪ್ರೀತಿಯಾಗು.

ಕಪ್ಪುರನಾಳೀಗಳಸಂ
ತುಪ್ಪದ ಹೂರಿಗೆ ಬುರುಂಡೆ ಜಾಕಾಯ್ನುಱುಗಂ
ಪೊಪ್ಪುವ ಮೋರುಂಡೆ ಮನ
ಕ್ಕೊಪ್ಪಿಸಿದುವು ಮಧುರರಸದ ಸುಧೆಯಂ ಬುಧರೊಳ್ ೪೪೩

ಪಲರಜಿಕೆಯ ಭಕ್ಷ್ಯಗಳಂ
ಪಲವುಕಾಯಿಮಾಧುರಂಗಳಂ ಪಲವಂ ನು
ಣ್ಮಲೆವಾ ದುರವ.........(?)
ಲಲಿತಾಂಗಿಯರೊಲ್ದು ಬಡಿಸಿದರ್ ಪಂಕ್ತಿಗಳಂ ೪೪೪

ನಳಮತವಂ ಪ್ರಕಟಿಸಿದಂ
ಸಲಿಲಂ ಶಿಖಿಯಿಲ್ಲದಮೃತ ಪಾಕವನಾಗಳ್
ನಳನೃಪತಿ ಭಕ್ಷ್ಯಭೋಜ್ಯಾ
ವಳಿಯಿಂ ನಿಬ್ಬಣ[ದ] ಭೂಭುಜರ್ ಬೆಱಗಾಗಲ್ ೪೪೫

ಪರಿಪರಿಯ ಪಲವು ಕಾಯ್ ಮಾ
ದುರವಂ ಶಿಖಿಯುದಕವಿಲ್ಲದೊಬ್ಬಳ ಕಯ್ಯಿಂ
ವಿರಚಿಸಿದಂ ನಳಪಾಕವ
ನರಸುಗಳಚ್ಚರಿಯೆನಲ್ ನಳಕ್ಷಿತಿನಾಥಂ ೪೪೬

ಸಾಸವೆ ಶಿಖರಿಣೆ ಪಳಹಂ
ಕೀಸಿದ ಹುಳಿಯಲ್ಲವೊಗ್ಗಿನುಪ್ಪಿನಕಾಯ್ಗಳ್

ವಂತೆ ಕಣ್ಣಿಗೆ ತೋರಿಬಂದಿತು. ೪೪೩. ಕರ್ಪೂರದ ನಾಳೀಗಳಸ (?), ತುಪ್ಪದ ಹೂರಿಗೆ, ಬುರುಂಡೆ (?) ಜಾಜಿಕಾಯಿಯ ಸುವಾಸನೆಯೊಪ್ಪುವ ಮೋರುಂಡೆ (?) ಗಳು ವಿದ್ವಾಂಸರ ಮನಸ್ಸಿಗೆ ಸವಿಯಾದ ರಸದ ಅಮೃತವನ್ನು ನೀಡಿದುವು. ೪೪೪. ಹಲವು ಬಗೆಯ ಸುಪ್ರಸಿದ್ಧವಾದ ಭಕ್ಷ್ಯಗಳನ್ನೂ, ಹಲವು ಕಾಯಿಗಳ ಮಧುರ ವಾದ ಆಹಾರಗಳನ್ನೂ . . . . ಪಂಕ್ತಿಗಳಿಗೆ ತರುಣಿಯರು ಮೆಚ್ಚಿ ಬಡಿಸಿದರು. ೪೪೫. ಮದುವೆಗಾಗಿ ಬಂದಿದ್ದ ರಾಜರು ಬೆರಗಾಗುವಂತೆ ನಳಮಹಾರಾಜನು ನೀರನ್ನೂ, ಬೆಂಕಿ ಯನ್ನೂ ಬಳಸದಂತಹ ಅಮೃತಸದೃಶವಾದ ಪಾಕವೆನ್ನಿಸುವ ಭಕ್ಷ್ಯಭೋಜ್ಯಾವಳಿಗಳಿಂದ ನಳಪಾಕವನ್ನು ಪ್ರದರ್ಶಿಸಿದನು. ೪೪೬. ರಾಜರು ನಳಪಾಕವನ್ನು ಕಂಡು ಆಶ್ಚರ್ಯ ಪಡುವಂತೆ, ನಳಮಹಾರಾಜನು ಬೆಂಕಿಯನ್ನೂ ನೀರನ್ನೂ ಉಪಯೋಗಿಸದಂತೆ ಒಬ್ಬಾಕೆಯ ಕೈಯಿಂದ ಬಗೆಬಗೆಯ ಹಲವಾರು ಕಾಯಿಪದಾರ್ಥಗಳನ್ನು ಸಿದ್ಧಪಡಿಸಿದನು. ೪೪೭. ಸಾಸವೆ, ಶಿಖರಿಣೆ, (ಮೊಸರು ಮತ್ತು ಸಕ್ಕರೆಗಳು ಬೆರೆಸಿದ ಒಂದು ಬಗೆಯ ಭಕ್ಷ್ಯ)

ಬೇಸಿದ ಕುಡಿನಿರ್ಪಾನಂ (?)
ವಾಸವಭೋಗವನಡಿರ್ಪದಿರ್ಪವೆ ಸತತಂ ೪೪೭

ತಿಳಿದುಪ್ಪದೊಳಳಕಂಗಳ್
ಪೊಳೆಯಲ್ ಕಪ್ಪಿಲ್ಲಿ ಬಿರ್ದುದೇದಾಗಳ್ ಕೋ
ಮಳೆಯರ್ ಶೋಧಿಸಿ ಶೋಧಿಸಿ
ಬಟಿಲ್ವರತಿಮುಗ್ಧೆಯರ್ ಎದಗ್ಧರ ಕೆಲದೊಳ್ ೪೪೮

ಜೂಳೆಯುದ ಮುತ್ತು ಪಜಿದು ನೃ
ಪಾಲಕನಗಲೊಳಗೆ ಪರೆಯಲಾಯಲ್ಪುಗೆದಂ
ದಾ ಲಲನೆ ಕಟಿವೆಯೋಗರ
ದೋಳಿಯ ಮುತ್ತುಗಳ ಭೇದವಜಿಯದೆ ನಿಂದಳ್ ೪೪೯

ಮಿಗೆ ತಿಳಿದುಪ್ಪಮಂ ಪನಿಯ ಪಾನವನಿರ್ಕೆಲವಟ್ಟಲಲ್ಲಿ ತಂ
ದಗಲಿಡಲಲ್ಲಿ ಭೇದದಜಿವಿಲ್ಲದೆ ಸುಮ್ಮನಿರಲ್ಕೆ ತುಪ್ಪವೇಂ
ಸೊಗಸದೆ ಪೇಟನಲ್ ನಿಜಮುಖಂ ಪ್ರತಿಬಿಂಬಿಸಲಿಟ್ಟ ತುಪ್ಪವೇಂ
ಸೊಗಸದೆ ಸದ್ದ್ವಿಜರ್ಗಬಲೆಯೆಂದನದೊರ್ವ ವಿದಗ್ಧ ಭೂಭುಜಂ ೪೫೦

ಬಡಿಸಲ್ಬಂದೆಡೆಯಾಡುವಂಗನೆಯುರಂಗಚ್ಛಾಯೆಗಳ್ ತುಪ್ಪದಿಂ
ಗಡಲೊಳ್ ಪಾನರಸಂಗಳೊಳ್ ಸಕಲಭೂಪಾರತ್ನದೊಳ್ ನೀದವೊಲ್

ಪಳಹ, ಕೀಸಿದ ಹುಳಿ, ಶುಂಠಿ, ಒಗ್ಗಿನ (?) ಉಪ್ಪಿನಕಾಯಿಗಳು . . . .ಇಂದ್ರನ ವೈಭವವನ್ನು ಸರ್ವದಾ ಜಗ್ಗಿಸದೆ ಇರುತ್ತವೆಯೆ ? ೪೪೮. ತಿಳಿಯಾದ ತುಪ್ಪದಲ್ಲಿ ಕೂದಲು ಬೆಳಗಲು ಇಲ್ಲಿ ಕಪ್ಪು ಬಿದ್ದಿರುವುದೇದು ಅತಿಮುಗ್ಧೆಯರಾದ ಕೋಮಳೆಯರು ತಿಳಿದವರ ಪಕ್ಕದಲ್ಲಿ ಹುಡುಕಿ ಹುಡುಕಿ ಆಯಾಸಗೊಂಡರು. ೪೪೯. ಕುಚ್ಚಿನ ಮುತ್ತು ಕಿತ್ತು ಮಹಾರಾಜನ ತಟ್ಟೆಯಲ್ಲಿ ಬೀಳಲು ಅದನ್ನು ಆರಿಸಲು ತೊಡಗಿದ ಆ ಹೆಣ್ಣು, ಒಳ್ಳೆಯ ಆಹಾರದ ಅಗುಳಿಗೂ, ಮುತ್ತುಗಳಿಗೂ ವ್ಯತ್ಯಾಸವನ್ನು ಗುರುತಿಸಲಾರದೆ ಸುಮ್ಮನೆ ನಿಂತಳು. ೪೫೦. ಸೊಗಸಾದ ತಿಳಿದುಪ್ಪವನ್ನೂ, ನೀರಿನ ಪಾನಕವನ್ನೂ ಎರಡು ಬಟ್ಟಲುಗಳಲ್ಲಿ ತಂದು ತಟ್ಟೆಯ ಬಳಿಯಲ್ಲಿಡಲು, ಅವುಗಳ ಭೇದವನ್ನು ಗುರುತಿಸಲಾರದೆ ಸುಮ್ಮನಿರಲು, ತುಪ್ಪವು ಚೆನ್ನಾಗಿಲ್ಲವೆ ಹೇಳಿರೆನ್ನಲು, 'ಎಲೈ ತರಳೆಯೆ, ನಿನ್ನ ಮುಖವು ಪ್ರತಿಬಿಂಬಿಸುವಂತೆ ಇಟ್ಟ ತುಪ್ಪವು ಸದ್ಬ್ರಾಹ್ಮಣರಿಗೆ ಸೊಗಸದೆ ಇದ್ದೀತೆ ?' ಎಂದು ಪ್ರವೀಣನಾದ ಮಹಾರಾಜನೊಬ್ಬನು ಹೇಳಿದನು. ೪೫೧. ಬಡಿಸಲು ಬಂದು ಓಡಾಡುತ್ತಿರುವ ಹೆಂಗಸರ ಶರೀರದ ಛಾಯೆಗಳು ತುಪ್ಪದ ಸವಿಯಾದ ಸಮುದ್ರದಲ್ಲಿ,

ಗಡಣಂಗೊಂಡು ಮುಗುಳ್ದು ಪೋಗಲೆಸೆಗುಂ ಭೂಪಾಲರೊಳ್ ಕೂರ್ವೆಯಿಂ
ದೊಡನೂಟಂಬಡೆದಿರ್ದು ಪೋಪ ಸುದತೀಸಂದೋಹಮೆಂಬಂದದಿಂ ೪೫೧

ಚಾಪಳವೃತ್ತಿಯಂ ಮೆಱೆವ ತಾಣವಿದಲ್ತೆಮಗೆಂದು ಮಾನ್ಯಧಾ
ತ್ರೀಪತಿಗಳ್ ಕೆಲರ್ ನೆಲನನಪ್ಪುವವೊಲ್ ತಲೆವಾಗಿದರ್ ವಧೂ
ನೂಪುರರತ್ನದೊಳ್ ಪೊಳೆಯೆ ತಮ್ಮ ಮನೋಹರಮೂರ್ತಿಗಳ್ ಪಿಕಾ
ಳಾಪೆಯರಂಘ್ರಿಗಳ್ಗೆಱಗಿ ಬೇಟ್ಪ ಸುಖಂಬಡೆವಂಗಭಂಗಿಯಿಂ ೪೫೨

ನಡುವಂ ಕಾಂಚಿಯೊಳಾಂತು ರೂಪವತಿಯರ್ ನಾನಾ ಪದಾರ್ಥಂಗಳಂ
ಬಡಿಸಲ್ಬಾಗಿರಲುನ್ನತಸ್ತನಯುಗಂ ಸ[ಂ]ವ್ಯಾನಮಂ ನೂಂಕೆ ಮೆ
ಯ್ದೊಡವಂ ಹಾರವನಂಗಕಾಂತಿಯನಿತಂ ಪುಣ್ಯಾಧಿಕರ್ ಕಂಡು ಕ
ಣ್ಣಿಡುವರ್ ಭೋಜನಮಂ ಬಿಸುಟ್ಟು ಪಸಿವಿಲ್ಲೆಂಬರ್ ಸಮೀಪಸ್ಥರೊಳ್ ೪೫೩

ಬಡಿಸುವ ಗಾಡಿಕಾರ್ತಿಯರ ವಕ್ತ್ರವನೀಕ್ಷಿಸಲಾಸೆವಟ್ಟು ನೀ
ರಡಸದೆಯುಂ ಸುಗಂಧಜಲವಿಲ್ಲದಿರಲ್ ಬಱಿಗಿಂಡಿಯಂ ಸಮಂ
ತಡಿಗಡಿಗೆತ್ತಿ ನೀರ್ಗುಡಿವ ಬಲ್ನೆವದಿಂ ಮೊಗವೆತ್ತಿಯೆತ್ತಿ ಕ
ಯ್ಮಿಡುವರತೀವಕಾಮುಕರಭೇದ್ಯವೆನಲ್ ನಿಜಚೇಷ್ಟೆ ದೃಷ್ಟಿಯೊಳ್ ೪೫೪

ಕುಡಿಯುವ ಪಾನಕಾದಿಗಳಲ್ಲಿ, ಸಮಸ್ತ ಆಭರಣಗಳ ರತ್ನಸಮೂಹದಲ್ಲಿ ನಿಂತಂತೆ ಒಟ್ಟುಗೂಡಿ ಪುನಃ ತೆರಳಲು, ರಾಜರೊಂದಿಗೆ ಪ್ರೀತಿಯಿಂದ ಊಟಮಾಡಿ ಹೋಗುವ ಸ್ತ್ರೀಯರ ಸಮೂಹವೋ ಎಂಬಂತೆ ಮೆರೆಯುವುವು. ೪೫೨. ತಮ್ಮ ಚಂಚಲಮನಸ್ಸನ್ನು ವ್ಯಕ್ತಪಡಿಸುವ ಸ್ಥಳವಿದಲ್ಲವೆಂದು ಕೆಲವು ಮಾನ್ಯರಾಜರು ನೆಲವನ್ನು ಅಪ್ಪುವಂತೆ, ಸ್ತ್ರೀಯರ ಕಾಲುಂದುಗೆಯ ರತ್ನದಲ್ಲಿ ತಮ್ಮ ಮನೋಜ್ಞವಾದ ಸ್ವರೂಪಗಳು ರಾರಾಜಿಸುತ್ತಿರಲು, ಗಿಳಿಯಂತೆ ಆಲಾಪಿಸುವವರ ಪಾದಗಳಿಗೆ ನಮಸ್ಕರಿಸಿ ಬೇಡುವ ಸುಖವನ್ನು ಪಡೆವ ಶರೀರವಿನ್ಯಾಸದಿಂದ ತಲೆತಗ್ಗಿಸಿದರು. ೪೫೩. ರೂಪವತಿಯರು ಸೊಂಟದಲ್ಲಿ ಡಾಬನ್ನು ಧರಿಸಿ, ನಾನಾ ಬಗೆಯ ತಿಂಡಿತಿನಿಸುಗಳನ್ನು ಬಡಿಸಲೆಂದು ಬಾಗಿರಲು, ಉಬ್ಬಿದ ಎರಡು ಮೊಲೆಗಳೂ ಸೆರಗನ್ನು ಸರಿಸಿರಲು, ಶರೀರದ ಆಭರಣಗಳನ್ನೂ, ಹಾರವನ್ನೂ, ಮೈಯಕಾಂತಿಯೆಲ್ಲವನ್ನೂ ಪುಣ್ಯಶಾಲಿಗಳು ಕಂಡು ಊಟಮಾಡುವುದನ್ನೇ ಬಿಟ್ಟು ಕಣ್ಣು ಹಾಯಿಸುವರು ; ಅಕ್ಕಪಕ್ಕದವರೊಂದಿಗೆ ಹಸಿವಿಲ್ಲ ಎನ್ನುವರು. ೪೫೪. ಬಡಿಸುವ ಸುಂದರಿಯರ ಮುಖವನ್ನು ನೋಡಬಯಸಿ, ನೀರಡಿಕೆಯಾಗದಿದ್ದರೂ, ಪರಿಮಳಮಿಶ್ರವಾದ ನೀರಿಲ್ಲದಿದ್ದರೂ, ಬರಿದಾದ ಗಿಂಡಿಯನ್ನು ಚೆನ್ನಾಗಿ ಆಗಿಂದಾಗ್ಗೆ ಎತ್ತಿ ನೀರನ್ನು ಕುಡಿಯುವ ತುಂಬು ನೆಪದಿಂದ ಮುಖವನ್ನು ಮೇಲಕ್ಕೆ ಎತ್ತೆತ್ತಿ, ಅತೀವ ಕಾಮುಕರು

ಬಡಿಸಿದರೇನನಾವೆಡೆಯೊಳಾವುದನಿಕ್ಕಿದರಾವುದೋಗರಂ
ನಡುಕಡೆ ಯಾವುದೆಂಬುಣಿಸಿನುಜ್ಜುಗವಂ ಮಱೆದಾಚೆಗೀಚೆಗೆ
ಲ್ಲೆಡೆಗೆಡೆಯಾಡುವಾಕೆಯರ ಬೆಂಬಱಿಯೊಳ್ ನಿಜಚಿತ್ತಲೋಚನಂ
ಬಿಡದಿರಲೊಲ್ಲದುಂಬ ತೆಱಪೆಲ್ಲಿಯದೆಲ್ಲಿ ಜನಕ್ಕೆ ಸಂತತಂ (ಸಂ ?) ೪೫೫

ಸರಸವನಾಡಿ ಕಾಡಲರೆಬರ್ ಬಡಿಸಿಟ್ಟ ಪದಾರ್ಥದೊಳ್ ಸಮಂ
ಬರೆ ಪೆಱವಂ ವಿಡಂಬಿಸಲಭೋಜ್ಯಪದಾರ್ಥವನಿಕ್ಕಿ ನಕ್ಕು ಮೆ
ಯ್ಗರೆದಿರೆ ವರ್ಣಮಂ ಕಠಿಣಮಾರ್ದವಮಂ ನವಗಂಡಬಂಧಮಂ
ಪರಿಕಿಸಿ ನೋಟದಿಂ ಬೆರಲೊಳಂಟದೆ ಜಾಣ್ಮೆಗುವರ್ ನೃಪಾಲಕರ್ ೪೫೬

ಮನದೊಲವಿಂ ಪಸಿವಱಿಯದೆ
ವನಿತೆಯರಾನನವನೆವೆಯನಿಕ್ಕದೆ ನೋಡು
ತ್ತನಿಮಿಷಪದವಂ ಪಡೆದುದು
ಜನಸಂತತಿಯಮೃತಸದೃಶ ಭೋಜನಗೃಹದೊಳ್ ೪೫೭

ತುತ್ತುಗಳಂ ಕೆಲಬರ್ ಕಿವಿ
ಯುತ್ತೊಯ್ವರ್ ಬಱಿಯ ಕಯ್ಗಳಂ ಮೊಯ್ಮಱಿಂ
ತುತ್ತುವರರೆಬರ್ ಬಡಿಸಿತ
ನೆತ್ತಣದೆಂದಱಿಯದಿರ್ಪರುಟಿದರ್ ಸತತಂ ೪೫೮

ತಮ್ಮ ನೋಟದಲ್ಲಿ ನಿಜಚೇಷ್ಟೆ ಅಭೇದ್ಯವೆಂಬಂತೆ ಕೈನೀಡುವರು. ೪೫೫. ಏನನ್ನು ಬಡಿಸಿದರು, ಯಾವ ಸ್ಥಳದಲ್ಲಿ ಯಾವುದನ್ನು ಇಟ್ಟರು, ಭೋಜ್ಯವಸ್ತು ಯಾವುದು, ನಡು ಕಡೆ ಯಾವುದು ಎಂಬ ಉಣಿಸಿನ ಉದ್ಯೋಗವನ್ನೇ ಮರೆತು, ಅತ್ತಿತ್ತ ಎಲ್ಲೆಲ್ಲಿಯೂ ಓಡಾಡುವ ಸ್ತ್ರೀಯರನ್ನೇ ಹಿಂಬಾಲಿಸಿ ತಮ್ಮ ಮನಸ್ಸು ಮತ್ತು ಕಣ್ಣುಗಳು ಬಿಡದಿರಲು, ಬೇಡದೆ ತಿನ್ನುವ ಅವಕಾಶವೆಲ್ಲಿಯದು, ಜನಕ್ಕೆ ಸಂತೋಷವಾದರೂ ಎಲ್ಲಿ? ೪೫೬. ಕೆಲವರು ಬಡಿಸಿದ ಪದಾರ್ಥಗಳೊಂದಿಗೆ ಸರಸವನಾಡಿ ಕಾಡಲು, ಅವುಗಳಿಗೆ ಸರಿ ಸಮಾನವಾದ ಕೆಲವು ತಿನ್ನಬಾರದ ಪದಾರ್ಥಗಳನ್ನು ನಗೆಗೀಡುಮಾಡಲು ಬಡಿಸಿ, ನಕ್ಕು ಮೈಮರೆಸಿಕೊಂಡಿರಲು, ಬಣ್ಣವನ್ನೂ, ಕಠಿಣ ಹಾಗೂ ಮೃದುವಾದುವುಗಳನ್ನೂ ನವ ಗಂಡಬಂಧ (?)ವನ್ನೂ ನೋಡಿ ಪರೀಕ್ಷಿಸಿ, ಬೆರಳಿಗೆ ಒಗ್ಗದಂತಿರಲು ಮಹಾರಾಜರು ಅತಿಬುದ್ಧಿಯನ್ನು (ತೋರಿದರು) (?) ೪೫೭. ಜನಸಮೂಹವು ಅಮೃತಸಮಾನವಾದಂತಹ ಊಟದಮನೆಯಲ್ಲಿ, ಮನಃಪ್ರೇಮದಿಂದ, ಹಸಿವೆಯನ್ನರಿಯದೆ, ಸ್ತ್ರೀಯರ ಮುಖವನ್ನೇ ರೆಪ್ಪೆಬಡಿಯದೆ ನೋಡುತ್ತ ದೇವತೆಯರ ಪದವಿಯನ್ನು ಪಡೆಯಿತು. ೪೫೮. ಕೆಲವರು ತುತ್ತುಗಳನ್ನು ಕಿವಿಯ ಬಳಿಗೆ ಒಯ್ಯುವರು, ಇನ್ನು ಕೆಲವರು ಬರಿಯ ಕೈಗಳನ್ನೇ ಮೈಮರೆವಿನಿಂದ ತುತ್ತಾಗಿ (ಎಣಿಸುವರು). ಉಳಿದವರು ಸರ್ವದಾ ಬಡಿಸಿದ್ದ

11

ಇಕ್ಕಿದ ವಸ್ತುವಂ ಮರಳಿ ಬೇಡುವ ನೀರ್ಗೆಳಸುತ್ತ ತಕ್ಕನಿಂ
ಬಿಕ್ಕುವ ಸಂದುಕಟ್ಟುಱಿದು ಲಲ್ಲೆಯನಾಡುವ ತಂದ ವಸ್ತುವಿ
ನ್ನಿಕ್ಕುವ ಠಾವದಾವುದೆನುತೊಯ್ಯನೆ ಮೂಡುವ ಧೂರ್ತಪಂಕ್ತಿಗಳ್
ವಿಕ್ಕವರಂ ಮರುಳ್ಗೊಳಿಸದಿರ್ಪವೆ ಜಾಣೆಯರಲ್ಲದಿರ್ಪರಂ ೪೫೯

ವ॥ ಅನಂತರಂ

ಇನಿದೆಡೆಗೊಂಡಿರಲ್ ದಧಿಸಮುದ್ರದಿನುಣ್ಮಿದ ಫೇನಪಿಂಡವೆಂ
ಬಿನವಮಳೇಂದುಬಿಂಬವಿಳೆಯೊಳ್ ದಧಿರೂಪದಿನಿಂಬುವೆತ್ತುವೆಂ
ಬನುಪಮಗಂಧದಿಂ ಕುಳಿರ್ವ ಘಟ್ಟಿವೊಸರ್ ಕೆನೆಗಟ್ಟಿರಲ್ಕದಂ
ವನಜನಿಭಾಸ್ಯೆಯರ್ ಬಡಿಸಿದರ್ ಪದೆದೊಪ್ಪುವ ಪಂಕ್ತಿ ಪಂಕ್ತಿಯೊಳ್ ೪೬೦

ಕಟ್ಟುವೊಸರ್ ಸುಱಿವ ವೊಸರ್
ಘಟ್ಟಿವೊಸರ್ ಕೆನೆವೊಸರ್ ಕರಂ ತೊಳೆವೊಸರಿಂ
ಪಿಟ್ಟವೊಸರ್ ಪುಳಿವೊಸರಂ
ದಿಟ್ಟರ್ ಬಟ್ಟಲ್ಗಳಿಂ ಸರೋಜಾನನೆಯರ್ ೪೬೧

ಗಾವಟೆ ಬೆಲ್ಲವತ್ತವರೆಮಾದಲವಂಬಟೆ ಚೆಳ್ಳ ಚಿಲ್ಲಕಾಯ್
ಮಾವಿನಕಾಯ್ಗಳೊಪ್ಪುವೆಳಗಪ್ಪುರ ಮಾಗುಳಿಬೇರ್ ಸುಧಾರಸಂ

ಯಾವುದೆಂದು ತಿಳಿಯದಿರುವವರು. ೪೫೯. ಬಡಿಸಿದ ಪದಾರ್ಥವನ್ನೇ ಪುನಃ ಬೇಡುವ, ನೀರಿಗಾಗಿ ಬಯಸಿ ಕಪಟದಿಂದ ಬಿಕ್ಕುವ, ಸುಸಮಯವನ್ನರಿತು ಚೆಲ್ಲಾಟವಾಡುವ, ತಂದ ಪದಾರ್ಥವನ್ನು ಇಡುವ ಎಡೆ ಯಾವುದು ಎನ್ನುತ್ತ ಕೂಡಲೆ ತೋರಿಬರುವ ವಂಚಕರ ಸಾಲುಗಳು, ಜಾಣೆಯರಲ್ಲದಿರುವವರನ್ನು ಹೊರತು, ಉಳಿದವರನ್ನು ಭ್ರಾಂತಿಗೆ ಈಡು ಮಾಡದೆ ಇರುತ್ತವೆಯೆ ? ವ॥ ಆ ಬಳಿಕ, ೪೬೦. ಸವಿಗೂಡಿರಲು, ಮೊಸರಿನ ಕಡಲಿನಿಂದ ಹೊರಹೊಮ್ಮಿದ ನೊರೆಯ ಘಟ್ಟಿಯೋ ಎಂಬಂತೆ, ಪವಿತ್ರವಾದ ಚಂದ್ರ ಬಿಂಬವು ಭೂಮಿಯಲ್ಲಿ ಮೊಸರಿನ ರೂಪುಗಳಿಂದ ಹಿತವಾಯಿತೋ ಎಂಬಂತೆ, ಅಸದೃಶ ವಾದ ಸುವಾಸನೆಯಿಂದ ಕೊರೆಕೊರೆಯುವ ಘಟ್ಟಿಮೊಸರು ಕೆನೆಗಟ್ಟಿರಲು, ಕಮಲ ಮುಖಿಯರು ಓರಣವಾದ ಪಂಕ್ತಿ ಪಂಕ್ತಿಗಳಲ್ಲಿ ಪ್ರೀತಿಯಿಂದ ಬಡಿಸಿದರು. ೪೬೧. ಕಟ್ಟುಮೊಸರು, ಸುರಿವಮೊಸರು, ಘಟ್ಟಿಮೊಸರು, ಕೆನೆಮೊಸರು, ವಿಶೇಷವಾದ ತೊಳೆಮೊಸರು, ಸುವಾಸನಾಯುಕ್ತವಾದ ಮೊಸರು, ಹುಳಿಮೊಸರು ಎಂಬುದಾಗಿ ಕಮಲ ಮುಖಿಯರು ಬಟ್ಟಲುಗಳಿಂದ ಬಡಿಸಿದರು. ೪೬೨. ಗಾವಟೆ, ಬಿಲ್ವಪತ್ರೆ, ಅರೆಮಾದಲ, ಅಂಬಟೆ, ಚೆಳ್ಳ, ಚಿಲ್ಲಕಾಯಿ, ಮಾವಿನಕಾಯ್ಗಳು, ಒಪ್ಪುವ ಎಳೆಕರ್ಪೂರ, ಮಾಗಂಳಿ

ತೀವಿರೆ ಕಂಪು ಪೊಂಪುೞಿಸುವುಪ್ಪಿನಕಾಯ್ಗಳನೇಕಮಂ ಕಳಾ
ಕೋವಿದೆಯರ್ ಕೆಲಂಬಡಿಯಲಿಕ್ಕಿದರಿಕ್ಕು ಮಗುೞ್ದನುತ್ತಿ[ರಲ್] ೪೬೨

ನಳನಳಿಸುವ ಮೆಣಸಿನ ಕರೆ
ಹುಳಿಯಲ್ಲಂ ಬಿದಿರಕೞಲೆಯೇಲಕ್ಕಿಯಕಾಯ್
ಮೊಟಗಿನಕಾಯ್ ನೆಲ್ಲಿಯಕಾಯ್
ಕಟವೆಯಕಾಯ್ ಬೇಱೆವೇಱೆ ಸವಿವಡೆದಿರವೇ ೪೬೩

ವ॥ ಆಗಳೊರ್ವಳ್

ಅಲ್ಲದ ಸವಿಯುಂ ಕಂಡೊಡೆ
ಬಲ್ಲವನೆಂದೊರ್ವನಂ ವಿಡಂಬಿಸೆ ನಿನಗೇ
ನಲ್ಲಂ ಸವಿದೋರ್ಪುದನಾಂ
ಬಲ್ಲೆಂ ನೋಡೆನ್ನ ತೆಱನನೆಂದಂ ಧೂರ್ತಂ ೪೬೪

ಮಗಮಗಿಸುವಳೆಯ ಕಟಿಲಂ
ಸೊಗಸದಿರಲೀಂಟಿ ಸುೞಿದು ಚಪ್ಪೞಿದರರೆಬರ್
ಮಿಗೆ ಡಜ್ರನೆ ತೇಗಿ ಮಗು
ೞ್ದಗಲಂ ಬೆಱಗಾಗಿ ನೋಡಿ ವರ್ಣಿಸುತಿರ್ದರ್ ೪೬೫

ವ॥ ಆಗಳೊರ್ವಂ ಕಟಿಲು ಕೊಳಲಂಜಿ ನಿಲೆ

ಬೇರುಗಳ ಸುಧಾರಸಗಳಿಂದ ಕೂಡಿರಲು, ವಾಸನೆಯಿಂದ ಮೆರೆಯುವ ಅನೇಕ ತೆರವಾದ ಉಪ್ಪಿನಕಾಯಿಗಳನ್ನು, ಪುನಃ ಪುನಃ ಬಡಿಸಿರಿ ಎನ್ನುತ್ತಿರಲು, ಕಲಾಪ್ರವೀಣೆಯರು ಅಕ್ಕಪಕ್ಕಗಳಲ್ಲಿ ಬಡಿಸಿದರು. ೪೬೩. ಮಿರುಮಿರುಗುವ ಮೆಣಸಿನಕರೆ (ಕರಿಮೆಣಸು ?), ಹುಳಿಯಾದ ಶುಂಠಿ, ಬಿದಿರ ಕಳಲೆ, ಏಲಕ್ಕಿಯಕಾಯಿ, ಮೊಳಗಿನಕಾಯಿ, ನೆಲ್ಲಿಯಕಾಯಿ, ಕಳವೆಯಕಾಯಿಗಳು ಬೇರೆ ಬೇರೆ ರುಚಿಗಳನ್ನು ಪಡೆಯದೆ ಇರುತ್ತವೆಯೇ ?. ವ॥ ಆಗ ಒಬ್ಬಳು, ೪೬೪. ಶುಂಠಿಯ ರುಚಿಯನ್ನು ಕಾಡಿದ್ದೇ ಆದರೆ ತಿಳಿದವನೆ ಎಂದು ಒಬ್ಬನನ್ನು ಧೂರ್ತನು ಹಂಗಿಸಿ, ನಿನಗೆ ಗೊತ್ತಿಲ್ಲ. ಸವಿತೋರುವುದನ್ನು ನಾನು ಬಲ್ಲೆ, ನನ್ನ ರೀತಿಯನ್ನು ನೋಡು ಎಂದನು. (ಈ ಪದ್ಯದಲ್ಲಿ 'ಅಲ್ಲ' ಎಂಬ ಪದದಲ್ಲಿನ ಸ್ವಾರಸ್ಯವನ್ನು ಗಮನಿಸತಕ್ಕುದು. ಇಲ್ಲಿ ಯಮಕಾಲಂಕಾರದ ಚಾತುರ್ಯವನ್ನು ಕಾಣಬಹುದು.) ೪೬೫. ಘಮಘಮಿಸುವ ಹುಳಿಮಜ್ಜಿಗೆಯನ್ನು ಸೊಗಸದಿದ್ದರೂ (?) ಹೀರಿ ಸುರಿದು ಚಪ್ಪರಿಸಿದರು. ಕೆಲವರು ಹೆಚ್ಚಾಗಿ ಡರ್ರೆಂದು ತೇಗಿ, ಪುನಃ ಆಶ್ಚರ್ಯದಿಂದ ತಟ್ಟೆಯನ್ನು ನೋಡಿ ವರ್ಣಿಸುತ್ತಿದ್ದರು. ವ॥ ಆಗ ಒಬ್ಬನು ಮಜ್ಜಿಗೆಯನ್ನು

ಕಳಲಂಜದಿರೆಂದೊಡೆ ಮುಂ
ಕಳವೆಂತಂದಱಿಯೆನೆಂದೊಡಿಂದೀರುಳಿ ಹೊಂ
ಗಳಸಂಗಳನೊಯ್ವುದೆನಲ್
ನಳಿನಾಕ್ಷಿಗೆ ಮುಗಿದನಿರ್ಕರಂಗಳನೊರ್ವಂ ೪೬೬

ವ॥ ಬೞಿಯಂ

ಶಾಕಂ ಲೇಸಾದುವಿಂಪಂ ತಳೆದವಖಿಳ[....]ಚ್ಛೋದನಂ ಭೂ
ಲೋಕಕ್ಕಾ[ಶ್ಚ]ರ್ಯವಾಗಲ್ ಮಘಮಘಿಸಿದ ತುಪ್ಪಂ ನೆಗೞ್ದೀ ಪದಾರ್ಥಂ
ಸಾಕೆಂಬಂತಿರ್ದುದಿಲ್ಲೆಂದಿತರ ಬುಧಜನಂ ಪ್ರೀತಿಯಿಂ [ನೋಡುತಂ] ತ
ತ್ಪಾಕಪ್ರಖ್ಯಾತಿಯಂ ಬಣ್ಣಿಸಿದರುಚಿತವಪ್ಪುಕ್ತಿಯಿಂ ಭುಕ್ತಿವಂತರ್ ೪೬೭

ಕರಣಂ ತಣ್ಣಿದುವಾಗ ಮೆಯ್ ದಣಿಯೆ ಸೌಖ್ಯಂ ಪೆರ್ಚೆ ಪಂಚೇಂದ್ರಿಯಂ
ಪರಿಣಾಮಂಬಡೆ ಗಿಂಡಿಯುಲ್ಲುದಕವಂ ಕಯ್ಯೆತ್ತಿ ಕಯ್ಯೆತ್ತಿ ಬೇ
ಗ್ಗರೆಯಲ್ ಕಣ್ತುನಿದಿಂಟೆ ತೇಗಿ ನಿಮಿಷಂ ಸಂತೈಸಿಕೊಂಡಿರ್ದು ಬಿ
ತ್ತರದಿಂ ಕಯ್ದೊಳೆದೇಂ ಸುಖಂಬಡೆದರೋ ಕಯ್ಗಟ್ಟಿಕೊಂಡೆಲ್ಲರುಂ ೪೬೮

ವಾರಾಂಗನೆಯರ್ ಮಣಿಮಯ
ದಾರತಿಯುಂ ಬೇವಿನುಪ್ಪಿನಾರತಿಯುಂ ಧಾ

ತೆಗೆದುಕೊಳ್ಳಲು ಹೆದರಿ ನಿಲ್ಲಲು, ೪೬೬. ಕದಿಯಲಂಜಬೇಡ ಎನ್ನಲು ಈ ಮೊದಲು ಕದಿಯುವುದೇನೆಂದರಿಯೆನು ಎನ್ನಲು, ಈ ದಿನ ಈರುಳಿ (?) ಹೊಂಗಳಸಗಳನ್ನು ಒಯ್ಯುವುದು ಎನ್ನಲು, ಒಬ್ಬನು ಕಮಲಾಕ್ಷಿಗೆ ಎರಡು ಕೈಗಳನ್ನೂ ಜೋಡಿಸಿದನು. ವ॥ ಅನಂತರ, ೪೬೭. ತರಕಾರಿಗಳು ಚೆನ್ನಾಗಿದ್ದುವು, ಸಂತೋಷದಾಯಕವಾಗಿದ್ದುವು ....ಭೂಮಂಡಲಕ್ಕೇ ಆಶ್ಚರ್ಯವಾಗಲು, ಘಮಘಮಿಸಿದ ತುಪ್ಪದಿಂದ ಅಣಿಮಾಡಿದ ಈ ಪದಾರ್ಥಗಳು ಸಾಕು ಎನ್ನುವಷ್ಟು ಇರಲಿಲ್ಲ (ಎಷ್ಟುತಿಂದರೂ ತೃಪ್ತಿಯಾಗದಿರುವುದು) ಎಂಬುದಾಗಿ ತಿನ್ನಬಯಸಿದ ಇತರ ವಿದ್ವಾಂಸರು ಆದರಿಂದ ನೋಡುತ್ತಲೇ ಆ ಅಡಿಗೆಯ ಕೀರ್ತಿಯನ್ನು ತಕ್ಕ ಮಾತುಗಳಿಂದ ವರ್ಣಿಸಿದರು. ೪೬೮. ಇಂದ್ರಿಯ ತಂಪಾಗಲು, ಮೈತೃಪ್ತಿ ಪಡೆಯಲು, ಸುಖವು ಅಧಿಕವಾಗಲು, ಪಂಚೇಂದ್ರಿಯಗಳು ಸಂತುಷ್ಟವಾಗಲು, ಗಿಂಡಿಯಲ್ಲಿ ನೀರನ್ನು ಕೈಯೆತ್ತಿ ಕೈಯೆತ್ತಿ ಹೊಯ್ಯಲು (?) ಕಣ್ಮುಚ್ಚಿ (?) ಕುಡಿದು, ತೇಗಿ, ನಿಮಿಷಮಾತ್ರ ಸುಧಾರಿಸಿಕೊಂಡಿದ್ದು ಪೂರ್ಣವಾಗಿ ಕೈಯನ್ನು ತೊಳೆದುಕೊಂಡು, ಎಲ್ಲರೂ ಕೈಕಟ್ಟಿಕೊಂಡು ಅದೆಷ್ಟು ಸುಖವನ್ನು ಅನುಭವಿಸಿದರೋ ! ೪೬೯. ವೇಶ್ಯೆಯರು ಭೂಪಾಲನಾದ ನಿಷಧಮಹಾರಾಜನಿಗೆ

ಶ್ರೀರವಣ ನಿಷಧಭೂಪತಿ
ಗೋರಣದಿಂದೆತ್ತಿ ನಿವಳಿಸಿದರನುನಯದಿಂ ೪೭೯

ಕಪ್ಪುರವಳಕಿನ ಬೆರಕೆಯೊ
ಳೊಪ್ಪುವ ವೀಳೆಯವನಿತ್ತು ನಾಲ್ಕುದಿನಂ ಬೆ
ಲ್ವಪ್ಪುಚಿತವನೀ ಪರಿಯಿಂ
ದೊಪ್ಪಿಸಿದಂ ನಿಬ್ಬಣಕ್ಕೆ ಭೀಮನೃಪಾಲಂ ೪೮೦

ವ॥ ಅಲ್ಲಿಂ ಬಟಿಯಂ

ಭರದಿಂ ಕಮ್ಮೆಣ್ಣೆಯ ಕೊ
ಪ್ಪರಿಕೆಗಳಂ ಕುಂಕುಮಾಂಬುವಿಂ ತೀವಿದ ಕೊ
ಪ್ಪರಿಕೆಗಳಂ ಗಂಧದ ಕೊ
ಪ್ಪರಿಕೆಗಳಂ ಪಂಕ್ತಿಗೊಳಿಸಿದರ್ ಕೇರಿಗಳೊಳ್ ೪೮೧

ಕೇಸರಿಪೀಠದೊಳ್ ನಿಜಮಹೋತ್ಸವದಿಂ ದಮಯಂತಿಸಂಯುತಂ
ವಾಸವಮೂರ್ತಿ ವೀರನಳಭೂಪತಿ ವೈಮೆಯೊಳಿರ್ದು ಪುಷ್ಪಸಂ
ವಾಸಿತ ಗಂಧದೋಕುಳಿಯನಾಡುವ ಲೀಲೆಯನೀಕ್ಷಿಸಲ್ಕೆ ನಾ
ನಾ ಸತಿಯರ್ಕಳಂ ಬರಿಸಿಯಂಬುವಿನೋದವನಂದೊಡರ್ಚಿದಂ ೪೮೨

ವ॥ ಆಗಳ್

ಹಳದಿಯನುಟ್ಟು ವೇಣಿಯನಳಂಕೆಗೆ ಸಿಕ್ಕಿ ಕುಚದ್ವಯಕ್ಕೆ ಕಂ
ಚುಳಿಕೆಯನಿಕ್ಕಿ ಮಲ್ಲಿಗೆಯ ಮೊಲ್ಲೆಯ ಜಾಜಿಯ [ಹೊನ್ನೆ]ಯದ್ಪಣಂ

ಮಣಿಖಚಿತವಾದ ಆರತಿಯನ್ನೂ, ಬೇವಿನ, ಉಪ್ಪಿನ ಆರತಿಯನ್ನೂ ಒಪ್ಪವಾಗಿ ಎತ್ತಿ ಪ್ರೀತಿಯಿಂದ ನಿವಾಳಿಸಿದರು. ೪೮೦. ಕರ್ಪೂರದ ಹರಳನ್ನು ಬೆರಸಿರುವ ವೀಳ್ಯವನ್ನಿತ್ತು ನಾಲ್ಕುದಿನಗಳವರೆಗೆ ಸೊಗಸನ್ನಿಸುವ ಉಚಿತವಾದ ರೀತಿಯಲ್ಲಿ ಭೀಮಮಹಾರಾಜನು ನಿಬ್ಬಣದವರನ್ನು ಸತ್ಕರಿಸಿದನು. ವ॥ ಆ ತರುವಾಯ, ೪೮೧. ಸಡಗರದಿಂದ, ಪರಿಮಳಯುಕ್ತವಾದ ತೈಲದ ಕೊಪ್ಪರಿಗೆಗಳನ್ನೂ, ಓಕುಳಿಗಳನ್ನು ತುಂಬಿದ ಕೊಪ್ಪರಿಗೆಗಳನ್ನೂ, ಗಂಧದ ಕೊಪ್ಪರಿಗೆಗಳನ್ನೂ ಬೀದಿಗಳಲ್ಲಿ ಸಾಲುಸಾಲಾಗಿಟ್ಟರು. ೪೮೨. ಸಿಂಹಾಸನದಲ್ಲಿ ನಿಜವೈಭವದಿಂದ ದಮಯಂತೀಸಮೇತನಾದ ಇಂದ್ರಸದೃಶವಾದ ಆಕೃತಿಯುಳ್ಳ ವೀರ ನಳಮಹಾರಾಜನು ಮಹಿಮೆಯಿಂದಿದ್ದು, ಹೂವಿನಿಂದ ಸುವಾಸನಾಯುಕ್ತವಾದ ಗಂಧದ ಓಕುಳಿಯನ್ನು ಆಡುವ ಲೀಲೆಯನ್ನು ನೋಡಲು, ನಾನಾ ಸ್ತ್ರೀಯರನ್ನು ಕರೆಸಿಕೊಂಡು, ಅಂದು ನೀರಾಟದ ವಿನೋದದಲ್ಲಿ ತೊಡಗಿದನು. ವ॥ ಆಗ ೪೮೩. ಹಳದಿಯ ಬಟ್ಟೆಯನ್ನುಟ್ಟು, ಕೂದಲನ್ನು ಮುಡಿಗಟ್ಟಿ, ಎರಡು ಮೊಲೆಗಳಿಗೂ ಕುಪ್ಪುಸ

ಗಳನೆಡಗಯ್ಯೊಳಾಂತು ಬಲಗಯ್ಯೊಳಮರ್ಚಿದ ಸೆಂಡದೊಪ್ಪಲೋ
ಕುಳಿಗನುವಾದರಂಗನೆಯರಂಗಜಭಿತ್ತಿಯ ಚಿತ್ರವೆಂಬಿನಂ ೪೭೩

ನಿಗಳದ ಕೀಲನೊತ್ತಿ ಮಣಿಹಾಳವನೊಂದು ಪೆಗಲ್ಗೆ ನೂಂಕಿಯುಂ
ದುಗೆಗಳನೇಜಲೌಂಕಿ ಕಟಿಸೂತ್ರವನೊಳ್ಕುಡು ಬಳ್ಕದಂದದಿಂ
ಬಿಗಿದು ಕುರುಳ್ಗೆ ಮುತ್ತುಗಳ ಜಾಳಿಯುಮಂ ಬಲಿದೊಪ್ಪುವಂಗದೊಳ್
ಮೃಗಮದದಣ್ಪುವೆತ್ತರೆಬರೋಕುಳಿಗಾಯತವಾದರಬ್ಬೆಯಿಂ ೪೭೪

ಶ್ರೀಸಾಮ್ಯಸ್ತ್ರೀಜನಂ ಜೇರ್ಕೊಟವಿಯುನಿಭಶೃಂಗಂಗಳಂ ತಾಳ್ದಿ ಪೆಂಪಿಂ
ದೇಸೀ ಹಿಂದೋಳದಿಂ ಮಂಗಳಲಲಿತೆಗಳಿಂ ಮಾರ್ಗ ಹಿಂದೋಳದಿಂದಂ
ವಾಸಂತೀರಾಗದಿಂ ರಂಜಿಪ ಧವಳಮನುತ್ಸಾಹದಿಂ ಪಾಡುತಂಘ್ರಿ
ನ್ಯಾಸಂ ಚೆಲ್ವಾಗಲೊಲ್ದೋಕುಳಿಯನೆಸಗಿದತ್ತೋಳಿಯಿಂ ಮೇಳವಾಗಲ್ ೪೭೫

ಪೂವಿನ ಸೆಂಡನಿಟ್ಟು ಪೆಜಪಿಂಗಿರೆ ತಕ್ಕಿಸಿ ತಂದು ಚಂದನಂ
ತೀವಿದ ಪೊನ್ನ ಕೊಪ್ಪರಿಗೆಯೊಳ್ ಪಿಡಿದದ್ದುವ ವೊಗ್ಗೆಯದ್ದಲುಂ
..................................................
.................................................. ೪೭೬

ವನ್ನು ತೊಟ್ಟು, ಮಲ್ಲಿಗೆ, ಮೊಲ್ಲೆ, ಜಾಜಿ ಮತ್ತು ಹೊನ್ನೆಯ ಗುರಾಣಿಗಳನ್ನು ಎಡಗೈಯಲ್ಲಿ ಹಿಡಿದು, ಬಲಗೈಯಲ್ಲಿದ್ದ ಚೆಂಡು ಒಪ್ಪಿರಲು ಸ್ತ್ರೀಯರು ಮನ್ಮಥನ ಗೋಡೆಯ ಮೇಲಿನ ಚಿತ್ರವೋ ಎಂಬಂತೆ ಓಕುಳಿಯಾಟವಾಡಲು ಸಿದ್ಧರಾದರು. ೪೭೪. ಕಾಲಸರಪಳಿಯ ಕೀಲನ್ನು ಬಲವಾಗಿ ಒತ್ತಿ, ಮಣಿಖಚಿತವಾದ ಹಾರವನ್ನು ಒಂದು ಹೆಗಲ ಮೇಲೆ ನೂಕಿ, ಕಡಗಗಳನ್ನು ಮೇಲುಗಡೆಗೆ ಅದುಮಿ, ಸೊಂಟವು ಅಲ್ಲಾಡದಂತೆ ಡಾಬನ್ನು ಬಲವಾಗಿ ಬಿಗಿದುಕೊಂಡು, ಕೂದಲುಗಳಿಗೆ ಮುತ್ತುಗಳ ಗೊಂಡೆಯವನ್ನು ಬಿಗಿದು, ಮಾಟವಾದ ಶರೀರಕ್ಕೆ ಕಸ್ತೂರಿಯ ಅಂಟನ್ನು ಲೇಪಿಸಿಕೊಂಡು ಕೆಲವರು ಪ್ರೀತಿಯಿಂದ ಓಕುಳಿಯಾಟಕ್ಕೆ ಅನುವಾದರು. ೪೭೫. ಲಕ್ಷ್ಮೀಸಮಾನರಾದ ಸ್ತ್ರೀಯರು ಜೇರ್ಕೊಳವಿಯನ್ನೂ, ಆನೆಯ ಕೊಂಬುಗಳನ್ನೂ ಹಿಡಿದುಕೊಂಡು ಹೆಮ್ಮೆಯಿಂದ ದೇಸೀ ಹಿಂದೋಳದಿಂದಲೂ, ಮಂಗಳ ಲಲಿತೆಗಳಿಂದಲೂ, ಮಾರ್ಗ ಹಿಂದೋಳದಿಂದಲೂ, ವಾಸಂತೀರಾಗದಿಂದಲೂ ಸೊಗಯಿಸುವ ಧವಳದ ಹಾಡುಗಳನ್ನು ಹಿಗ್ಗಿನಿಂದ ಹಾಡುತ್ತ, ಪಾದವಿನ್ಯಾಸವು ಸುಂದರವಾಗಲು ಮೆಚ್ಚಿ ಸಾಮೂಹಿಕವಾಗಿ ಕೂಡಲು ಓಕುಳಿಯ ಆಟವನ್ನು ಆಡಿದರು. ೪೭೬. ಹೂವಿನಚೆಂಡನ್ನು ಬಿಸುಟು ಹಿಂದೆ ಇರಲು, ಬಾಚಿಕೊಂಡು ತಂದು ಸುಗಂಧದಿಂದ ತುಂಬಿದ ಬಂಗಾರದ ಕೊಪ್ಪರಿಗೆಯಲ್ಲಿ ಹಿಡಿದು ಅದ್ದುವ....

[ಬಡನಡು ಬಳ್ಕೆ] ಕೆದಱಲೊಳ್ನಿಱಿ ಸಂಭ್ರಮದಾಟದೇಟಗ್ಗಿಯಿಂ
ಸಡಿಲಲವುರ್ದ ಕಂಚುಳಿಕೆ ಪೆರ್ವೊಲೆಯಾಕೆಗೆ ಡಿಳ್ಳವಾಗಲೊ
ಳ್ದೊಡವುಗಳಕ್ಕಱಿಂದುಲಿಯಲಲ್ಲಿ ಕೆಲಂಬರತೀವ ಧೂರ್ತೆಯರ್
ಪಿಡಿಪಿಡಿದೆಲ್ಲರಂ ಕೆಡಪಿಯೋಕುಳಿಯಂ ಸುರಿದರ್ ನಿರಂತರಂ ೪೭೭

ಕುಂಕುಮಸಾರದಿಂ ಮಳಯಜದ್ರವದಿಂ ಘನಸಾರ ಚೂರ್ಣದಿಂ
ಪಂಕಿಲವಾದ ತಮ್ಮ ತನುಗಳ್ ಪೊಸಲೆಪ್ಪದಿನೀಗಳೀಗಳಿ
ಟ್ಟಂಕೆಯಿದೆಂಬಿನಂ ಮದನಸೂತ್ರದ ಬೊಂಬೆಗಳಂತಿರೊಪ್ಪಿದರ್
ಕಂಕಣಝುಂಕೃತಂ ಮೆಱೆಯಲೋಕುಳಿಯಾಡುವ ಗಾಡಿಕಾರ್ತಿಯರ್ ೪೭೮

ಮುತ್ತಿನ ಬೊಂಬೆಯಂತೆ ಹರಿನೀಲದ ಪುತ್ಥಳಿಯಂತೆ ಹೊನ್ನವಿಂ
ಚಿತ್ರದ ಮೂರ್ತಿಯಂತೆ ದಮಯಂತಿ ಲಸದ್ಘನಸಾರಚೂರ್ಣದಿಂ
ಕತ್ತುರಿ[ಬೊಟ್ಟನಿಂ] ಘುಸೃಣ ಕೇಸರರಾಗದಿನಂಗಶೋಭೆವೆ
ತ್ತುತ್ತಮಕಾಂತೆಯೋಕುಳಿಯನಾಡಿದಳಾಡೆ ಕುರುಳ್ಗೆ ತುಂಬಿಗಳ್ ೪೭೯

ರಳಬೆ (?) ಹಿಂಗುವ ಬೆನ್ನನಟ್ಟುವ ನೀರೊಳದ್ದುವ ವೇಣಿಯಂ
ಸೆಳೆವ ಮೊಗ್ಗೆಗಳಂಬ ನೆಚ್ಚುವ ದೂರದಿಂದ ನಗುತ್ತ ಜೀ

೪೭೭. ಬಡನಡುವಿನ ಅಲುಗಾಟದಿಂದ ಒಳ್ನಿರಿಯು ಕೆದರಲು, ಸಡಗರವಾದ ಆಟದ ಆಧಿಕ್ಯದಿಂದ ಮೈಗೆ ತೊಟ್ಟ ಕುಪ್ಪುಸ ಸಡಿಲವಾಗಲು, ಒಬ್ಬಾಕೆಗೆ ದೊಡ್ಡದಾದ ಮೊಲೆಗಳು ಭಾರವಾಗಲು, ಆಭರಣಗಳು ಪ್ರೀತಿಯಿಂದ ಅಲ್ಲಿ ಶಬ್ದಗೈಯಲು, ಬಹಳ ಗಟ್ಟಿಗರಾದ ಕೆಲವರು ಎಲ್ಲರನ್ನೂ ಹಿಡಿ ಹಿಡಿದು ಕೆಡವಿ, ಸರ್ವದಾ ಓಕುಳಿಯನ್ನು ಸುರಿದರು. ೪೭೮. ಕುಂಕುಮದ ತಿರುಳಿನಿಂದಲೂ, ಶ್ರೀಗಂಧದ ನೀರಿನಿಂದಲೂ, ಕರ್ಪೂರದ ಹಳುಕಿನಿಂದಲೂ ಕೂಡಿ, ತೊಯ್ದಿರುವ ತಮ್ಮ ಶರೀರಗಳು ಹೊಸತಾದ ಲೆಪ್ಪದಿಂದ ಈಗಲೀಗ ಗುರುತಾದುದೊ ಎಂಬಂತೆ, ಮನ್ಮಥನ ಸೂತ್ರಗೊಂಬೆಗಳಂತಿರಲು, ಬಳೆಗಳ ಝೇಂಕಾರನಾದವು ಮೆರೆಯಲು, ಓಕುಳಿಯಾಟವಾಡುವ ಸುಂದರಿಯರು ಒಪ್ಪಿದರು. ೪೭೯. ಮುತ್ತಿನ ಬೊಂಬೆಯಂತೆ, ಇಂದ್ರನೀಲ ರತ್ನದ ಗೊಂಬೆಯಂತೆ, ಬಂಗಾರದ ಮಿಂಚಿನಿಂದ ಕಟೆದ ಮೂರ್ತಿಯಂತೆ (ಇದ್ದ) ಉತ್ತಮ ನಾರಿಯಾದ ದಮಯಂತಿ ಪ್ರಕಾಶಮಾನವಾದ ಕರ್ಪೂರದ ಹಳುಕಿನಿಂದಲೂ, ಕಸ್ತೂರಿಯ ಗುರುತಿನಿಂದಲೂ, ಕುಂಕುಮದ ಕೇಸರಿಯ ಕೆಂಬಣ್ಣದಿಂದಲೂ ಶೋಭಿಸುತ್ತ (ಆಕೆಯ) ಕೂದಲುಗಳಿಗೆ ತುಂಬಿಗಳು ಮುತ್ತುತ್ತಿರಲು ಓಕುಳಿಯನ್ನು ಆಡಿದಳು. ೪೮೦. ರಳಬೆಹಿಂಗುವ (?), ಬೆನ್ನಟ್ಟುವ, ನೀರಿನಲ್ಲಿ ಅದ್ದುವ, ಜಡೆಯನ್ನು ಸೆಳೆವ, ಮೊಗ್ಗಿನ ಬಾಣಗಳನ್ನು ಗುರಿಯಿಟ್ಟು ಬಿಡುವ, ದೂರದಿಂದಲೇ

ಕೋಟವಿಯೆತ್ತುವ ಕಯ್ಯನೊಡ್ಡುವ ಬಿನ್ನಣಂ ತನಿವೆರ್ಚೆಯೋ
ಕುಳಿಯನಾಡಿದುದಂಗನಾತತಿ ನೈಷಧಂ ಪೊಗಟುತ್ತಿರಲ್ ೪೮೦

ಯುವತಿಯರೆಲ್ಲರೋಕುಳಿಯನಾಡಿ ಬಟಲ್ದು ನಿಲಲ್ ತದೀಯ ಭಾ
ವವನಱಿದಕ್ಕಱಿಂ ಕರೆದು ನೂತ್ನ ದುಕೂಲವನಿತ್ತು ಚಿತ್ತದು
ತ್ಸವವೆಸೆಯಲ್ ವಧೂವರರ ಮಜ್ಜನ [ಭೋಜನ]ಕಾಲವೆಂದು ಬಾಂ
ಧವರೊಡಗೂಡಿ ಭೀಮನೃಪನೊಲ್ದೊಳಪೊಕ್ಕನತಿಪ್ರಮೋದದಿಂ ೪೮೧

ವ॥ ಅಂತು ಮಜ್ಜನ ಭೋಜನಾನಂತರಂ

ಭೀಮನೃಪಾಲಕಂ ನೆರೆದ ನಿಬ್ಬಣಿಗರ್ಗೆ ವಿಚಿತ್ರವಸ್ತ್ರಮು
ಕ್ತಾಮಯ ಭೂಷಣಂಗಳನನೇಕವನಿತ್ತು ಬಟಿಕ್ಕ ಕೂರ್ತು ನಾ
ನಾ ಮಣಿಭೂಷಣಾದ್ಯಖಿಳವಸ್ತುಗಳಂ ನಳಭೂಜಂಗತಿ
ಪ್ರೇಮದೊಳಿತ್ತು ಕಯ್ಮುಗಿದು ಮನ್ನಿಸಿದಂ ಸತತಂ ಪ್ರಿಯೋಕ್ತಿಯಿಂ ೪೮೨

ತೊಳಗುವ ಭೂಷಣಪ್ರಕರವಂ ಮದಹಸ್ತಿಗಳಂ ತುರಂಗಸಂ
ಕುಳವನನೇಕ ದಾಸಿಯರನುತ್ತಮವಾರವಿಳಾಸಿನೀಜನಂ
ಗಳನನುರಾಗದಿಂ ಸಲೆ ವಿದರ್ಭನೃಪಂ ದಮಯಂತಿಗಕ್ಕಱಿಂ
ಬಟಿವಟಿಯಿತ್ತು ಕಯ್ದಣಿಯನೆಂತುಟೊ ಕೂರ್ವೆ ನಿಜಾತ್ಮಪುತ್ರಿಯೊಳ್ ೪೮೩

ನಗುನಗುತ್ತ ಜೇಕೋಳವಿಯನ್ನು ಮೇಲೆತ್ತುವ, ಕೈಯನ್ನು ಅಡ್ಡವಾಗಿಡುವ ಕೌಶಲವು ಹೆಚ್ಚಾಗಲು, ನಳಮಹಾರಾಜನು ಹೊಗಳುತ್ತಿರಲು ಸ್ತ್ರೀಯರ ಸಮೂಹವು ಓಕುಳಿಯನ್ನು ಆಡಿತು. ೪೮೧. ತರುಣಿಯರೆಲ್ಲ ಓಕುಳಿಯನ್ನು ಆಡಿ ಆಯಾಸಗೊಂಡು ನಿಲ್ಲಲು, ಭೀಮಮಹಾರಾಜನು ಅವರ ಇಂಗಿತವನ್ನು ಅರಿತು, ಪ್ರೀತಿಯಿಂದ ಕರೆಕರೆದು, ಹೊಸ ಬಟ್ಟೆಯನ್ನು ಕೊಟ್ಟು, ಮನಸ್ಸು ಸಂತೋಷಗೊಂಡಿರಲು, ವಧೂವರರ ಸ್ನಾನ ಮತ್ತು ಊಟಗಳ ಹೊತ್ತಾಯಿತೆಂದು (ತಿಳಿದು) ಬಂಧುಸಮೇತನಾಗಿ ಪ್ರೀತಿಯಿಂದಲೂ ಅತ್ಯಂತ ಸಂತೋಷದಿಂದಲೂ ಒಳಹೊಕ್ಕನು. ವ॥ ಹಾಗೆ ಸಾನ್ನ ಊಟಗಳಾದ ಬಳಿಕ ೪೮೨. ಭೀಮಮಹಾರಾಜನು (ಅಲ್ಲಿ) ನೆರೆದಿದ್ದ ನಿಬ್ಬಣಿಗರಿಗೆ ವಿಶಿಷ್ಟವಾದ ವಸ್ತ್ರ ಮತ್ತು ಮುತ್ತಿನಿಂದ ಕೂಡಿದ ಅನೇಕ ಆಭರಣಗಳನ್ನು ಕೊಟ್ಟು, ತರುವಾಯ ಪ್ರೀತಿಯಿಂದ ನಳಮಹಾರಾಜನಿಗೆ ವಿಧವಿಧವಾದ ಮಣಿಖಚಿತವಾದ ಒಡವೆಗಳೇ ಮೊದಲಾದ ಸಮಸ್ತ ಪದಾರ್ಥಗಳನ್ನೂ ಪ್ರೇಮಪೂರ್ವಕವಾಗಿ ನೀಡಿ, ಕೈಮುಗಿದು ಸರ್ವದಾ ಪ್ರಿಯವಾದ ಮಾತುಗಳಿಂದ ಮನ್ನಿಸಿದನು. ೪೮೩. ಥಳಥಳಿಸುವ ಒಡವೆಗಳ ರಾಶಿಯನ್ನೂ, ಮದಿಸಿದ ಆನೆಗಳನ್ನೂ, ಕುದುರೆಗಳ ಸಮೂಹವನ್ನೂ, ಅನೇಕ ದಾಸಿಯರನ್ನೂ, ಶ್ರೇಷ್ಠರಾದ ವಾರಸ್ತ್ರೀಯರನ್ನೂ ವಿದರ್ಭರಾಜನು ಪ್ರೀತಿಯಿಂದಲೂ, ಅಕ್ಕರೆಯಿಂದಲೂ ದಮಯಂತಿಗೆ ಬಳುವಳಿಯಾಗಿತ್ತು ಕೈಯೇ ದಣಿಯದಂತಿರುವನು. (ತಂದೆಗೆ) ತನ್ನ

ವ॥ ಅನಂತರಂ

ಇಂದಗಲ್ವಂದವಾದುದಿನಿತಂ ದಯೆಗೆಯ್ ನಳಚಕ್ರವರ್ತಿ ಮ
ನ್ನಂದನೆ ಬಾಲೆಯುಮ್ಮಳಿಸದಂತು ಸಧರ್ಮದಿನೊಲ್ದು ರಕ್ಷಿಸೆಂ
ದೋದಿರೆ ಕಣ್ಣನೀರ್ ನೃಪನ ಕಯ್ಗೆ ತನೂಜೆಯನೊಪ್ಪುಗೊಟ್ಟು ತಾ
ಯ್ತಂದೆಯ ಹಂಬಲಂ ಮಱಪುದೆಂದನಟಲ್ದು ವಿದರ್ಭಭೂಭುಜಂ ೪೮೪

ಇಂತು ದಮಯಂತಿಯುಂ ಭೂ
ಕಾಂತನನಿಭ ತುರಗ ರಥ ಪದಾತಿಸಮೇತಂ
ಸಂತೋಷದಿಂದ ಕಳುಪಿದ
ನೆಂತುಟೊ ಸಂಸಾರಬಂಧನಂ ಮಾನವರೊಳ್ ೪೮೫

ಛಾಯಾಸಂಗದಿನಬ್ಜಮಿತ್ರನೊಲವಿಂದಂ ರೋಹಿಣೀಸಂಗದಿಂ
ಪೀಯೂಷದ್ಯುತಿ ಪೆಂಪುವೆತ್ತ ರತಿದೇವೀಸಂಗದಿಂ ಮನ್ಮಥಂ
ಶ್ರೇಯಸ್ಸಂತತಿಯಿಂ ವಿರಾಜಿಸುವವೊಲ್ ಭೀಮಾತ್ಮಜಾಸಂಗದಿಂ
ಕಾಯಪ್ರೀತಿಯನಪ್ಪುಕೆಯ್ದು ನಡೆಗೊಂಡಂ ವೀರಸೇನಾತ್ಮಜಂ ೪೮೬

ವ॥ ಅಂತು ಪ್ರತಿಪ್ರಯಾಣದಿಂ ವಿಮಳಪಟ್ಟಣ ಸಮೀಪಕ್ಕೆ ಬರೆ

ಪುರದವರೆಲ್ಲರುಂ ಸಕಳ ಮಂಗಳವಾದ್ಯವಿಳಾಸದಿಂದಿದಿ
ರ್ವರೆ ಸುಮುಹೂರ್ತದೊಳ್ ವಿಮಳಪಟ್ಟಣಮಂ ನಲವಿಂ ಪ್ರವೇಶಮಂ

ಮಗಳಾದವಳಲ್ಲಿ ಎಷ್ಟು ಪ್ರೇಮವೋ ! ವ॥ ಬಳಿಕ, ೪೮೪. "ನಳಚಕ್ರವರ್ತಿಯೆ ! ಇಂದು ಅಗಲುವ ದಿನವಾಯಿತು. ಇಷ್ಟನ್ನು ಮಾತ್ರ ಅನುಗ್ರಹಿಸು. ನನ್ನ ಮಗಳು ಚಿಕ್ಕವಳು. ದುಃಖವಾಗದ ಹಾಗೆ ಸ್ವಧರ್ಮದಿಂದ ಒಲಿದು ಕಾಪಾಡು" ಎಂದು ಕಣ್ಣೀರು ತುಂಬಿಕೊಂಡಿರಲು, ವಿದರ್ಭರಾಜನು ರಾಜನ ಕೈಗೆ ಮಗಳನ್ನು ಒಪ್ಪಿಸಿಕೊಟ್ಟು, (ಆಕೆಯನ್ನು ಕುರಿತು) "(ಎಲೈ ಮಗಳೆ ! ಇನ್ನು) ತಂದೆತಾಯಿಗಳ ಹಂಬಲವನ್ನು ಮರೆಯುವುದು" ಎಂದು ದುಃಖಪಟ್ಟನು. ೪೮೫. ಈ ರೀತಿ ದಮಯಂತಿಯನ್ನೂ, ನಳಮಹಾರಾಜನನ್ನೂ ಆನೆ, ಕುದುರೆ, ರಥ, ಕಾಲಾಳುಗಳೊಂದಿಗೆ ಸಂತೋಷದಿಂದ ಕಳುಹಿಸಿಕೊಟ್ಟನು. ಮಾನವರಲ್ಲಿ ಸಂಸಾರಬಂಧನವು ಎಂತಹುದೋ ! ೪೮೬. ಛಾಯಾಸಮೇತನಾಗಿ ಸೂರ್ಯನೂ, ಪ್ರೇಮದಿಂದ ರೋಹಿಣೀಸಮೇತನಾಗಿ ಚಂದ್ರನೂ, ಕೀರ್ತಿಯುತನಾದ ರತಿದೇವೀಸಮೇತನಾಗಿ ಮನ್ಮಥನೂ ಶುಭಪರಂಪರೆಯಿಂದ ಪ್ರಕಾಶಿಸುವಂತೆ, ಭೀಮರಾಜನ ಮಗಳಾದ ದಮಯಂತಿಯೊಂದಿಗೆ ಶರೀರಪ್ರೀತಿಯೊಂದಿಗೆ ಕೂಡಿ ವೀರಸೇನನ ಮಗನಾದ ನಳಮಹಾರಾಜನು ಹೊರಟನು. ವ॥ ಹಾಗೆ ಒಂದೊಂದು ಹೆಜ್ಜೆ ಪ್ರಯಾಣದಿಂದಲೂ ವಿಮಳಪಟ್ಟಣದ ಸಮೀಪಕ್ಕೆ ಬರಲು, ೪೮೭. ಊರಿನವರೆಲ್ಲರೂ ಮಂಗಳವಾದ್ಯವಿಲಾಸದಿಂದ ಎದುರುಗೊಳ್ಳಲು ಶುಭಮುಹೂರ್ತದಲ್ಲಿ ರಾಜನು ವಿಮಳ

ನರಪತಿ ಮಾಡಿ ಪೌರಜನವಿಕ್ಕುವ ಸೇಸೆಗಳಿಂದ ರಾಜಮಂ
ದಿರವನತಿಪ್ರಮೋದದೊದವಿಂ ಪುಗುತಂದನನೂನ ವೈಭವಂ ೪೮೭

ಪಲವುದಿನಂ ಮನಂ ಬಯಸಿ ಕಯ್ಪಿಡಿದಂಗನೆಯಂಗಸಂಗದಿಂ
ನಲವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್
ಕೆಲವು ದಿನಕ್ಕೆ ಕಾಂತೆ ನವಗರ್ಭಿಣಿಯಾಗಿ ಕುಮಾರರಿರ್ವರಂ
ಲಲಿತಶರೀರರಂ ಪಡೆದಳರ್ಕಸಮಪ್ರಭರಂ ವಿಳಾಸದಿಂ ೪೮೮

ಅನುಪಮ ಸಾರ್ವಭೌಮಪದದಿಂ ದಮಯಂತಿಯ ಸಂಗಸೌಖ್ಯದಿಂ
ತನುಭರ(ಭವ ?)ಲೀಲೆಯಿಂ ನಳನೃಪಂ ಸುಖದಿಂದಿರಲಿತ್ತಲತ್ತಲಿ
ರ್ದನಿಮಿಷಮುಖ್ಯನಂ ಶಿಖಿಯಂನಂತಕನಂ ಜಲಧೀಶನಂ ಜಲ
ಕ್ಕನೆ·ಕಲಿಯೊರ್ವ ಕಂಡು ಕರಮಂ ಮುಗಿದೇಂ ದುಗುಡಕ್ಕೆ ಕಾರಣಂ ೪೮೯

ವ॥ ಎಂದು ಕೇಳೆ

ದಮಯಂತೀಪ್ರಮದಾಸ್ವಯಂವರಮಹೋತ್ಸಾಹಕ್ಕೆ ಪೋಗಿರ್ದವ
ಕ್ರಮಮಾಯ್ತಾಕೆ ವಿಳಾಸದಿಂ ವರಿಸಿದಳ್ ಕೂರ್ಪಿಂ ನಳೋರ್ವೀಶನಂ
ನಮಗಿನ್ನಾಸೆಯದೇಕೆನುತ್ತಿನಿಬರುಂ ಪೋದಪ್ಪೆವೆಂದಿಂದ್ರವ
ಹ್ನಿ ಮನಃಖೇದಮನೊಲ್ದು ಕೇಳ್ದು ಕಲಿ ಕೋಪೋದ್ರೇಕಮಂ ತಾಳ್ದಿದಂ ೪೯೦

ಪಟ್ಟಣವನ್ನು ಹಿಗ್ಗಿನಿಂದ ಪ್ರವೇಶಿಸಿ, ಊರಿನ ಜನಗಳು ಚೆಲ್ಲುತ್ತಿದ್ದ ಮಂತ್ರಾಕ್ಷತೆಗಳಿಂದ ನಿಷ್ಕಳಂಕ ವೈಭವಯುತನಾಗಿ, ಅತ್ಯಂತ ಆನಂದವುಂಟಾಗಲು ಅರಮನೆಗೆ ಬಂದನು. ೪೮೮. ಹಲವಾರು ದಿನಗಳಿಂದ ಹಂಬಲಿಸಿ, ಕೈಹಿಡಿದ ಹೆಂಡತಿಯ ಶರೀರಸಂಪರ್ಕದಿಂದ ಸಂತತವಾಗಿ ಸಂತೋಷವನ್ನು ಪಡೆದು, ಸರ್ವದಾ ರಾಜ್ಯಸುಖವನ್ನು ಅನುಭವಿಸುತ್ತಿರಲು. ಕೆಲವು ದಿನಗಳಲ್ಲಿಯೇ ರಾಣಿಯು ಗರ್ಭ ಧರಿಸಿ, ಮನೋಹರವಾದ ಶರೀರವುಳ್ಳವರೂ, ಸೂರ್ಯಸಮಾನಪ್ರಕಾಶರೂ ಆದ ಇಬ್ಬರು ಕುಮಾರರನ್ನು ವಿಲಾಸದಿಂದ ಪಡೆದಳು. ೪೮೯. ಅಸದೃಶವಾದ ಚಕ್ರವರ್ತಿಯ ಪದವಿಯಿಂದಲೂ, ದಮಯಂತಿಯ ಸಂಪರ್ಕ ಸೌಖ್ಯದಿಂದಲೂ, ಶರೀರದ (ಮಕ್ಕಳ ?) ಲೀಲೆಯಿಂದಲೂ ನಳಮಹಾರಾಜನು ಇತ್ತ ಸುಖವಾಗಿರಲು, ಅತ್ತ ಕಲಿಪುರುಷನು ದೇವತೆಗಳೊಡೆಯನಾದ ದೇವೇಂದ್ರನನ್ನೂ, ಅಗ್ನಿಯನ್ನೂ, ಯಮನನ್ನೂ, ವರುಣನನ್ನೂ ಒಮ್ಮೆ ಕೂಡಲೆ ಕಂಡು, ಕೈಮುಗಿದು, ದುಃಖಕ್ಕೆ ಕಾರಣವೇನು ವ॥ ಎಂದು ಕೇಳಲು, ೪೯೦. ದಮಯಂತೀಪ್ರಮದೆಯ ಸ್ವಯಂವರ ಮಹಾವೈಭವಕ್ಕೆ ಹೋಗಿದ್ದೆವು, ಅಕ್ರಮವಾಯಿತು. ಆಕೆ ವಿಲಾಸದಿಂದಲೂ, ಪ್ರೇಮದಿಂದಲೂ ನಳಮಹಾರಾಜನನ್ನು ಕೈಹಿಡಿದಳು. ನಮಗೆ ಇನ್ನು ಆಸೆಯಾದರೂ ಏನಿದೆ ? ಎನ್ನುತ್ತ, ನಾವೆಲ್ಲರೂ ತೆರಳುವೆವೆಂದು (ನುಡಿದ) ಇಂದ್ರ, ಅಗ್ನಿಯರ ಚಿತ್ತ ಕ್ಲೇಶವನ್ನು ಒಲಿದು ಕೇಳಿ ಕಲಿಪುರುಷನು ಉಗ್ರವಾದ ಕೋಪವನ್ನು ತಾಳಿದನು.

ವರಿಸಿದ [ದ]ಮಯಂತಿ ಮನೋ
ವರನಾದ ನಳಂ ನಿತಾಂತಮೊರ್ವರನೊರ್ವರ್
ಬೆರಸದ ತೆಱನಂ ಮಾಟ್ಪೆಂ
ಸುರಪತಿ ಮತ್ಸತ್ತ್ವಮಂ ಪರೀಕ್ಷಿಪುದೀಗಳ್ ೪೯೧

ವ॥ ಎಂದು

ಭಯಮಂ ಸಾಹಸಮಂ ಮಹಾವ್ಯಸನಮಂ ದಾರಿದ್ರ್ಯಮಂ ಪಾಪಸಂ
ಚಯಮಂ ಕೇಡನಸತ್ಯಮಂ ಕಪಟಮಂ ಕೌಟಿಲ್ಯಮಂ ಕ್ಷುದ್ರಬಾ
ಧೆಯನನ್ಯಾಯಮನವ್ಯವಸ್ಥೆಯನ[.]ಕ್ಷೇಮೂಲಮಂ [ಮೂ]ರ್ಖವ್ಯ
ತ್ತಿಯನಾರ್ಪಿಂ ಕಲಿ ಕೂಡಿಕೊಂಡು ವಿಮಳಾಧಿಷ್ಠಾನಮಂ ಸಾರ್ದಿದಂ ೪೯೨

ನಿಂದೆಯನುಗ್ರಮಂ ಶಠೆಯನಾಸೆಯನಂಜಿಕೆಯಂ ಜಗಜ್ಜನಾ
ಕ್ರಂದಮನುಳ್ಳ ದುಶ್ಚರಿತಮಂ ಪರಪೀಡೆಯನಾಜಿಭಂಗಮಂ
ಮಂದಮನೀರ್ಷೆಯಂ ಸಕಳ ನಿರ್ದಯೆಯಂ ಕಲಿ ಕೂಡಿಕೊಂಡು ಕಾ
ಯ್ಪಿಂ ದಮಯಂತಿವಲ್ಲಭನ ಮಂದಿರಮಂ ಕಡುಕೆಯ್ದು ಸಾರ್ದಿದಂ ೪೯೩

ಕಾಮಕ್ರೋಧಾದಿವರ್ಗಂಗಳನಖಿಳ ವಿಕಾರಂಗಳಂ ಮಿತ್ರ ಬಂಧು
ಸ್ವಾಮಿದ್ರೋಹಂಗಳಂ ಕಂಟಕಸಮುದಯಮಂ ಭ್ರಾತೃಭೇದಂಗಳಂ ದು

೪೯೧. ಎಲೈ ಇಂದ್ರನೆ ! ಕೈಹಿಡಿದ ದಮಯಂತಿ, ಮನಃಪ್ರಿಯನಾದ ನಳರು ಒಬ್ಬರನ್ನೊಬ್ಬರು ಬಹುಮಟ್ಟಿಗೆ ಒಡಗೂಡದ ಹಾಗೆ ಮಾಡುವೆನು. ನನ್ನ ಸಾಮರ್ಥ್ಯವನ್ನು ಈಗ ಪರೀಕ್ಷಿಸತಕ್ಕದು. ವ॥ ಎಂದು, ೪೯೨. ಭೀತಿಯನ್ನೂ, ಸಾಮರ್ಥ್ಯವನ್ನೂ, ಮಹಾವ್ಯಸನವನ್ನೂ, ದಾರಿದ್ರ್ಯವನ್ನೂ, ಪಾಪಸಮೂಹವನ್ನೂ, ಕೇಡನ್ನೂ, ಅಸತ್ಯವನ್ನೂ, ಮೋಸವನ್ನೂ, ಕುತಂತ್ರವನ್ನೂ, ಕ್ಷುದ್ರಬಾಧೆಯನ್ನೂ ಅನ್ಯಾಯವನ್ನೂ, ಅವ್ಯವಸ್ಥೆಯನ್ನೂ....ಮೂರ್ಖವ್ಯಾಪಾರವನ್ನೂ ಶಕ್ತಿಯಿಂದ ಕಲಿಪುರುಷನು ಒಡಗೂಡಿ ಪವಿತ್ರವಾದ ರಾಜಧಾನಿಯ ಬಳಿಗೆ ಬಂದನು. ೪೯೩. ಅವಹೇಳನವನ್ನೂ, ಭಯಂಕರತೆಯನ್ನೂ, ಮೂರ್ಖತನವನ್ನೂ, ಆಸೆಯನ್ನೂ, ಭಯವನ್ನೂ, ಇಡೀ ಜಗತ್ತಿಗೇ ಹಾಹಾಕಾರವನ್ನುಂಟುಮಾಡುವ ದುಷ್ಟಚಾರಿತ್ರ್ಯವನ್ನೂ, ಪರಹಿಂಸೆಯನ್ನೂ, ಯುದ್ಧಾಪಜಯವನ್ನೂ, ಮಾಂದ್ಯವನ್ನೂ, ಅಸೂಯೆಯನ್ನೂ, ಸಮಸ್ತ ನಿಷ್ಕರುಣೆಯನ್ನೂ ಕಲಿಪುರುಷನು ಜೊತೆಗೂಡಿ ಕೋಪದಿಂದ ದಮಯಂತಿಯ ಪ್ರಿಯನಾದ ನಳನ ಮನೆಗೆ ಉತ್ಸಾಹದಿಂದ ಬಂದನು. ೪೯೪. ಕಾಮ, ಕ್ರೋಧ ಮೊದಲಾದ ತಂಡಗಳನ್ನೂ, ಸಮಸ್ತ ವಿಕೃತಿಗಳನ್ನೂ, ಸ್ನೇಹಿತ, ಬಂಧು ಮತ್ತು ಒಡೆಯನಿಗೆ ಕೆಡುಕನ್ನು ಬಗೆಯುವ ದ್ರೋಹಗಳನ್ನೂ, ಕ್ಲೇಶಸಮೂಹಗಳನ್ನೂ, ಭ್ರಾತೃವಂಚನೆಗಳನ್ನೂ, ಕೆಟ್ಟ

ರ್ಣಮಂ ತಾಳ್ದಿರ್ದವಂ ತನ್ನಯ ಪರಿಕರವಂ ನೋಂಕಿ ಕೋಡಾಡಿ ಕೋಪೋ
ದ್ದಾಮಂಬೆತ್ತೇಳ್ಗೆಯಿಂದಂ ಕಲಿ ನಳನೃಪನಂ ಪೊರ್ದಲುದ್ಯುಕ್ತನಾದಂ ೪೯೪

ಪ್ರಕಟ ಮಹಾಪಾತಕತತಿ
ಸಕಲಾವಯವಂಗಳಾಗಿ ರೌದ್ರಾಕೃತಿಯಿಂ
ಪ್ರಕುಪಿತಕಲಿ ಸುಕೃತಿಯೆನಿ
ಪ್ಪಕಳಂಕಚರಿತ್ರ ನಳನನಲೆಯಲ್ ಬಗೆದಂ ೪೯೫

ವ॥ ಅಂತು ಬಂದು

ಆಸನಯಾನಸಂಗ ಶಯನಾಸನ ಮಜ್ಜನ ದೇವತಾರ್ಚನಾ
ಭ್ಯಾಸನಿವಾಸವೆಂಬೆಡೆಗಳೊಳ್ ತೆಱಪಂ ನಡೆನೋಡಿ ನೋಡಿ ಮೆಯ್
ಬೇಸಱುವುತ್ತು ಕಕ್ಕರಿಕರಂಬಡಪಟ್ಟಿರಲೊಂದು ಸಂದು ಕ
ಟ್ಟಾಸೆಯನಿತ್ತುದೊಳ್ಗುಣವನಾರ್ ಪಡೆವರ್ ಕಲಿ ಸೀವುಗೆಯ್ತಿರಲ್ ೪೯೬

ಒಂದುದಿನಂ ನಳನರಪತಿ
ಹಿಂದಣ ಕಾಲ್ದೊಳೆಯದುದಕವಂ ಮುಕ್ಕುಳಿಸಲ್
ಛಂದದೆಡೆಯಾದುದೇದಾ
ಸಂದಿಯೊಳಾತನ ಶರೀರಮಂ ಕಲಿ ಸಾರ್ದಂ ೪೯೭

ಹೆಸರನ್ನು ಪಡೆದವುಗಳನ್ನೂ, ತನ್ನ ಸಾಧನಗಳನ್ನೂ ಮುಂಚೆ ಅಟ್ಟಿ, ಹೊಗಳುತ್ತ, ಕೋಪೋದ್ರಿಕ್ತನಾಗಿ ಪ್ರವರ್ಧಮಾನನಾಗಿ ಕಲಿಪುರುಷನು ನಳಮಹಾರಾಜನನ್ನು ಹಿಡಿಯಲು ತೊಡಗಿದನು. ೪೯೫. ಸುಪ್ರಸಿದ್ಧವಾದ ಮಹಾಪಾತಕ ಸಮೂಹವೇ ಸಕಲ ಅವಯವಗಳಾಗಲು ಭಯಂಕರಾಕಾರದಿಂದ ಕೋಪಗೊಂಡ ಕಲಿಪುರುಷನು ಸುಕೃತಿ ಯೆನ್ನಿಸುವ ನಿಷ್ಕಳಂಕ ಚರಿತ್ರನಾದ ನಳಮಹಾರಾಜನನ್ನು ಕಾಡಲು ಆಲೋಚಿಸಿದನು. ವ॥ ಹಾಗೆ ಬಂದು, ೪೯೬. ಪೀಠ, ವಾಹನ, ಜೊತೆ, ಶಯನಾಸನ, ಸ್ನಾನ, ದೇವತಾ ರ್ಚನೆ, ಅಧ್ಯಯನ, ನಿವಾಸ ಎಂಬ ಎಡೆಗಳಲ್ಲಿ ಸುಸಮಯವನ್ನು ಮೇಲಿಂದ ಮೇಲೆ ನೋಡಿ ನೋಡಿ, ಮೈ ಬೇಸರಗೊಂಡು (ಕಕ್ಕರಿಕರಂಬಡಪಡು ?) ಕಿರಿಕಿರಿಪಡುತ್ತಿರಲು (ಕಸಿವಿಸಿಯಾಗಿರಲು ?) (ಕುಂದುಂಟಾಗಿರಲು ?) ಒಂದು ಛಿದ್ರ ಅತ್ಯಾಸೆಯನ್ನುಂಟು ಮಾಡಿತು. ಕಲಿಪುರುಷನು ಎಲ್ಲೆಯಲ್ಲಿಗೆ ಸುಳಿಯಲು ಸದ್ಗುಣವನ್ನು ಪಡೆಯುವವರು ಯಾರು ? ೪೯೭. ನಳಮಹಾರಾಜನು ಒಂದು ದಿನ ಹಿಮ್ಮಡಿಯನ್ನು ತೊಳೆಯದೆ ನೀರನ್ನು ಮುಕ್ಕುಳಿಸಲು, ಒಳ್ಳೆಯ ಅವಕಾಶವೊದಗಿತೆಂದು ಆ ಹೊತ್ತಿನಲ್ಲಿ ಕಲಿಪುರುಷನು

ಪೇಶಲಯೌವನಕ್ಕೆ ಜರೆ ಸತ್ಕುಲದೇಟಿಗ್ಗೆ ನಿಂದೆ ತಾಪಸಂ
ಗಾ [ಸೆ] ನೃಪಂಗೆ ಲೋಭವಭಿಮಾನಿಗೆ ದೈನ್ಯವಧೀಶ್ವರಂಗೆ ಹೃ
ತ್ಕ್ಲೇಶವ[ನೂನ] ಧಾರ್ಮಿಕಜನಕ್ಕೆ ದರಿದ್ರತೆ ಪೊರ್ದುವಂತೆ ಧಾ
ತ್ರೀಶ ನಳಂಗೆ ಕರ್ಮವಶದಿಂ ಕಲಿ ಪೊರ್ದಿತು ಪಾರ್ದು ಕಾಲವಂ ೪೯೮

ವ॥ ಅಂತು ಪೊರ್ದೆ

ಸುಧೆ ಪುಳಿವಂತೆ ಕಲ್ಪತರು ದುರ್ಗುಣಮಂ ತಳೆವಂತೆ ಮಾನಿ ದುಃ
ಖದ ಮರುಳೊಂದಿದಂತೆ ನವಪುಷ್ಪಲತಾಂಕುರಮುಗ್ರ ಕೀಟಸ
ನ್ನಿಧಿವಡೆವಂತೆ ಭೋಗಿ ತನುಕುಷ್ಠವನರ್ಜಿಸಿದಂತಿರಾಯ್ತು ನೈ
ಷಧನೃಪನಂತರಂಗ ಬಹಿರಂಗಗುಣಂ ಕಲಿ ಪೊರ್ದಲಾಕ್ಷಣಂ ೪೯೯

ವ್ಯಸನಕ್ಕುದ್ಭ್ರಾಮಕಕ್ಕಕ್ರಮಪದವಿಗೆ ದುರ್ನೀತಿಗನ್ಯಾಯಕಾರ್ಯ
ಪ್ರಸರಕ್ಕಾಚಾರಭಂಗಕ್ಕನವರತಮಸತ್ಯಕ್ಕಹೋರಾತ್ರ ನಿದ್ರಾ
ಲಸಚಿತ್ತಕ್ಕಾವಗಂ ತನ್ನಳನೃಪತಿ ಮನಂದಪ್ಪದವೊಲ್ ಮಾಡಿದಂ ಸಾ
ಹಸದಿಂ ಸೂಕ್ಷ್ಮಸ್ವರೂಪಿ ಕಲಿ ಕಲಿಲಗುಣಾನೇಕವಂ ಲೋಕವಂಜಲ್ ೫೦೦

ಆತನ ಶರೀರವನ್ನು ಪ್ರವೇಶಿಸಿದನು. ೪೯೮. ಸುಂದರವಾದ ಯೌವನಕ್ಕೆ ಮುದಿತನವೂ, ಸತ್ಕುಲಾಭಿವೃದ್ಧಿಗೆ ಅಪವಾದವೂ, ತಪಸ್ವಿಗೆ ಆಸೆಯೂ, ರಾಜನಿಗೆ ಜಿಪುಣತನವೂ. ಮಾನಿಷ್ಠನಿಗೆ ದೈನ್ಯವೂ, ಒಡೆಯನಿಗೆ ಚಿತ್ತಕ್ಷೋಭೆಯೂ, ಪರಿಶುದ್ಧರಾದ ಧರ್ಮಾನುಯಾಯಿಗಳಿಗೆ ಬಡತನವೂ ಅಡಸುವಂತೆ, ಸಮಯವನ್ನೇ ಎದುರುನೋಡುತ್ತಿದ್ದ ಕಲಿಪುರುಷನು ಕರ್ಮವಶದಿಂದ ನಳಮಹಾರಾಜನಿಗೆ ಬಂದು ಅಡರಿದನು. ವ॥ ಹಾಗೆ ಅಮರಲು, ೪೯೯. ಕಲಿ ಪ್ರವೇಶಿಸಿದ ಒಡನೆಯೆ ಅಮೃತ ಹುಳಿಯಾದಂತೆಯೂ, ಕಲ್ಪವೃಕ್ಷವು ದುರ್ಗುಣವನ್ನು ತಳೆದಂತೆಯೂ, ಮಾನಿಯಾದವನಿಗೆ ವ್ಯಸನಭ್ರಮೆ ಆವರಿಸಿದಂತೆಯೂ, ಹೊಸತಾದ ಹೂವಿನಬಳ್ಳಿಯ ಚಿಗುರು ತೀಕ್ಷ್ಣವಾದ ಕೀಟದ ಸಾಮೀಪ್ಯವನ್ನು ಪಡೆದಂತೆಯೂ, ಸುಖಿಯಾದವನು ಶರೀರದಲ್ಲಿ ಕುಷ್ಠರೋಗವನ್ನು ಸಂಪಾದಿಸಿದಂತೆಯೂ ನಳಮಹಾರಾಜನ ಅಂತರಂಗ ಬಹಿರಂಗ ಗುಣಗಳೆಲ್ಲವೂ (ಕಳಂಕಯುಕ್ತ) ವಾದುವು. ೫೦೦. ಚಿಂತೆಗೆ, ಅತೀವವಾದ ಭ್ರಮಣೆಗೆ, ಅನುಚಿತವಾದ ಸ್ಥಾನಕ್ಕೆ, ದುರಾಚಾರಕ್ಕೆ, ಅನ್ಯಾಯವಾದ ಕೆಲಸಗಳಿಗೆ, ಆಚಾರವಿಘ್ನಕ್ಕೆ, ಸರ್ವದಾ ಅಸತ್ಯಕ್ಕೆ, ಹಗಲಿರುಳೂ ನಿದ್ರಾಲಸ್ಯಯುಕ್ತವಾದ ಮನಸ್ಸಿಗೆ ನಳಮಹಾರಾಜನು ಯಾವಾಗಲೂ ತಪ್ಪದೆ ಒಡಂಬಡುವಂತೆ, ಕಲಿಪುರುಷನು ಸಾಹಸದಿಂದಲೂ, ಸೂಕ್ಷ್ಮಸ್ವರೂಪದಿಂದಲೂ,

ಸಲೆರೋಗಿ ರೋಗದಿಚ್ಛೆಗೆ
ಪಲವು ಪದಾರ್ಥಂಗಳಂ ಕರಂ ಬಯಸುವವೊಲ್
ಕಲಿ ಬಂದು ಪೊರ್ದೆ ದುರ್ಗುಣ
ದೊಲವಾದುದು ನಳನೃಪಂಗೆ ದಿವಸಕ್ರಮದಿಂ ೫೦೧

ಖ್ಯಾತಿಗೆ ರಾಜನೀತಿ ಪೆಸರ್ವೆತ್ತಿತಿಹಾಸ ಪುರಾಣ [ಶಾಸ್ತ್ರ] ಸಂ
ಗೀತ ಕಥಾಪ್ರಸಂಗವದು ಮಾಣ್ದು ನಿತಾಂತವಸಭ್ಯಸಂಗದಿಂ
ದ್ಯೂತವಿನೋದವಸ್ಥಿರಗುಣಂ ಪರಿಹಾಸವಚಃಪ್ರವೃತ್ತಿ ದು
ರ್ನೀತಿ ದುರಾಗ್ರಹಂ ಹೃದಯದೊಳ್ ನೆಲಸಿತ್ತು ನಳಕ್ಷಿತೀಶನಾ ೫೦೨

ನಳನೃಪತಿಯ ದಾಯಾದಂ
ಸಲೆ ಬಡವಟ್ಟಿರ್ಪನಲ್ಲಿ ಪುಷ್ಕರನೆಂಬಂ
ಕಲಿಯವನಂ ಪ್ರೀತಿಸಿದಂ
ಗೆಲಲಕ್ಷದ್ಯೂತಕೇಳಿಗಕ್ಷಾಕೃತಿಯಿಂ ೫೦೩

ಆತಂ ಬಂದುರ್ವೀಪನಂ
ದ್ಯೂತವಿನೋದಕ್ಕೆ ಕರೆಯಲಾಡಲ್ ಬಗೆದಂ
ದಾತುರೆ............
............ನಕ್ಷವಂ ಪಿಡಿಯೆಂದಂ ೫೦೪

ಲೋಕವೇ ತಲ್ಲಣಿಸುವಂತೆ ಅನೇಕ ಪಾಪಕಾರ್ಯಗಳನ್ನು ಮಾಡಿದನು. ೫೦೧. ತುಂಬ ರೋಗಿಯಾದವನು ರೋಗದ ಚಾಪಲ್ಯದಿಂದ ಹಲವು ಪದಾರ್ಥಗಳನ್ನು ವಿಶೇಷವಾಗಿ ಅಪೇಕ್ಷಿಸುವಂತೆ ಕಲಿಪುರುಷನು ಬಂದು ಹಿಡಿಯಲು, ನಳಮಹಾರಾಜನಿಗೆ ದಿನಗಳುರುಳಿದಂತೆಲ್ಲ ಕೆಟ್ಟ ಗುಣಗಳಲ್ಲಿಯೇ ಆಸಕ್ತಿಯುಂಟಾಯಿತು. ೫೦೨. ಕೀರ್ತಿದಾಯಕವಾದ ರಾಜನೀತಿ, ಹೆಸರುವಾಸಿಯಾದ ಇತಿಹಾಸ, ಪುರಾಣ, ಶಾಸ್ತ್ರ, ಸಂಗೀತ, ಕಥಾಪ್ರಸಂಗಗಳು ನಿಂತು, ಸರ್ವದಾ ದುಷ್ಟರ ಸಹವಾಸದಿಂದಲೂ, ಜೂಜು, ವಿನೋದ, ಅಶಾಶ್ವತವಾದ ಗುಣಗಳಿಂದಲೂ, ಅಪಹಾಸ್ಯ, ಹರಟೆ, ದುರಾಚಾರ, ಕೆಟ್ಟಕೋಪಗಳು ನಳಮಹಾರಾಜನ ಹೃದಯದಲ್ಲಿ ನೆಲಸಿದ್ದುವು. ೫೦೩. ನಳಮಹಾರಾಜನ ದಾಯಾದಿಯಾದ ಪುಷ್ಕರನೆಂಬವನು ಬಡವನಾಗಿದ್ದರು ಪಗಡೆ, ಜೂಜಾಟಗಳಲ್ಲಿ ಗೆಲ್ಲಲು ಕಲಿಪುರುಷನು ದಾಳದಾಕೃತಿಯಲ್ಲಿ ಅವನನ್ನು ಒಲಿದನು. ೫೦೪. ಆತನು ಬಂದು ರಾಜನನ್ನು ದ್ಯೂತವಿನೋದಕ್ಕಾಗಿ ಕರೆಯಲು, ಆಡಲು ಒಪ್ಪಿ......

ಕಾಲೋಚಿತ ಕಿತವರನನ್ನ
ತಾಲಯರು ಪೊರೆಗೆ ಕರೆದು ಪಣಬಂದವನೊ
ಲ್ವಾಳೋಚಿಸಿ ಡಾಳಿಸಿದು
ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ ೫೦೫

ಬೇಡಿದ ದಾಯಂ ಬೀಟಲ್
ಪೂಡಿದ ಪಲಗೆಗಳನೆಲ್ಲವಂ ಪುಷ್ಕರನೊ
ಲ್ವಾಡಿ ಗೆಲಲ್ ಸೋಲಂ ಕಡು
ಗಾಡಲ್ ನಳನೃಪತಿಯೊಡ್ಡಿದಂ ಘನಧನಮಂ ೫೦೬

ಹಲವೊಡ್ಡವನೊಡ್ಡಿಯುವಂ
ಕಲಿವಶದಿಂ ಸೋಲ್ತು ಕೋಪಿ ನಳಭೂಪಾಲಂ
ತಲೆದುಜಿಸುತ್ತಿಜಿಹಿಲ್ಲದೆ (?)
ಛಲದಿಂ ಮತ್ತಾಡಿಯಾಡಿ ಸೋಲುತ್ತಿರ್ದಂ ೫೦೭

ದಮಯಂತಿ ಬೇಡಬೇಡೆನೆ
ಸಮಸ್ತಭಂಡಾರವಂ ಗಜಾಶ್ವ [.]ಳೆಯುಂ
ನಿಮಿಷದೊಳಾಗಳ್ ಸೋಲ್ತಂ
ಕುಮತಿ ನಳಂ ಕಲಿಯುಮಹಿಮೆಯೇಂ ಕೇವಳಮೇ ೫೦೮

ದಾಳಗಳನ್ನು ತೆಗೆದುಕೋ ಎಂದನು. ೫೦೫. ಸಮಯಕ್ಕೆ ತಕ್ಕಂತೆ ಕಪಟಿಯಾದ, ಪಂಥಕಟ್ಟಿದ ನಳಮಹಾರಾಜನು (ಕಲಿಪುರುಷನ ಪ್ರಭಾವದಿಂದ ನಳಮಹಾರಾಜ ನಲ್ಲಿ ಈ ದುರ್ಗುಣವು ಕಾಣಿಸಿಕೊಂಡಿರಬೇಕೆಂದು ಇಲ್ಲಿ ಕವಿಯ ಅಭಿಪ್ರಾಯವಿರು ಬಹುದು ?) ಸುಳ್ಳುಗಾರರನ್ನು ಹತ್ತಿರಕ್ಕೆ ಬರಮಾಡಿಕೊಂಡು, ಒಲಿದು. ಆಲೋಚಿಸಿ ಸೋಲಲೆಂದಿದ್ದ ದಾಳಗಳೆರಡನ್ನು ಉರುಳಿಸಿದನು. (?) ೫೦೬. ಬೇಡಿದ ದಾಯವು ಬೀಳಲು, ಹೂಡಿದ ಆಟಗಳನ್ನೆಲ್ಲ ಪುಷ್ಕರನು ಒಲಿದು ಆಡಿ ಗೆಲ್ಲಲು, ಆ ಅಪಜಯವು ತುಂಬ ಕಾಡಲು (ಪೀಡಿಸಲು) ನಳಮಹಾರಾಜನು ಅಪಾರವಾದ ಸಂಪತ್ತನ್ನು ಪಣವಾಗಿ ಒಡ್ಡಿದನು. ೫೦೭. ಹಲವಾರು ಪಣಗಳನ್ನು ಒಡ್ಡಿ ಒಡ್ಡಿ, ಅವುಗಳನ್ನು ಕಲಿಪುರುಷನ ಪ್ರಭಾವದಿಂದ ಸೋತು. ಕುಪಿತನಾದ ನಳಮಹಾರಾಜನು, ತಲೆ ತುರಿಸಿಕೊಳ್ಳುತ್ತ ದಿಕ್ಕುಗಾಣದೆ (?) ಹಠದಿಂದ ಪುನಃ ಆಡಿ ಆಡಿ ಸೋಲುತ್ತಿದ್ದನು. ೫೦೮. ದಮಯಂತಿ ಬೇಡ ಬೇಡ ಎನ್ನಲು, ಸಕಲ ಭಂಡಾರವನ್ನೂ, ಆನೆ ಕುದುರೆ ಮೊದಲಾದುವನ್ನೂ, ಕೆಟ್ಟ ಬುದ್ಧಿಯುಳ್ಳ ನಳಮಹಾರಾಜನು ನಿಮಿಷಮಾತ್ರದಲ್ಲಿ ಆಗ ಸೋತನು. ಕಲಿಪುರುಷನ

ದಮಯಂತಿಕಾಂತೆಯಿರ್ಬರ್
ಕುಮಾರರಂ ಕುಂಡಿನಕ್ಕೆ ಕಳುಪಿದಳವರಂ
ರಮಣನ ಜೂಜಿನ ಭಯದಿಂ
ರಮಣಿಯೊಳ್ ಬುದ್ಧಿ ನಾಲ್ಕುಮಡಿಯಪ್ಪುದರಿಂ ೫೯

ಸೋಲಲೊಡನೊಡನೆ ಕೋಪ
ಜ್ವಾಲೆ ಕರಂ ಪೆರ್ಚಿಯೊಡ್ಡಿದಂ ಘನತರ ಕೋ
ಶಾಲಯದ ರತ್ನಖಚಿತ ಮ
ಹಾಲಂಕಾರಂಗಳಂ ಧರಿತ್ರೀನಾಥಂ ೬೦

ತನಗುಳ್ಳ ರಾಜ್ಯಮಂ ಸಚಿ
ವನಿಕಾಯಂ ಬೆರಸು ಸೋಲ್ತು ಬೆಱಗಾಗೆ ನಳಂ
ಕುನತಿ(ಯ ?)ವಿದ ಪುಷ್ಕರಂ ಭೋಂ
ಕನೆ ಪೋಗು ಮದೀಯ ರಾಜ್ಯದಿಂದೆಂದನವಂ ೬೧

ಗುಣಿ ದಮಯಂತಿಯೊರ್ವಳುೞಿಯಲ್ ನವರತ್ನ ಸುವರ್ಣವಾಜಿ ವಾ
ರಣ ನಿಜದಾಸಿದಾಸ ಧನ ರಾಜ್ಯ ಕುಲಾಗತ ಮಂತ್ರಿವರ್ಗಮಂ
ಗಣಿಸದೆ ಸೋಲ್ತು ಕಾಂತೆಸಹಿತಂ ನಳಭೂಪತಿ ಬೇಗ ತನ್ನ ಪ
ಟ್ಟಣವನಗಲ್ದರಣ್ಯಪಥದೊಳ್ ನಡೆಗೊಂಡನತೀವ ಖೇದದಿಂ ೬೨

ಮಹಿಮೆಯೇನು ಕೇವಲವೇ ? ೫೯. ಸ್ತ್ರೀಯರಲ್ಲಿ ಬುದ್ಧಿ ನಾಲ್ಕುಪಟ್ಟು ಹೆಚ್ಚಾಗಿರುವುದರಿಂದ, ಗಂಡನ ಜೂಜಿನ ಭಯದಿಂದ ಪತ್ನಿಯಾದ ದಮಯಂತಿ ಇಬ್ಬರು ಗಂಡು ಮಕ್ಕಳನ್ನೂ ಕುಂಡಿನಪುರಕ್ಕೆ ಕಳುಹಿಸಿದಳು. ೬೦. ಸೋಲುಂಟಾಗಲು, ಒಡನೊಡನೆ ಕೋಪಾಗ್ನಿ ವಿಶೇಷವಾಗಿ ಹೆಚ್ಚಲು ಭೂಪಾಲಕನು ಶ್ರೇಷ್ಠವಾದ ಕೋಶಾಗಾರದಲ್ಲಿದ್ದ ರತ್ನಖಚಿತವಾದ ದೊಡ್ಡದೊಡ್ಡ ಅಲಂಕಾರಸಾಮಗ್ರಿಗಳನ್ನೆಲ್ಲ ಪಣವೊಡ್ಡಿದನು. ೬೧. ನಳನು ತನ್ನ ಮಂತ್ರಿಸಮೂಹಸಮೇತನಾಗಿ ಎಲ್ಲ ರಾಜ್ಯವನ್ನೂ ಸೋತು ಆಶ್ಚರ್ಯಚಕಿತನಾಗಿರಲು, ದುಷ್ಟನಾದ (?) ಪುಷ್ಕರನು 'ನನ್ನ ರಾಜ್ಯದಿಂದ ಕೂಡಲೆ ಹೊರಡು' ಎಂದನು. ೬೨. ಗುಣವಂತಳಾದ ದಮಯಂತಿಯೊಬ್ಬಳನ್ನು ಬಿಟ್ಟು, ನಳಮಹಾರಾಜನು ನವರತ್ನಗಳು, ಬಂಗಾರ, ಕುದುರೆ, ಆನೆ, ತನ್ನ ದಾಸ ದಾಸಿಯರು, ಧನ, ರಾಜ್ಯ, ವಂಶಪಾರಂಪರ್ಯವಾದ ಸಚಿವಸಮೂಹವನ್ನು ಲೆಕ್ಕಿಸದೆ ಸೋತು, ಹೆಂಡತಿಯೊಂದಿಗೆ ಕೂಡಿ, ಬೇಗನೆ ತನ್ನ ಪಟ್ಟಣವನ್ನು ತೊರೆದು, ಅತ್ಯಂತ ದುಃಖ

ನಾನಾ ಗುಲ್ಮಲತಾಂಘ್ರಿಪಪ್ರಕರದಿಂ ತೀವಿರ್ದ ದುಶ್ಶ್ವಾಪದ
ಧ್ವಾನಾಭೀಳಮನೇನುಮಂ ಬಗೆಯದಾತ್ಮಸ್ತ್ರೀಯುತಂ ಭೃತ್ಯಸಂ
ತಾನಾಭಾವದಿನೊರ್ವನೇ ಹೃದಯಪಶ್ಚಾತ್ತಾಪಮುಬ್ಬುತ್ತಿರಲ್
ಭೂನಾಥಂ ನಡೆದಂ ಸಮಂತು ನೆಲಸಲ್ ದಿಗ್ಭ್ರಾಂತಿ ಕಾಂತಾರದೊಳ್ ॥೧೩

ಒದವಿದ ಪುಂಡರೀಕತತಿಯಿಂ ಪೊಸಪೂಗೊಳನಂ ಪರಿಪ್ರವೋ
ದದಿನಮೃತಾಬ್ಧಿಯಂ ಮೆಱೆವ ಋಕ್ಷವಿಳಾಸದಿನಂತರಿಕ್ಷಮಂ
ತ್ರಿದಶಸಮಾಜಮಂ ವಿಮಳ ಕೌಶಿಕಸಂಗದಿನೆಯ್ದೆ ಪೋಲ್ತು ಪೆ
ರ್ಚಿದ ವಿಪಿನಾಂತಮಂ ನಳನೃಪಂ ನಡೆದಂ ದಮಯಂತಿಸಂಯುತಂ ॥೧೪

ಅಡವಿಯೆ ರಾಜ್ಯಮೊಪ್ಪಿಸೆದ ಮಂತ್ರಿ ಮನಂ ಮೃಗಪಕ್ಷಿಸಂಕುಳಂ
ಪಡೆ ಧನಕೋಶಮಸ್ಖಲಿತ ಧೈರ್ಯಗುಣಂ ದಮಯಂತಿ ಕೂರ್ಪ ಸಂ
ಗಡಮಡೆಗೊಳ್ವ ಕೋಂಟೆ ಭುಜವಿಕ್ರಮದಾಯತಿ ಭಾವಿಸಲ್ಕೆ ತ
ನ್ನೊಡೆತನಮಂ (ದು?)ಗವೇಟೊಡವರಲ್ ನಡೆದು ವನದೊಳ್ ನಳೋರ್ವಿಪಂ ॥೧೫

ದಿಂದ ಅರಣ್ಯಮಾರ್ಗದಲ್ಲಿ ನಡೆಯತೊಡಗಿದನು. ೫೧೩. ಬಗೆಬಗೆಯಾದ ಗೆಡ್ಡೆ, ಬಳ್ಳಿ ಮರಗಳ ಸಮೂಹದಿಂದ ತುಂಬಿಕೊಂಡಿದ್ದ, ಕಾಡಿನಲ್ಲಿ ದಿಗ್ಭ್ರಾಂತಿ ಆವರಿಸಿರಲು, ದುಷ್ಟಪ್ರಾಣಿಗಳ ಭಯಂಕರವಾದ ಶಬ್ದಾದಿಗಳೊಂದನ್ನೂ ಲಕ್ಷಿಸದೆ, ತನ್ನ ಹೆಂಡತಿಯೊಡನೆ ಸೇವಕರಾರೂ ಇಲ್ಲದೆ, ಒಂಟಿಯಾಗಿ, ಎದೆಯ ಬೇಗೆ ಹೆಚ್ಚು ಹೆಚ್ಚಾಗುತ್ತಿರಲು ಮಹಾರಾಜನು ನಡೆದನು. ೫೧೪. ಅಲ್ಲಿದ್ದ ಹುಲಿಗಳ ಗುಂಪಿನಿಂದ ಹೊಸ ಹೂಗೊಳವನ್ನೂ, ಸಿಂಹಗಳ ಆನಂದದಿಂದ ಅಮೃತಸಮುದ್ರವನ್ನೂ. ಕರಡಿಗಳ ವಿಳಾಸದಿಂದ ಅಂತರಿಕ್ಷವನ್ನೂ, ಅತ್ಯಧಿಕವಾದ ಮಾಲಿನ್ಯವುಳ್ಳ ಗೂಗೆಗಳ ಸಹವಾಸದಿಂದ ದೇವತೆಗಳ ತಂಡವನ್ನೂ ವಿಶೇಷವಾಗಿ ಹೋಲುತ್ತ ಹೆಚ್ಚಿದ ಅರಣ್ಯಮಧ್ಯದಲ್ಲಿ ದಮಯಂತೀ ಸಮೇತನಾಗಿ ನಳಮಹಾರಾಜನು ನಡೆದನು (ಇಲ್ಲಿ ಕವಿ ವಿರೋಧಾಭಾಸಾಲಂಕಾರವನ್ನು ಬಳಸಿದ್ದಾನೆ. ಈ ಪದ್ಯದಲ್ಲಿ ಉಕ್ತವಾಗಿರುವ ಪುಂಡರೀಕ, ಹರಿ, ಋಕ್ಷ ಮತ್ತು ಕೌಶಿಕ ಎಂಬ ಪದಗಳಿಗೆ ಅನುಕ್ರಮವಾಗಿ ತಾವರೆ, ಹಂಸ, ನಕ್ಷತ್ರ ಮತ್ತು ಚಂದ್ರ ಎಂಬ ಅರ್ಥಗಳನ್ನು ಗ್ರಹಿಸಿದರೆ ಆಪಾತತಃ ತೋರುವ ವಿರೋಧವು ಪರಿಹಾರವಾಗುತ್ತದೆ.) ೫೧೫. ಅರಣ್ಯವೇ ರಾಜ್ಯ, ಶುಭದಾಯಕವಾದ ಮನಸ್ಸೇ ಮಂತ್ರಿ, ಮೃಗಪಕ್ಷಿ ಸಮೂಹವೇ ಸೈನ್ಯ, ಅಚಲವಾದ ಧೈರ್ಯಗುಣವೇ ಧನಕೋಶ, ದಮಯಂತಿಯೇ ಆಪ್ತಸ್ನೇಹಿತರು, ಬಾಹುಬಲದ ವಿಸ್ತಾರವೇ ಸಲಹುವ ಕೋಟೆ ಎಂದು ಭಾವಿಸಿಕೊಳ್ಳಲು, ಒಡೆತನದ ಸಪ್ತಾಂಗಗಳೂ ಒಡನೆಯೇ ಬರಲು ನಳಮಹಾರಾಜನು ಅರಣ್ಯ

ಕಡುವಿಸಿಲಟ್ಟೆ ಮೆಯ್ಸೊಡೆದು ಸುಯ್ಯುತ ಕಂಡ ನೆಱಲ್ಗೆ ಸಾರ್ವ ನೀ
ರಡಸೆ ಬಱಲ್ದು ಕಂಡುದಕಮಂ ಮೊಗೆದೀಂಟುವ ಕಲ್ಗಳೊತ್ತಲೋ
ರಡಿಗಡಿಗೊರ್ಮೆ ನಿಲ್ವ ಪಸಿವುರ್ವಿಸಲಿಕ್ಕೆಲದಲ್ಲಿ ಕಂಡ ಕಂ
ಡೆಡೆಯ ಫಲಂಗಳಂ ಬಯಸುವುಜ್ಜುಗವಾದುದು ರಾಜಪುತ್ರಿಯೊಳ್ ೫೧೬

ದಾರಿಯ ಧೂರ್ತರಂತೆ ಸೆಱಗಂ ಪಿಡಿಯಲ್ ಗಿಡು ನಿತ್ಯಮಾರ್ಗಮಂ
ಬಾರಿಸುವಂತೆ ಕಂಟಕವಗುರ್ವಿಸಲೊಪ್ಪುವ ದಾಸದಾಸಿಯಂ
ತೋರಡಿಗೊರ್ಮೆ ಪಾದತಳಮಂ ಬಿಸದೊತ್ತೆ ಪರಲ್ಗಳುಗ್ರಕಾಂ
ತಾರದೊಳೊಯ್ಯನೊಯ್ಯನಳವಟ್ಟೆಡೆಯಂ ದಮಯಂತಿ ಮೆಟ್ಟಿದಳ್ ೫೧೭

ಸುಕೃತವನೊಂದಿ ಕೀರ್ತಿ ಶುಭಶೀಲವನೊಂದಿ ಸುನೀತಿಯಾಗಮ
ಪ್ರಕರವನೊಂದಿ ಮಂತ್ರವತಿಯೌವನದೇೞ್ಗೆಯನೊಂದಿ ಲಜ್ಜೆ ವಾ
ಙ್ನಿಕರವನೊಂದಿ ಭಾವಕವಿಸೃಷ್ಟಿ ಕರಂ ನಡೆವಂದದಿಂ ನಿಜಾ
ಧಿಕನೊಡಗೂಡಿ ಕೂರ್ತು ನಡೆದಳ್ ದಮಯಂತಿ ವಿಶೇಷಭಕ್ತಿಯಿಂ ೫೧೮

ಆತಪತಾಪಮಂ ಸತತದೂರಪಥಶ್ರಮಮಂ ತೃಪಾಕ್ಷುಧಾ
ಭೀತಿಯನಾಪ್ತ ಬಂಧು ವಿರಹವ್ಯಥೆಯಂ ಬಗೆಗೊಳ್ಳದಾರ್ಜಿತ

ದಲ್ಲಿ ನಡೆದನು. ೫೧೬. ರಾಜಪುತ್ರಿಯಾದ ದಮಯಂತಿಗೆ ತೀಕ್ಷ್ಣವಾದ ಬಿಸಿಲು ಬೆನ್ನಟ್ಟಲು ಮೈಬಳಲಿ, ನಿಟ್ಟುಸಿರುಬಿಡುತ್ತ, ಕಂಡ ನೆಳಲಿಗೆ ಸಾರುವ, ನೀರಡಿಕೆಯಾಗಲು ಬಳಲಿ, ಕಣ್ಣಿಗೆ ಬಿದ್ದ ನೀರನ್ನು ಮೊಗೆಮೊಗೆದು ಕುಡಿಯುವ, ಕಲ್ಲುಗಳು ಒತ್ತಲು ಒಂದೊಂದು ಹೆಜ್ಜೆಗೂ ಒಮ್ಮೊಮ್ಮೆ ನಿಲ್ಲುವ, ಹಸಿವು ಹೆಚ್ಚಾಗಲು ಎರಡು ಪಕ್ಕಗಳಲ್ಲಿಯೂ ಕಂಡ ಕಂಡೆಡೆಗಳಲ್ಲಿರುವ ಹಣ್ಣುಗಳನ್ನು ಅಪೇಕ್ಷಿಸುವ ಕೆಲಸವೊದಗಿತು. ೫೧೭. ದಾರಿಯಲ್ಲಿನ ನೀಚರಂತೆ ಗಿಡಗಳು ಸೆರಗನ್ನು ಹಿಡಿಯಲು, ನಿತ್ಯಮಾರ್ಗವನ್ನು ಅಡ್ಡಗಟ್ಟುವಂತೆ ಮುಳ್ಳು ಭಯವನ್ನುಂಟುಮಾಡಲು, ದಾಸ ದಾಸಿಯರಂತೆ ಒಂದೊಂದು ಹೆಜ್ಜೆಗೂ ಒಮ್ಮೆ ಅಂಗಾಲನ್ನು ಕಲ್ಲುಗಳು ಬಿಡದೆ ಒತ್ತುತ್ತಿರಲು, ಭಯಂಕರವಾದ ಕಾಡಿನಲ್ಲಿ ಒಯ್ಯನೊಯ್ಯನೆ ದಮಯಂತಿ ತನಗೆ ಪ್ರಾಪ್ತವಾದ ಸ್ಥಳವನ್ನು ಮೆಟ್ಟಿದಳು. ೫೧೮. ಅದೃಷ್ಟವನ್ನು ಕೂಡಿಕೊಂಡು ಕೀರ್ತಿಯೂ, ಸದ್ಗುಣವನ್ನು ಕೂಡಿಕೊಂಡು ಒಳ್ಳೆಯ ನೀತಿಯೂ, ಶಾಸ್ತ್ರಸಮೂಹವನ್ನು ಕೂಡಿಕೊಂಡು ಮಂತ್ರಗಳೂ, ವಿಶೇಷವಾದ ಯೌವನಾಭಿವೃದ್ಧಿಯನ್ನು ಕೂಡಿಕೊಂಡು ನಾಚಿಕೆಯೂ, ಮಾತುಗಳನ್ನು ಕೂಡಿಕೊಂಡು ಭಾವಯುತವಾದ ಕವಿಸೃಷ್ಟಿಯೂ ವಿಶೇಷವಾಗಿ ನಡೆಯುವಂತೆ ತನ್ನ ಇನಿಯನೊಂದಿಗೆ ಕೂಡಿ ದಮಯಂತಿ ವಿಶೇಷವಾದ ಭಕ್ತಿಯಿಂದ ಪ್ರೇಮದಿಂದ ನಡೆದಳು. ೫೧೯. ಬಿಸಿಲಿನ ಬೇಗೆಯನ್ನೂ, ಸರ್ವದಾ ದೂರದ ದಾರಿಯ ಬಳಲಿಕೆಯನ್ನೂ, ಬಾಯಾರಿಕೆ ಹಸಿವೆಗಳ ಭಯವನ್ನೂ, ಆತ್ಮೀಯರಾದ ಬಂಧುಗಳ ಅಗಲಿಕೆಯ ವ್ಯಥೆಯನ್ನೂ ಮನಸ್ಸಿಗೆ ತೆಗೆದು

ಪ್ರೀತಿಯಿನಾತ್ಮವಲ್ಲಭನ ಪಿಂದನೆ ಬಂದಳನೂನ ಯೌವನ
ಖ್ಯಾತೆ[ಯರಣ್ಯದೊಳ್ ಸತಿಗೆ] ಕೇವಳಮೇ ಪತಿಭಕ್ತಿ ಭಾವಿಕಂ ೫೨೯

ಭೀಕರ ಪುಂಡರೀಕ ವನವಾರಣ ಸೈರಿಭ ಸೂಕರೋಗ್ರ ಭ
ಲ್ಲೂಕ ವೃಕಾದಿ ದುಷ್ಟಮೃಗಸಂಕುಳದಿಂ ಜರಜಂತು ಸಾರಸಾ (?)
ಘೂಕ ಮಯೂರ ವೃದ್ಧ ನಟ ಟಿಟ್ಟಿಭಸಂತತಿಯಿಂ ಜರದ್ದ್ರುಮಾ
ನೀಕದಿನದ್ಭುತಂ ಪುದಿದರಣ್ಯಮನೆಯ್ದಿದನುರ್ವರಾಧಿಪಂ ೫೩೦

ಕಕ್ಕರವಂಚೆ ಕೊಂಚೆ ಗಿಳಿ ಸೋಗೆನವಿಲ್ ಕಿಱುವಕ್ಕಿ ಕೊಕ್ಕುವ
ಬ್ಬಕ್ಕಿ ಚಕೋರಿ ಗೌಜು ಹಸುಬಂ ಪೊಱಸಾಂದೆ ಪಸುರ್ತ ಪಾರಿವಂ
ಕುಕ್ಕುಟನಕ್ಕಜಂ ಹರಡೆ ಹೋದಗೆ ಚಾದಗೆ ಹಂಗನಿಟ್ಟೆ ಬೆ
ಳ್ಳಕ್ಕಿಗಳಿಂ ಮನಂಗೊಳಿಪರಣ್ಯಮನೆಯ್ದಿದನಾ ನೃಪಾಳಕಂ ೫೩೧

ಯುಗನಾಮಂ ನರನಾಮಮಂಗಭವನಾಮಂ ಭೂಮಿನಾಮಂ ಮಹೋ
ರಗನಾಮಂ ಪರಮೇಷ್ಠಿನಾಮಮಿಷುನಾಮಂ ಶಕ್ರನಾಮಂ ಲಸ

ಕೊಳ್ಳದೆ ತಾನು ಸಂಪಾದಿಸಿದ ಪ್ರೀತಿಯಿಂದ, ಕುಂದಿಲ್ಲದಂತಹ ಪ್ರಾಯದ ಕೀರ್ತಿಯುಳ್ಳ ವಳು ಕಾಡಿನಲ್ಲಿ ಗಂಡನ ಹಿಂದೆಯೇ ಬಂದಳು. ಸತಿಯಾದವಳಿಗೆ ಪತಿಭಕ್ತಿಯೆಂಬ ಭಾವನೆಯು ಸಾಮಾನ್ಯವಾದುದೇ ? ೫೩೦. ಭಯಂಕರವಾದ ಹುಲಿ, ಕಾಡಾನೆ, ಕಾಡುಕೋಣ, ಹಂದಿ, ಭಯಂಕರವಾದ ಕರಡಿ, ತೋಳ ಮೊದಲಾದ ದುಷ್ಟಮೃಗಗಳ ಸಮೂಹದಿಂದಲೂ, ಜರಜಂತು (?) (ಮುದಿಹುಳು ?), ನೀರ್ವಕ್ಕಿ, ಗೂಗೆ, ನವಿಲು ವೃದ್ಧನಟ (?), ಟಿಟ್ಟಿಭಸಮೂಹದಿಂದಲೂ, ಶಿಥಿಲವಾದ ವೃಕ್ಷಸಮೂಹದಿಂದಲೂ, ಆಶ್ಚರ್ಯವು ಆವರಿಸಿದ ಕಾಡನ್ನು ಮಹಾರಾಜನು ಪ್ರವೇಶಿಸಿದನು. ೫೩೧. ಕಕ್ಕರ(?), ಹಂಸ, ಕ್ರೌಂಚಪಕ್ಷಿ, ಗಿಳಿ, ಸೋಗೆನವಿಲು, ಕಿರುವಕ್ಕಿ, ಕೊಕ್ಕುವ (?), ಅಬ್ಬಕ್ಕಿ, ಚಕೋರ, ಗೌಜು, ಹಸುಬ, ಹೊರಸು, ಗೂಗೆ, ಹಸುರಾದ ಪಾರಿವಾಳ, ಕೋಳಿ, ಅಕ್ಕಜ (?), ಹರಡೆ, ಹೋದಗೆ, ಚಾತಕಪಕ್ಷಿ, ಹಂಗ, ಇಟ್ಟೆ, ಬೆಳ್ಳಕ್ಕಿಗಳಿಂದ ಮನಸ್ಸನ್ನು ಸೆಳೆಯುವ ಕಾಡನ್ನು ಆ ಮಹಾರಾಜನು ಪ್ರವೇಶಿಸಿದನು. ೫೩೨. ಯುಗವೆಂಬ ಹೆಸರು, ನರನೆಂಬ ಹೆಸರು (ತೋರಮತ್ತಿ), ಮನ್ಮಥನೆಂಬ ಹೆಸರು (ಬೇಲದಮರ), ಭೂಮಿಯೆಂಬ ಹೆಸರು (ಕಾಗೆಹೇರಿಳೆ), ಮಹೋರಗ (ಹಾವುಮೆಕ್ಕೆ) ನೆಂಬ ಹೆಸರು, ಪರಮೇಷ್ಠಿಯೆಂಬ ಹೆಸರು, ಇಷುವೆಂಬ ಹೆಸರು, ಶಕ್ರನೆಂಬ ಹೆಸರು (ಬೆಟ್ಟಮಲ್ಲಿಗೆ), ಪ್ರಕಾಶಮಾನವಾದ ಮೃಗವೆಂಬ ಹೆಸರು, ಚಂದ್ರನೆಂಬ ಹೆಸರು, ಪದ್ಮಾಕರ ನೆಂಬ ಹೆಸರು, ಸುಧಾನಾಮವೆಂಬ (ಹಿಪ್ಪೆ) ಹೆಸರುಗಳಿಂದ ಯಾವಾಗಲೂ ಒಪ್ಪಿರುವ

ನ್ಮೃಗನಾಮಂ ವಿಧುನಾಮಮಬ್ಜನಿಲಯಾನಾಮಂ ಸುಧಾನಾಮಮಾ
ವಗಮೊಪ್ಪಿಪ್ಪ ಕುಜಂಗಳಿಂದೆ ಸತತಂ ಚೆಲ್ವಾಯ್ತು ತತ್ಕಾನನಂ ೫೨೨

ವ॥ ಆ ಸಮಯದೊಳ್

ಬಿಸಿಲುರ್ಬೆದಿರ್ದು ಸುಡಲ್ ಬಟಲ್ಕೆ ಬಳೆಯಲ್ ನೀರಟ್ಕೆ ಕಯ್ಮೀಱೆ ನಾ
ಲ್ದೆಸೆಗಳ್ ತತ್ತರಿಸಲ್ ಮುಖೇಂದು ಕೊರಗಲ್ ಸತ್ತ್ವಂ ಸಡಿಲ್ದಂಘ್ರಿವಿ
ನ್ಯಸನಂ ಕುಂದಲಗುರ್ವಿಸಲ್ ಶ್ರಮಜಲಂ ಸುಯ್ ಸುಯ್ಯನಟ್ಟಲ್ ಕರಂ
ಪಸಿವಾದತ್ತವನೀಶ್ವರಂಗೆಳಸಿದಂ ಸಾರಾಮಿಷಾಹಾರಮಂ ೫೨೩

ಮುಂಡಲಿಸಿ ಮುಂದಿರಲ್ ಪಲ
ವಂಡಜವಿವನಾರ್ತು ಪಿಡಿವುಪಾಯಮನೊಂದಂ
ಕಂಡೆನೆನುತ್ತವನೀಶಂ
ಗುಂಡುಡಿಗೆಯ ಸಣ್ಣ ಸೀರೆಯಂ ಮಿಗೆ ತಳೆದಂ ೫೨೪

ಸತಿಯುಟ್ಟಿರ್ದಂಬರಮಂ
ಪತಿಯರ್ಧವನುಟ್ಟು ತನ್ನ ಸೀರೆಯ ಬಲೆಯಂ
ಪತಗನಿವಹಕ್ಕೆ ಬೀಸಲ್
ಪತತ್ರಿಗಳ್ ಪಾಱಿಪೋದುವಂಬರಸಹಿತಂ ೫೨೫

ವೃಕ್ಷಗಳಿಂದ ಆ ಅರಣ್ಯವು ಸರ್ವದಾ ಮನೋಹರವಾಯಿತು. (ಇದರಲ್ಲಿ ಉಕ್ತವಾಗಿರುವ ಯುಗ, ಮಹೋರಗ, ಪರಮೇಷ್ಠಿ, ಇಷು, ಮೃಗ, ಚಂದ್ರ, ಪದ್ಮಾಕರ ಎಂಬ ಹೆಸರುಗಳೂ ಪರ್ಯಾಯವಾಗಿ ವೃಕ್ಷಗಳ ಹೆಸರುಗಳನ್ನೇ ಸೂಚಿಸುವಂತೆ ತೋರುತ್ತದೆ.) ವ॥ ಆ ಸಮಯದಲ್ಲಿ ೫೨೩. ಬಿಸಿಲು ಹೆಚ್ಚಿ ಸುಡಲು, ಬಳಲಿಕೆ ಹೆಚ್ಚಲು, ನೀರಡಿಕೆ ಕೈಮೀರಲು, ನಾಲ್ಕು ದಿಕ್ಕುಗಳೂ ತತ್ತರಿಸಲು, ಮುಖಚಂದ್ರನು ಕೊರಗಲು, ಶಕ್ತಿ ಶಿಥಿಲವಾಗಿ ಹೆಜ್ಜೆಯ ಭಂಗಿಗಳು ಕುಂದಲು, ಬೆವರು ಅಧಿಕವಾಗಲು, ನಿಟ್ಟುಸಿರು ನಿಟ್ಟುಸಿರನ್ನು ಬೆನ್ನಟ್ಟಲು ಮಹಾರಾಜನಿಗೆ ತುಂಬ ಹಸಿವಾಯಿತು. ಒಳ್ಳೆಯ ಆನಂದ ದಾಯಕವಾದ ಆಹಾರವನ್ನು ಬಯಸಿದನು. ೫೨೪. ಹಲವಾರು ಹಕ್ಕಿಗಳು ಕಣ್ಣಿನ ಮುಂದೆ ಸುತ್ತುತ್ತಿರಲು, ಇವುಗಳನ್ನು ಶಕ್ತಿಯಿಂದ ಹಿಡಿಯುವ ಉಪಾಯವೊಂದನ್ನು ಕಂಡೆನು ಎನ್ನುತ್ತ ರಾಜನು (ತನ್ನ) ಗಂಡುಡಿಗೆಯ ತುಂಡುಬಟ್ಟೆಯನ್ನು ತೆಗೆದುಕೊಂಡನು. ೫೨೫. ಹೆಂಡತಿಯುಟ್ಟಿದ್ದ ಬಟ್ಟೆಯಲ್ಲಿ ಅರ್ಧವನ್ನು ತಾನುಟ್ಟು ತನ್ನ ಬಟ್ಟೆಯ ಬಲೆಯನ್ನು ಹಕ್ಕಿಗಳ ಗುಂಪಿಗೆ ಬೀಸಲು, ವಸ್ತ್ರಸಮೇತವಾಗಿ ಹಕ್ಕಿಗಳು ಹಾರಿ

ಅಡಿಯಿಡದೆ ಮೆಲ್ಲಮೆಲ್ಲನೆ
ಕುಡುಕುಗೊಳುತ್ತಿರ್ಪ ಪಕ್ಕಿವಿಂಡಂ ಪಿಡಿವಂ
ತುಡುವಂಬರವಂ ಮುಸುಕಲ್
ತಡೆಯದೆ ಪಾಱಿದುವು ಸೀತೆಸಹಿತಂಬರದೊಳ್ ೫೨೬

ಆ ಪಿಡಿದನಾ ಪಿಡಿದನೆಂ
ದೋಪಳ್ ನೋಡಲ್ ಕೆರಳ್ದು ಕಿಱಿದಂತರವಂ
ಭೂಪತಿ ಪರಿದು ಬಟಲ್ವನು
ತಾಪಂ ತನಿವೆರ್ಚೆ ಮೆಲ್ಲನೀಕ್ಷಿಸುತಿರ್ದಂ ೫೨೭

ಅಂಬರತಟಕ್ಕೆ ಖಗಕುಲ
ವಂಬರವಂ ಕೊಂಡು ಪಾಱಲೀಕ್ಷಿಸುತಿರ್ದಂ
ಕಂಬುಗ್ರೀವಂ ನೋಯಲ್
ಕಂಬು ಗ್ರೀಷ್ಮಕ್ಕೆ ಸುಗಿವವೊಲ್ ನೃಪತಿಳಕಂ ೫೨೮

ದ್ವಿಜನಿಕರಂ ಧೌತವನ
ಕ್ಕಜದಿಂ ಮೇಲ್ವಿಡಿದು ಪೋಪ ತೆಱದಿಂದಾಗಳ್
ದ್ವಿಜನಿಕರಂ ಧೌತವನ
ಕ್ಕಜದಿಂ ಮೇಲ್ವಿಡಿದು ಪೋದುದೀಕ್ಷಿಸೆ ಭೂಪಂ ೫೨೯

ನಯಂದಂಬರಂ ಪತಂಗಾ
ಶ್ರಯವಲ್ಲದೆ ಪಾರ್ಥಿವರ್ಗದೇಂ ಬಾಟಿಸ್ತಿ ನೃಪಾ

ಹೋದುವು. ೫೨೬. ಕಾಲಿಡಲಾಗದೆ ಮೆಲ್ಲಮೆಲ್ಲನೆ ಗುಟುಕುಗೊಳ್ಳುತ್ತಿರುವ ಹಕ್ಕಿಯ ಹಿಂಡನ್ನು ಹಿಡಿಯುವಂತೆ ಉಟ್ಟಬಟ್ಟೆಯನ್ನು ಕವಿಯಲು (ಅವು) ವಸ್ತ್ರಸಮೇತವಾಗಿ ಆಕಾಶದಲ್ಲಿ ವಿಳಂಬವಿಲ್ಲದೆ ಹಾರಿದುವು. ೫೨೭. ಹಾ ಹಿಡಿದನು ಹಿಡಿದನೆಂದು ಹೆಂಡತಿ ನೋಡುತ್ತಿರಲು, ಮಹಾರಾಜನು ಕೋಪಗೊಂಡು ಸ್ವಲ್ಪ ದೂರ ತೆರಳಿ, ಬಳಲಿಕೆಯ ಆವೇಗವು ಹೆಚ್ಚಲು ಮೆಲ್ಲನೆ ನೋಡುತ್ತಿದ್ದನು. ೫೨೮. ಪಕ್ಷಿಸಮೂಹವು ಬಟ್ಟೆಯನ್ನು ಕಚ್ಚಿಕೊಂಡು ಆಕಾಶದ ಅಂಚಿನತ್ತ ಹಾರಲು, ಶಂಖದಂತಹ ಕುತ್ತಿಗೆಯು ನೋಯಲು, ಬೇಸಗೆಯಲ್ಲಿ ನೀರು ಕುಗ್ಗುವಂತೆ ರಾಜವರ್ಯನು ನೋಡುತ್ತಿದ್ದನು. ೫೨೯. ಬ್ರಾಹ್ಮಣರ ಸಮೂಹವು ಆಶ್ಚರ್ಯಕರವಾಗಿ ಬಟ್ಟೆಯನ್ನು ಮೇಲೆ ಹಿಡಿದು ಹೋಗುವ ರೀತಿಯಲ್ಲಿ ಆಗ ಹಕ್ಕಿಗಳ ಸಮೂಹವು, ರಾಜನು ನೋಡುತ್ತಿರಲು ಬೆರಗಾಗುವಂತೆ ಬಟ್ಟೆಯನ್ನು ಕಚ್ಚಿಕೊಂಡು ಮೇಲೆ ಹಾರಿದುವು. ೫೩೦. 'ನವುರಾದ ಬಟ್ಟೆಯು ಹಕ್ಕಿಗೆ ಆಶ್ರಯ ವಾಗುವುದಲ್ಲದೆ ಕ್ಷತ್ರಿಯರಿಗೆ ಆದರಿಂದ ಏನು ಪ್ರಯೋಜನ ? ರಾಜವಂಶೋದ್ಭವನೆ

ನ್ವಯ ನೀನಱಿಯದುದೆಯೆನು
ತ್ರ ಯಥಾಮಾರ್ಗಕ್ಕೆ ಪೋದುದಂಡಜಷಂಡಂ ೫೩೦

ಇರ್ವರ್ಗೊಂದಂಬರವಾ
ಯ್ತುರ್ವರೆಗಧಿನಾಥನಾಗಿಯುಂ ಕಲಿ ಪೊರ್ದಲ್
ಸರ್ವಜ್ಞನಾದೊಡಂ ಮತಿ
ಖರ್ವತೆಯುಂ ಪಡೆವನುೞಿದರೇಂ ದೊರೆ ಧರೆಯೊಳ್ ೫೩೧

ವ|| ಅಂತು ಪಕ್ಕಿಗಳ್ ಪೋಗೆ

ವಿಲಸತ್ಕೋಮಲ ಕಂದಮೂಲಫಲಮಂ ಸಂಪ್ರೀತಿಯಿಂ ಮೆಲ್ದು ಪ
ಲ್ವಲ ಪಾನೀಯಮನೀಂಟಿ ಪೆರ್ಚಿದ ತೃಷಾಕ್ಷುತ್ಪೀಡೆಯಂ ನೂಂಕಿ ಭೂ
ಜಲತಾಚ್ಛಾಯೆಯ ತಂಪಿನೊಳ್ ನಿಮಿಷಮಿರ್ಪನ್ನಂ ಜಗನ್ನೇತ್ರಮುಂ
ಡಲಮಸ್ತಾಚಲಮಾರ್ಗದೊಳ್ ನಡೆಗೊಳರ್ ಚೆಲ್ವಾಯ್ತು ಸಂಧ್ಯಾಗಮಂ ೫೩೨

ಪೞಿಯಂಬರಮಂ ಬಿಟ್ಟು
ಜ್ವಲನೂತ್ನಾಂಬರಮನುಡುವೆನಪರಾಬ್ಧಿಯ ನಿ
ರ್ಮಲ ಜಲದಿಂ ಮಿಂದೆಂಬವೊ
ಲಿೞಿದಂ ಕಮಲಪ್ರಿಯಂ ಪ್ರತೀಚ್ಯಂಬುಧಿಯೊಳ್ ೫೩೩

ನೀ ತಿಳಿಯದುದೆ ?' ಎನ್ನುತ್ತ ಹಕ್ಕಿಗಳ ಗುಂಪು ತಮ್ಮ ಮಾರ್ಗವನ್ನು ಹಿಡಿದುವು. (ಈ ಪದ್ಯದ ಪೂರ್ವಾರ್ಧದಲ್ಲಿ 'ನಯವಾದ ಆಕಾಶವು ಹಕ್ಕಿಗಳಿಗೆ ನೆಲೆಯಾಗಬಹುದಲ್ಲದೆ, ಕ್ಷತ್ರಿಯರಿಗೆ ಆದರಿಂದ ಏನು ಉಪಯೋಗ' ಎಂಬಲ್ಲಿ 'ಅಂಬರ' ಎಂಬ ಶಬ್ದದ ದ್ವಂದ್ವಾರ್ಥವೂ ಅಡಕವಾಗಿರುವುದನ್ನು ಗಮನಿಸಬಹುದು.) ೫೩೧. ಭೂಮಿಗೆ ಒಡೆಯನಾದರೂ ಇಬ್ಬರಿಗೂ ಒಂದೇ ಒಂದು ಬಟ್ಟೆಯಾಯಿತು. ಕಲಿಪುರುಷನು ಹಿಡಿಯಲು ಸರ್ವಜ್ಞನಾದರೂ ಮತಿಹೀನನಾಗುವನು. ಈ ಭೂಮಿಯಲ್ಲಿ ಉಳಿದವರಾದರೂ ಸಮಾನರೆನ್ನಿಸುವರೆ ? ವ|| ಹಾಗೆ ಹಕ್ಕಿಗಳು ಹಾರಿಹೋಗಲು ೫೩೨. ಪ್ರಕಾಶಮಾನವೂ ಮೃದುವೂ ಆದ ಗೆಡ್ಡೆ, ಬೇರು, ಹಣ್ಣುಗಳನ್ನು ಅತ್ಯಂತ ಪ್ರೀತಿಯಿಂದ ಸವಿದು, ಕೊಳದ ನೀರನ್ನು ಕುಡಿದು, ಹೆಚ್ಚಾದ ಬಾಯಾರಿಕೆ ಹಸಿವೆಗಳ ಪೀಡೆಯನ್ನು ಕಳೆದುಕೊಂಡು, ಮರಬಳ್ಳಿಗಳ ನೆರಳಿನ ತಂಪಿನಲ್ಲಿ ನಿಮಿಷಮಾತ್ರ ಇರುವಲ್ಲಿ, ಜಗತ್ತಿಗೇ ಕಣ್ಣೆನಂತಿರುವ ಸೂರ್ಯನು ಪಶ್ಚಿಮಾಚಲಮಾರ್ಗದಲ್ಲಿ ತೆರಳಲು ಸಂಧ್ಯಾಗಮನವು ಮನೋಹರವಾಯಿತು. ೫೩೩. ಪಶ್ಚಿಮ ಸಮುದ್ರದ ಪವಿತ್ರಜಲದಲ್ಲಿ ಸ್ನಾನಮಾಡಿ ಹಳೆಯ ಬಟ್ಟೆಯನ್ನು ಬಿಟ್ಟು, ಪ್ರಕಾಶಿಸುವ ಹೊಸಬಟ್ಟೆಯನ್ನು ಉಡುವೆನು ಎಂಬಂತೆ

ಪೊಸ ಖದ್ಯೋತಂ ನಿಕುಂಜದ್ರುಮವಿತತಿಯೊಳಿಂಬಾಗೆ ಕಾಂತಾರಮಂ ಶೋ
ಭಿಸೆ ಕಾಷ್ಠಜ್ಯೋತಿಗಳ್ ಜಂಬುಕ ಘನರವವಲ್ಲಲ್ಲಿ ಪೆರ್ಚಲ್ಕುಳೂಕ
ಪ್ರಸರಂ ಕೂಗಿಟ್ಟು ಪಾಡಲ್ ತಿಮಿರಪಟಲಮುರ್ವಲ್ ಜಗನ್ನೇತ್ರನಿದ್ರಾ
ವಸಥಂ ತದ್ರಾತ್ರೆ ಕಯ್ಮಿಕ್ಕಿರೆ ನೃಪವರನೊಂದಿಕ್ಕಿದಾಣಕ್ಕೆ ಸಾರ್ದಂ ೫೩೪

ವ॥ ಅದೆಂತೆನೆ

ಕಟ್ಟೆ ಕಟಿಲ್ದು ಭಿತ್ತಿಯರೆಬಿರ್ದು [. . .] ಸಡಿಲ್ದುದಿರ್ದ ಜಂ
ಬಿಟ್ಟಿಗೆ ಕಂಬವೊರ್ಗುಡಿಸಿ ನೆಟ್ಟನೆ ಬಿರ್ದಪುದೀಗಳೀಗಳೇ
ಗೆಟ್ಟ[ರು]ಮಿಲ್ಲಿರರ್ ಪಥಿಕರೆಂಬ ಪುರಾತನ ದೇವತಾಲಯಂ
ತೊಟ್ಟನೆ ಮುಂದೆ ದಿಟ್ಟಿಗೆಸೆದಿರ್ದುದು ನೈಷಧಚಕ್ರವರ್ತಿಯಾ ೫೩೫

ಆ ದೇವಾಲಯದೊಳ್ ಸತಿ
ಕಾದಲನ ನಿಮಿರ್ದ ತೊಡೆಯ ಮೇಲೆ ಬಟಲ್ದು
ತ್ಯಾದರದಿಂ ಕಣ್ಗಿಯ್ದಳ್
[ಸಾಧ್ವಿಯ]ನೊಂದಧ್ವಖೇದವೇಂ ಕೇವಳಮೋ ೫೩೬

ವ॥ ಅಂತು ದಮಯಂತಿ ನಿದ್ರೆಯಿನಿರೆ

ಕಮಲಪ್ರಿಯನಾದ ಸೂರ್ಯನು ಪಡುವಣಕಡಲಲ್ಲಿ ಇಳಿದನು. ೫೩೪. ಹೊಸ ಮಿಂಚುಹುಳುಗಳು ಪೊದೆ, ಗಿಡಗಳ ಸಮೂಹದಲ್ಲಿ ಹಿತವಾಗಿ ತೋರಲು, ಕಟ್ಟಿಗೆಯ ಉರಿಗಳು ಕಾಡನ್ನು ಬೆಳಗಲು, ನರಿಗಳ ಘನವಾದ ಶಬ್ದವು ಅಲ್ಲಲ್ಲಿಯೇ ಹೆಚ್ಚಲು, ಗೂಗೆಗಳ ಗುಂಪು ಕೂಗುತ್ತ ಹಾಡಲು, ಕತ್ತಲೆಯ ರಾಶಿಯು ಅಧಿಕವಾಗಲು, ಜಗತ್ತಿನ ಕಣ್ಣೆನಂತಿರುವ ಸೂರ್ಯನ ನಿದ್ರೆಯ ಎಡೆಯಾದ ಆ ರಾತ್ರಿಯು ಮೇರೆ ಮೀರಿರಲು, ನೃಪಶ್ರೇಷ್ಠನು ಒಂದು ಆಶ್ರಯಸ್ಥಾನದತ್ತ ಸಾರಿದನು. ವ॥ ಅದು ಹೇಗೆಂದರೆ, ೫೩೫. ಕಟ್ಟೆ ಕೆಡವಿ, ಗೋಡೆಗಳು ಅರ್ಧಮರ್ಧ ಉರುಳಿ,.....ಶಿಥಿಲವಾಗಿ, ಉದುರಿ ಬಿದ್ದಿದ್ದ ಜಂಬಿಟ್ಟಿಗೆಯ ಕಂಬವು ಒಂದು ಕಡೆಗೆ ಹೊರಳಿ ಈಗಲೀಗಲೆ ಬೀಳುವಂತಿದ್ದು, ಎಷ್ಟೇ ಕೆಟ್ಟರೂ ದಾರಿಹೋಕರು ಇಲ್ಲಿರಲಾರರು ಎಂಬ ಹಳೆಯ ದೇವಾಲಯವೊಂದು ಆ ಕೂಡಲೆ ನಳಮಹಾರಾಜನ ಎದುರಿನಲ್ಲಿ ಕಣ್ಣಿಗೆ ಕಾಡುಬಂದಿತು. ೫೩೬. ಹೆಂಡತಿಯಾದ ದಮಯಂತಿ ಆಯಾಸಗೊಂಡು ಆ ದೇವರ ಗುಡಿಯಲ್ಲಿ, ಪ್ರಿಯನ ದೊಡ್ಡದಾದ ತೊಡೆಯ ಮೇಲೆ ಅತಿಪ್ರೀತಿಯಿಂದ ಕಣ್ಮುಚ್ಚಿ ನಿದ್ರೆಮಾಡಿದಳು. ಪತಿವ್ರತೆಯಾದವಳ ನೊಂದ ಮಾರ್ಗಾಯಾಸದ ವ್ಯಥೆಯು ಕೇವಲವಾದುದೇ ? ವ॥ ಹಾಗೆ ದಮಯಂತಿ

ನಟ್ಟಿರುಳೆರ್ದೊರ್ವ[ನೆ] ಮು
ನ್ನುಟ್ಟುದನೆರಡಾಗಿ ಕೊಯ್ದು ಮೆಲ್ಲನೆ ಸತಿಗೊಂ
ದಿಟ್ಟಿಗೆಯಂ ತಲೆಗಿಂಬೆನೆ
ಕೊಟ್ಟಡವಿಯೊಳವನಿಪಾಲನೊರ್ವನೆ ತಳರ್ದಂ ೫೩೭

ವ॥ ಅಂತು ತಳರ್ದು

ಪೋಗಿ ಮರಳ್ವ ನಿಂದು ಬಿಸುಸುಯ್ವ ಮಗುಟ್ದಿಡೆಯಾಡಿಯಾಡಿ ಕಾಂ
ತಾಗುಣಜಾಳಮಂ ನೆನೆವ ಯಾತ್ರೆಗೆ ಪತ್ತಡಿಯಿಟ್ಟು ಕೂರ್ತು ಮ
ತ್ತಾಗಳೆ ಬಂದು ನಾರಿಯ ಮುಖಾಬ್ಜವನೀಕ್ಷಿಪ ಬಂಧನಕ್ಕೆ ಬೆಂ
ಡಾಗಿ ನಿತಾಂತವಿಹ್ವಳತೆಯಂ ತಳೆದಿರ್ದನಿಳಾಧಿನಾಯಕಂ ೫೩೮

ಮಾನಿನಿಯಾಸೆಯಂ ತೊಱೆದು ಪೌರುಷಮಂ ಮಱೆದುಗ್ರ ಭೀಕರ
ಧ್ವಾನದನೇಕ ದುಷ್ಟಮೃಗಬಾಧೆಗೆ ಬೆರ್ಚದೆ ಮಧ್ಯರಾತ್ರಿಯೊಳ್
ಮೋನದೊಳುರ್ವರಾಧಿಪತಿಯೊರ್ವನೆ ಕಾನನಮಾರ್ಗದೊಳ್ ಮನೋ
ಗ್ಲಾನಿಯನೆಯ್ದಿ ಪೋದನೆಡೆಗೆಯ್ಯದೆ ನಿಲ್ಲದೆ ಮುಂಬಗಲ್ವರಂ ೫೩೯

ಕಾಂತಾರಾಗಮನುಱಿದತಿ
ಕಾಂತಾರಾಗದೊಳೆ (?) ನಡೆದು ನರಪತಿ ಸತತಂ

ನಿದ್ರೆ ಮಾಡುತ್ತಿರಲು, ೫೩೭. ನಡುರಾತ್ರಿಯಲ್ಲಿ ಒಬ್ಬನೇ ಎದ್ದು, ಈ ಮೊದಲು ತಾನು ಉಟ್ಟಿದ್ದ ಬಟ್ಟೆಯನ್ನು ಎರಡು ಸೀಳುಗಳನ್ನಾಗಿ ಹರಿದು, ಮೆಲ್ಲನೆ ಹೆಂಡತಿಯ ತಲೆಯಡಿಯಲ್ಲಿ ಇಟ್ಟಿಗೆಯೊಂದನ್ನು ಇಟ್ಟು, ಭೂಪಾಲಕನು ಅಡವಿಯಲ್ಲಿ ಒಬ್ಬನೇ ಹೊರಟನು. ವ॥ ಹಾಗೆ ಹೊರಟು, ೫೩೮. ಹೊರಟು ಹಿಂತಿರುಗುವ, ನಿಂತು ನಿಟ್ಟುಸಿರಿಡುವ, ಪುನಃ ಅಲೆದಲೆದು ಹೆಂಡತಿಯ ಗುಣಸಮೂಹವನ್ನು ಸ್ಮರಿಸುವ, ಯಾತ್ರೆಗೆ ಹತ್ತು ಹೆಜ್ಜೆಗಳನ್ನಿಟ್ಟು ಪುನಃ ಆಗಲೆ ಬಂದು ಹೆಂಡತಿಯ ಮುಖಕಮಲವನ್ನು ನೋಡುವ, ಸೆರೆಸಿಕ್ಕಿ ಶಕ್ತಿಗುಂದಿ ಭೂಪಾಲಕನು ಸರ್ವದಾ ತಳಮಳವನ್ನು ಹೊಂದಿದ್ದನು. ೫೩೯. ಹೆಂಡತಿಯ ಆಸೆಯನ್ನು ಬಿಟ್ಟು, ಪರಾಕ್ರಮವನ್ನು ಮರೆತು, ಭಯಂಕರವೂ ಘೋರವೂ ಆದ ದಾರಿಯ ನಾನಾ ದುಷ್ಟಮೃಗಗಳ ಹಿಂಸೆಗೆ ಹೆದರದೆ, ನಟ್ಟಿರುಳಿನಲ್ಲಿ ಮೌನದಿಂದ ಭೂಪಾಲಕನು ಚಿತ್ತಗ್ಲಾನವನ್ನು ಹೊಂದಿ, ಅಡವಿಯ ದಾರಿಯಲ್ಲಿ ಮುಂಜಾನೆಯ ತನಕ ಏಕಾಂಗಿಯಾಗಿ, ಎಡೆಬಿಡದೆ ನಿಲ್ಲದೆ ಹೊರಟನು. ೫೪೦. ಮಹಾರಾಜನು ಹೆಂಡತಿಯ ಮೇಲಿನ ಪ್ರೇಮವನ್ನು ಬಿಟ್ಟು, ನಿಬಿಡವಾದ ಅಡವಿಯಲ್ಲಿ ಆ ಕೂಡಲೆ ನಡೆದು, ಸರ್ವದಾ ನೆಮ್ಮದಿಯ ಮನಸ್ಸುಳ್ಳಾತನು ನಿಷಧ ದೇಶದ ಗಡಿಯನ್ನು ಸಾರಲೆಂದು ಎಡೆಬಿಡದೆ ನಡೆದನು. (ಈ ಪದ್ಯದಲ್ಲಿ ಪ್ರಯೋಗ

ಶಾಂತಮನಂ ನೈಷಧದೇ
ಶಾಂತಮನಂದೆಯ್ದಲೆಂದು ತಡೆಯದೆ ನಡೆದಂ ೫೮೦

ವ॥ ಇತ್ತಲ್ ಕಿಱದುಬೇಗದೊಳ್ ದಮಯಂತಿಯ ನಿದ್ರೆ ತಿಳಿಯೆ

ಒದವಿದ ನಿದ್ರೆಯೋಸರಿಸೆ ತನ್ನಧಿನಾಥನನಾರ್ತೆ ನೋಡಿ ಕಾ
ಣದೆ ಬಿಸುಸುಯ್ದು ಮೆಯ್ಮಱೆದು ಸ್ವೈವೆಱಗಾಗಿ ಶರಾರುಭೀತಿಯಿಂ
ಪದವಿಡಲಂಜಿ ಪಾಡೞಿದು ಪೋದಪೆನೆಲ್ಲಿಗೆಲೇ ವಿಧಾತ್ರ ಮ
ನ್ಮುದವಿನಿತಾಯ್ತೆನುತ್ತೊಱಲಿ ಬಾಯೞಿದಳ್ ದಮಯಂತಿ ಚಿಂತೆಯಿಂ ೫೮೧

ಭೂಪತಿಯೆನ್ನೊಳಿಲ್ಲದಪರಾಧವನುಕ್ಕೆವದಿಂ ನಿಜೇಚ್ಛೆಗಾ
ರೋಪಿಸಿ ಮಧ್ಯರಾತ್ರಿಯೊಳರಣ್ಯದೊಳೊರ್ವಳನೀ ಪ್ರಕಾರದಿಂ
ಶ್ವಾಪದರಾಜಿಗೊಪ್ಪಿಸಿಯದೆಲ್ಲಿಗೆ ಪೋದ[ನೋಯೆ]ಂದು ಚಿತ್ತಸಂ
ತಾಪವಿಷಾದದಿಂದಬಲೆ ಚಿಂತಿಸುತಿರ್ದಳತಿಪ್ರಲಾಪದಿಂ ೫೮೨

ಪತಿಯಂ ಕಾಣದೆ ಕಾಂತೆ ಹಂಬಲಿಸಿದಳ್ ಬೆಂಬಿರ್ದಳತ್ಯಂತ ದುಃ
ಖಿತೆಯಾದಳ್ ಮತಿಗುಂದಿದಳ್ ಕ[ರ]ಗಿದಳ್ ಬಾಯಾಱಿದಳ್ ತಾಱಿದಳ್
ಧೃತಿಗೆಟ್ಟಳ್ ಮರವಟ್ಟಳೆಯ್ದೆ ಸೆಡೆದಳ್ ಸುಯ್ದಳ್ ಸುರುಳ್ದಳ್ ಭಯಾ
ನ್ವಿತೆಯಾದಳ್ ಬಡವಾದಳಶ್ರುಜಲದಿಂದೋಲಾಡಿದಳ್ ಬಾಡಿದಳ್ ೫೮೩

ವಾಗಿರುವ 'ಕಾಂತಾರಾಗಮಮಂ' ಮತ್ತು 'ಕಾಂತಾರಾಗದೊಳ್' ಎಂಬ ಎರಡು ಪದಗಳಲ್ಲಿಯೂ, 'ಶಾಂತಮನಂ ಮತ್ತು ದೇಶಾಂತಮನಂದು' ಎಂಬ ಎರಡು ಪದಗಳಲ್ಲಿಯೂ ಕಂಡುಬರುವ ಯಮಕಾಲಂಕಾರದ ಸ್ವಾರಸ್ಯವನ್ನು ಗಮನಿಸತಕ್ಕದು). ವ॥ ಈ ಕಡೆ ಸ್ವಲ್ಪ ಹೊತ್ತಿನೊಳಗಾಗಿ ದಮಯಂತಿಯ ನಿದ್ರೆ ಮುಗಿಯಲು, ೫೮೧. ಸಂಭವಿಸಿದ್ದ ನಿದ್ರೆ ಸರಿಯಲು, ತನ್ನ ಒಡೆಯನನ್ನು ಆಶಿಸಿ ನೋಡಿ ಕಾಣದೆ ನಿಟ್ಟುಸಿರುಬಿಟ್ಟು, ಮೈಮರೆತು, ಬೆರಗಾಗಿ ಆಘಾತದ ಭೀತಿಯಿಂದ ಹೆಜ್ಜೆಯಿಡಲು ಅಳುಕಿ ಪಾಡುಗೆಟ್ಟು 'ಎಲೈ ವಿಧಾತೃ ! ಎಲ್ಲಿಗೆ ಹೋಗಲಿ ? ನನ್ನಸಂತೋಷ ಹೀಗಾಯಿತೆ ?' ಎಂಬುದಾಗಿ ದಮಯಂತಿ ಚಿಂತೆಯಿಂದ ಅರಚುತ್ತ ಹಂಬಲಿಸಿದಳು. ೫೮೨. ಮಹಾರಾಜನು ನನ್ನಲ್ಲಿ ಇಲ್ಲದ ಅಪರಾಧವನ್ನು ಮೋಸದಿಂದ ತನ್ನ ಇಚ್ಛೆಗೆ ಆರೋಪಿಸಿಕೊಂಡು, ನಟ್ಟಿರುಳಿನಲ್ಲಿ ಕಾಡಿನಲ್ಲಿ ಒಬ್ಬಳನ್ನೇ ಈ ರೀತಿಯಲ್ಲಿ ಕ್ರೂರ ಮೃಗಗಳ ಪಂಕ್ತಿಗೆ ಒಪ್ಪಿಸಿ ಅದೆಲ್ಲಿ ಹೋದನೋ ಎಂದು ಮನಸ್ಸಿನ ವ್ಯಥೆಯ ವಿಷಾದದಿಂದ ತರಳೆ ಬಹಳ ಗೋಳಿಡುತ್ತ ಚಿಂತಿಸುತ್ತಿದ್ದಳು. ೫೮೩. ಆ ಹೆಂಡತಿ (ದಮಯಂತಿ) ಗಂಡನನ್ನು ಕಾಣದೆ ಹಂಬಲಿಸಿದಳು, ಬೆನ್ನಟ್ಟಿದಳು, ಬಹಳ ದುಃಖಿಗೊಂಡಳು, ಬುದ್ಧಿಹೀನಳಾದಳು, ಕರಗಿದಳು, ಬಾಯೊಣಗಿದಂತಾದಳು, ಕೃಶವಾದಳು, ಧೈರ್ಯಗೆಟ್ಟಳು, ಎಚ್ಚರದಪ್ಪಿದಳು, ಹೆದರಿದಳು, ನಿಟ್ಟುಸಿರನ್ನು ಬಿಟ್ಟಳು, ಕುಗ್ಗಿದಳು, ಭಯಗೊಂಡಳು, ಬಡವಾದಳು, ಕಣ್ಣೀರಿನಲ್ಲಿ

ವಲ್ಲಭ ನಿನಗೇಗೆಯ್ದೆಂ
ಪೊಲ್ಲಮೆಯುಂ ನಿದ್ರೆಗೆಯ್ಸಿ ಘೋರಾಟವಿಯೊಳ್
ಭಲ್ಲ ವ್ಯಾಘ್ರಕ್ಕೊಪ್ಪಿಸಿ
ಕಲ್ಲೆರ್ದೆಯಿಂ ತನ್ನನುಳಿದು ಪೋಪುದು ಗುಣವೇ ೫೫೫

ಕ್ಷಿತಿಯೇ ವಾಸವಲಕ್ಷ್ಮಿಯೇ ಗಗನವೇ ದಾವಾಗ್ನಿಯೇ ದ್ವಿಗಧೂ
ತತಿಯೇ ಮಂದಸಮೀರನೇ ಮದನನೇ ಭೂಜಾಳಿಯೇ ಶೈಲವೇ
ಲತೆಯೇ ಪಲ್ಲವಪಂಕ್ತಿಯೇ ಕುಸುಮವೇ ನಾನಾಮೃಗಶ್ರೇಣಿಯೇ
ಪತಿಯಂ ತೋರಿಸಿಮೆಂದು ಸುಂದರಿ ಕರಂ ಬೆಂಬಿರ್ದು ಬಾಯಾರ್ದಳ್ ೫೫೬

ಜನಿಸಿದೆನೇಕೆ ನಾರಿವೆಸರಾಯ್ತೆನಗೇಕೆ ನೆಗಟ್ದುದೇಕೆ ಯೌ
ವನವವನೀಶನಂ ಬಯಸಲೇಕೆ ಮನಂ ಕಳಹಂಸೆಯಿಬ್ಬರಂ
ನೆನೆದೊಡಗೂಡಲೇಕಕಟ ಸೋಲಲದೇಕೆ ಸಮಸ್ತ ರಾಜ್ಯಮಂ
ವನದೊಳಧೀಶನೆನ್ನನುಳಿದೇಕೆಯುಗಲ್ದನಿದೆನ್ನ ದುಷ್ಕೃತಂ ೫೫೭

ಸುದತೀಜನನಂ ಪ್ರಾರ
ಬ್ಧದಿನಾದೊಡವೇಂ ವಿಧಾತ್ರನೆನಗೊಬ್ಬಳ್ಗಂ
ಮುದದಿಂ ಸ್ವೇಚ್ಛಾಮರಣ
ಪ್ರದನೆನಿಸಿದೊಡೀಯವಸ್ಥೆಗೊಳಗಾದಪೆನೇ ೫೫೮

ಮುಳುಗಾಡಿದಳು, ಬಾಡಿದಳು. ೫೫೫. ಎಲೈ ಒಡೆಯನೆ ! ನಿನಗೆ ಏನು ಕೇಡನ್ನು ಬಗೆದೆ ? ಈ ಘೋರಾರಣ್ಯದಲ್ಲಿ ನಿದ್ರೆ ಮಾಡಿಸಿ, ಕರಡಿ, ಹುಲಿಗಳಿಗೆ ಒಪ್ಪಿಸಿ ಕೊಟ್ಟು; ಕಠಿನ ಹೃದಯದಿಂದ ನನ್ನನ್ನು ಬಿಟ್ಟುಹೋಗುವುದು ಸಾಧುವೇ ? ೫೫೬. ಭೂಮಿಯೇ, ಸ್ವರ್ಗಲಕ್ಷ್ಮಿಯೇ, ಆಕಾಶವೇ, ದಾವಾಗ್ನಿಯೇ, ದಿಗಂಗನೆಯರ ಸಮೂಹವೇ, ಮಂದಮಾರುತನೇ, ಮನ್ಮಥನೇ, ವೃಕ್ಷಸಮೂಹವೇ, ಪರ್ವತವೇ, ಬಳ್ಳಿಯೇ, ಚಿಗುರಿನ ಸಮೂಹವೇ, ಹೂವೇ, ಬಗೆಬಗೆಯ ಮೃಗಪಂಕ್ತಿಗಳೇ ಗಂಡನನ್ನು ತೋರಿಸಿರಿ ಎಂದು ರೂಪವತಿ ವಿಶೇಷವಾಗಿ ಹಿಂಬಾಲಿಸಿ ಮೊರೆಯಿಟ್ಟಳು. ೫೫೭. ಏಕೆ ಹುಟ್ಟಿದೆನೋ, ನನಗೇಕೆ ಹೆಂಗಸಿನ ಹೆಸರಾಯಿತೋ, ಏಕೆ ಪ್ರಾಯವು ಸಂಭವಿಸಿತೋ, ಮನಸ್ಸು ಮಹಾರಾಜನನ್ನು ಏಕೆ ಬಯಸಿತೋ, ಕಳಹಂಸೆ ಇಬ್ಬರನ್ನೂ ಸ್ಮರಿಸಿ ಏಕೆ ಒಡಗೂಡಿಸಿತೋ, ಅಯ್ಯೋ, ಸಮಸ್ತ ರಾಜ್ಯವನ್ನೂ ಏಕೆ ಸೋಲಬೇಕಾಯಿತೋ, ಒಡೆಯನು ಕಾಡಿನಲ್ಲಿ ನನ್ನನ್ನು ಬಿಟ್ಟು ಏಕೆ ಅಗಲಿದನೋ ಇದು ನನ್ನ ದುರದೃಷ್ಟವೇ ಸರಿ. ೫೫೮. ಪ್ರಾರಬ್ಧಕರ್ಮದಿಂದ ಹೆಂಗಸಿನ ಜನನವು ಆದರೇನು ? ಬ್ರಹ್ಮನು ನನಗೊಬ್ಬಳಿಗೇ ಸಂತೋಷದಿಂದ ಸ್ವೇಚ್ಛಾಮರಣವನ್ನು ನೀಡಬಲ್ಲವನಾಗಿದ್ದರೆ ಈ

ದುಷ್ಟಮೃಗಸಮಿತಿ ನೋಡಲ
ವಷ್ಟಂಭಿಸಿ ಮಚ್ಛರೀರಮಾಂಸಾಶನದಿಂ
ತುಷ್ಟಿಯನೆಯ್ದುವುದೆನ್ನೊಳ
ಭೀಷ್ಟಂ ಮೆಯ್ದೋಜಿಪೇಕೆ ಭಲ್ಲವ್ಯಾಘ್ರಂ ೫೪೮

ನೆನೆದಾಗಳ್ ಜೀವಂ ಭೋಂ
ಕೆನೆ ಪೋಪಂತೋದು ಪರಪನನುನಯದಿಂ ಕಾ
ಲನೊಳಂದು ಬೇಡದಾಂ ಕಿ
ಪ್ಮನೆ ಕಳಿಪಿದೆನೇಕೆ ಮಱೆದು ಯೌವನಮದದಿಂ ೫೪೯

ನಲ್ಲರ ಕೂರ್ಪೆ ಜೀವನ(ನಾ ?)ಮೃತಂ ಮಣಿಭೂಷಣವಿಷ್ಟಸಂಪದಂ
ನಲ್ಲರಗಲ್ಕೆ ದಳ್ಳುರಿ ಸಿಡಿಲ್ ಗರಳಂ ಮರಣಂ ದಿಟಕ್ಕೆ ತಾ
ನಲ್ಲದೆ ತಂದೆಗಿರ್ತೆಜನನೆನ್ನ ಸುಖಾಸುಖದಲ್ಲಿ ಬಾಟ್ಕೆಯಿ
ನ್ನೆಲ್ಲಿಯದೆಂದು ಚಿಂತಿಸಿ ಪಲುಂಬಿದಳಂಗನೆ ತದ್ವನಾಂತದೊಳ್ ೫೫೦

ಸಮುಚಿತ ಯಾನಮಂ ನಯಮನೀಕ್ಷಣಮಂ ಮೃದುಳತ್ವಮಂ ಮಹ
ತ್ವಮನೆಡೆಯಾಟದಿಂ ಭುಜದಿನಕ್ಷಿಗಳಿಂದಧರೋಷ್ಠದಿಂ ಕುಚಾ

ಸ್ಥಿತಿಗೆ ಒಳಗಾಗುತ್ತಿದ್ದೇನೆ ? ೫೪೮. ವಿಚಾರಿಸಿ ನೋಡಲು, ಕ್ರೂರಮೃಗಸಮೂಹವು ನೆಲೆಗೊಂಡು ನನ್ನ ಶರೀರದ ಮಾಂಸವನ್ನು ತಿನ್ನುವುದರ ಮೂಲಕ ಸಂತೃಪ್ತವಾಗಲೆಂದು ನನ್ನ ಆಶೆ, (ಆದರೆ) ಕರಡಿಗಳಾಗಲಿ, ಹುಲಿಗಳಾಗಲಿ ಅದೇಕೆ ತೋರಿಬರುವುದಿಲ್ಲವೋ ? ೫೪೯. ನೆನೆದೊಡನೆಯೇ ಕೂಡಲೆ ಪ್ರಾಣವು ಹೋಗುವಂತೆ ಪ್ರೀತಿಯಿಂದ ಯಮನನ್ನು ಅಂದು ಬೇಡದೆ, ಪ್ರಾಯದ ಮದದಿಂದ ಮರೆತು ನಾನು ಏಕೆ ಸುಮ್ಮನೆ ಕಳುಹಿಸಿದೆನೋ ? ೫೫೦. ಪ್ರಿಯರ ಪ್ರೇಮವೇ ಜೀವನಕ್ಕೆ ಅಮೃತ, ಮಣಿಖಚಿತವಾದ ಒಡವೆಗಳು, ಇಷ್ಟ ಸಂಪತ್ತು, ಪ್ರಿಯರ ಅಗಲಿಕೆಯಾದರೋ ದಾವಾಗ್ನಿ, ಸಿಡಿಲು, ವಿಷ, ವಾಸ್ತವವಾಗಿ ಮರಣವೇ ಸರಿ. ಹಾಗಲ್ಲದೆ, ನನ್ನ ಸುಖ ದುಃಖಗಳಿಂದ ಕೂಡಿದ ಈ ಎರಡು ರೀತಿ ಗಳಿಂದ ತಂದೆಗೆ ಇನ್ನೆಲ್ಲಿಯ ಒದುಕು ? ಎಂಬುದಾಗಿ ನವೆಯುತ್ತ, ಆ ಹೆಂಗಸು ಅರಣ್ಯ ಮಧ್ಯದಲ್ಲಿ ಹಲುಬಿದಳು. ೫೫೧. ಅಲೆದಾಟದಿಂದಲೂ, ಭುಜದಿಂದಲೂ, ಕಣ್ಣು ಗಳಿಂದಲೂ, ಕೆಳದುಟಿಗಳಿಂದಲೂ, ಮೊಲೆಗಳ ತುತ್ತತುದಿಯಿಂದಲೂ, ಯುಕ್ತವಾದ ವಾಹನವನ್ನೂ, ರಾಜನೀತಿಯನ್ನೂ (?), ನೋಟವನ್ನೂ, ಮಾರ್ದವವನ್ನೂ ಮಹಿಮೆ ಯನ್ನೂ, (ಅನುಕ್ರಮವಾಗಿ) ನಡುನಡುಗಿಸುತ್ತ, ಗೆದ್ದ ಹಗೆಯನ್ನು ಅರಣ್ಯ, ಆನೆ,

ದ್ರುಮದಿನದಿರ್ಪ ಗೆಲ್ದ ಪಗೆಯುಂ ವನಹಸ್ತಿಲಸಲ್ಲತಾಮೃಗ
ದ್ರುಮಗಿರಿಸಂಕುಳಂ ಸೆರೆಯೊಳಿಟ್ಟವೊಲಿರ್ದಳತೀವಖೇದದಿಂ ೫೫೧

ಬಾಲೆಯ [ತನ್ನ] ನಂಬಿಪವಳಾ ಬಲಹೀನೆಯನೀಯರಣ್ಯ ಘೋ
ರಾಲಯದಲ್ಲಿ ಬಿಟ್ಟು ಪೆಱಪಿಂಗುವ ನಿಃಕೃಪೆಯೆಂತು ಮೇದಿನೀ
ಪಾಲನೊಳಾಯ್ತೊ ಸದ್ಗುಣಗಣಂಗಳವಂತಿರಲೆನ್ನರಾದೊಡಂ
ಕಾಲವಶಂ ಸ್ವರೂಪಸುಚರಿತ್ರದಯಾಸ್ಥಿತಿಯೊರ್ವರಿಚ್ಛೆಯೇ ೫.೫೨

ಎನ್ನನರಣ್ಯದೊಳ್ ಬಿಸುಟು ನಟ್ಟಿರುಳೆರ್ದು ಮಗುಳ್ದ[ನೋ] ಪಣ
ಕ್ಕೆನ್ನಳ ಸಂಗವಂ ಬಯಸಿ ಪೋದನೊ ತತ್ಸತಿಯಾವಪುಣ್ಯಸಂ
ಪನ್ನೆಯೊ ವಲ್ಲಭಂ ತೊಲಗದಿರ್ಪವೊಲಾಂ ದ್ವಿಜದೇವಪೂಜೆಯುಂ
ಮುನ್ನೆಸಗಿತ್ತುದಿಲ್ಲ ದೊರೆಕೊಂಬುದೆ ಸೌಖ್ಯಸಮೃದ್ಧಿ ಚಿಂತೆಯಿಂ ೫೫೩

ಪ್ರಾಣಾಧಿನಾಥನೆಂಬುದು
ಕಾಣಲ್ ಪುಸಿಯಾಯ್ತು ನೃಪತಿ ನಿನ್ನೊಡನೆನ್ನೀ
ಪ್ರಾಣವನೊಯ್ಯದೆ ದುಷ್ಟ
ಪ್ರಾಣಿಚಯಕ್ಕೆನ್ನನಿರಿಸಿ ಪೋಪುದು ಗುಣವೇ ೫೫೪

ಹೊಳೆಹೊಳೆಯುವ ಬಳ್ಳಿ, ಮೃಗಗಳು, ಮರ ಬೆಟ್ಟಗಳ ಸಮೂಹವು ಸೆರೆಯಲ್ಲಿಟ್ಟಂತೆ ತುಂಬ ದುಃಖದಿಂದಿದ್ದಳು, (ಈ ಪದ್ಯದ ಪೂರ್ವಾರ್ಧದಲ್ಲಿ ಯಥಾಸಂಖ್ಯಾಲಂಕಾರ ಪ್ರಯೋಗವನ್ನು ಗಮನಿಸತಕ್ಕದು.) ೫೫೨. ತನ್ನನ್ನೇ ನಂಬಿದ್ದ ಬಾಲೆಯನ್ನು, ಅಬಲೆಯನ್ನು, ಕಾಡೆಂಬ ಭಯಂಕರವಾದ ಎಡೆಯಲ್ಲಿ ಬಿಟ್ಟು ಹಿಂದುಳಿಯುವ ನಿಷ್ಕರುಣೆಯು ಭೂಪಾಲಕನಲ್ಲಿ ಹೇಗೆ ಉಂಟಾಯಿತೋ ? ಸದ್ಗುಣಗಳ ಸಮೂಹವು ಹೀಗಿರಲು, ಎಂಥವರಿಗಾದರೂ ಸ್ವರೂಪ, ಸಚ್ಚಾರಿತ್ರ, ದಯಾಸ್ವಭಾವಗಳು ಕಾಲವಶವಲ್ಲದೆ ಇನ್ನೊಬ್ಬರ ಇಚ್ಛೆಯೇ ? ೫೫೩. ನನ್ನನ್ನು ಕಾಡಿನಲ್ಲಿ ದೂಡಿ, ನಟ್ಟಿರುಳಿನಲ್ಲಿ ಎದ್ದು ಹಿಂತಿರುಗಿದನೋ, ಹಣಕ್ಕಾಗಿ ನನ್ನಂಥವಳ ಸ್ನೇಹವನ್ನು ಬಯಸಿ ಹೋದನೋ ಆ ಹೆಂಗಸು ಎಷ್ಟು ಪುಣ್ಯವಂತಳೋ ? ಒಡೆಯನು ಅಗಲದಿರುವಂತೆ ನಾನು ಬ್ರಾಹ್ಮಣ, ದೇವರ ಪೂಜೆಗಳನ್ನು ಈ ಮೊದಲು ಮಾಡಲಿಲ್ಲ. ಚಿಂತೆಯಿಂದ ಸೌಖ್ಯ ಸಮೃದ್ಧಿಗಳು ಪ್ರಾಪ್ತವಾಗುತ್ತವೆಯೆ ? ೫೫೪. ಎಲೈ ಮಹಾರಾಜನೆ ಪ್ರಾಣೇಶನೆಂಬುವ ಮಾತು ನೋಡಲು ಸುಳ್ಳಾಯಿತು. ನಿನ್ನೊಂದಿಗೇ ಈ ಪ್ರಾಣವನ್ನು ಕೊಂಡೊಯ್ಯದೆ, ಕ್ರೂರಮೃಗಗಳ ಸಮೂಹಕ್ಕೆ ನನ್ನನ್ನು ಇರಿಸಿಹೋಗುವುದು

ವ॥ ಅನಂತರಂ

ನೀನೇ ಗತಿ ನೀನೇ ಗತಿ
ನೀನೇ ಗತಿಯೆಂದು ತನ್ನ ಪತಿಯಂ ನೆನೆವು
ತ್ತಾ ನೀಳಕುಟಿಲಕುಂತಳೆ
ಕಾನನದಿಂ ಮೆಲ್ಲನೊಂದು ದೆಸೆಗಡಿಯಿಟ್ಟಳ್ ೫೫೫

ವ॥ ಅಂತು ಪೋಪಾಗಳ್
ವನಮಧ್ಯದೊಳನುಪಮ ಯೌ
ವನಮಧ್ಯಮನೋಹರಾಂಗಿಯಂ ಕಂಡಾಗಳ್
ವನಚರನೊರ್ವಂ ತತ್ಪಾ
ವನಚರಣಕ್ಕೆಱಗಿ ದಳಿಪಲುದ್ಯತನಾದಂ ೫೫೬

ಅತಿ ಶೀರ್ಣಶ್ಮಶ್ರು ಗುಂಜಾಭರಣವರುಣನೇತ್ರಂ ಧನುಃಪಾಣಿ ಮೇಘ
ದ್ಯುತಿದೇಹಂ ಮಾಂಸಗಂಧಾವಯವನಶನಿರೋಮಂ ಶಿಖಂಡೋತ್ತಮಾಂಗಂ
ಸಿತದಂತಂ ಕರ್ಕಶೋಕ್ತಿಪ್ರಕುಪಿತ ಮುಖಸಂರಂಭವತ್ಯಂತ ರೌದ್ರಾ
ಕೃತಿ ಚಿತ್ತಾಭೀಳವಂ ಪುಟ್ಟಿಸಲಗತಟದಿಂ ಬಂದನೊರ್ವಂ ಪುಳಿಂದಂ ೫೫೭

ವ॥ ಆಗಳ್

ನಿನ್ನ ಪತಿವ್ರತಾಚರಣಮಂ ಕಿಡಿಸಲ್ ಬಗೆದಂದಮಂ ನಿತಾಂ
ತಂ ನವವಹ್ನಿಗಾಕ್ಷಣದೊಳಾಹುತಿಯಾದಪನೆಂಬನುಗ್ರಹಂ

ಗುಣವೇ ? ವ॥ ಆ ಬಳಿಕ ೫೫೫. 'ನೀನೇ ಗತಿ, ನೀನೇ ಗತಿ, ನೀನೇ ಗತಿ' ಎಂಬುದಾಗಿ ಗಂಡನನ್ನು ಸ್ಮರಿಸುತ್ತ ಕಪ್ಪಾದ ಗುಂಗುರುಕೂದಲುಳ್ಳ ಆಕೆ ಅರಣ್ಯದಿಂದ ಮೆಲ್ಲನೆ ಒಂದು ದಿಕ್ಕಿಗೆ ಅಭಿಮುಖವಾಗಿ ಹೆಜ್ಜೆಯಿಟ್ಟಳು. ವ॥ ಹಾಗೆ ಹೋಗುತ್ತ ೫೫೬. ಕಾಡಿನ ನಡುವೆ ಅಸದೃಶವಾದ ನಡುಹರೆಯದ ಸುಂದರಿಯನ್ನು ಒಬ್ಬ ಬೇಡನು ಆಗ ಕಂಡು, ಆಕೆಯ ಪವಿತ್ರವಾದ ಪಾದಗಳಿಗೆ ನಮಸ್ಕರಿಸಿ, ಪಡೆಯಲು (?) ತೊಡಗಿದನು. ೫೫೭. ಬಹಳ ಛಿದ್ರವಾದ ಮೀಸೆ, ಗುಲಗಂಜಿಯ ಒಡವೆ, ಕೆಂಗಣ್ಣುಗಳು, ಬಿಲ್ಲು ಹಿಡಿದ ಕೈ, ಮೋಡದಂತಹ ಕಾಂತಿಯುಳ್ಳ ಶರೀರ, ಮಾಂಸದ ವಾಸನೆಯುಳ್ಳ ಅಂಗಗಳು, ಸಿಡಿಲಿನಂತಹ ಕೂದಲುಗಳು, ಶಿಖೆ (ನವಿಲುಗರಿ) ಯುಳ್ಳ ತಲೆ, ಬಿಳುಪಾದ ಹಲ್ಲು, ಕಠಿನವಾದ ಮಾತುಗಳು, ಕೋಪಗೊಂಡ ಮುಖದ ಸಂಭ್ರಮಗಳುಳ್ಳ ಅತ್ಯಂತ ಭಯಂಕರ ವಾದ ಆಕಾರವು ಮನೋಭೀತಿಯನ್ನು ಉಂಟುಮಾಡಲು, ಬೆಟ್ಟದ ತಡಿಯಿಂದ ಒಬ್ಬ ಬೇಡನು ಬಂದನು. ವ॥ ಆಗ ೫೫೮. ನಿನ್ನ ಪಾತಿವ್ರತ್ಯದ ಆಚರಣೆಯನ್ನು ಕೆಡಿಸಲು ಆಲೋಚಿಸಿದವನು, ಅತ್ಯಧಿಕವಾಗಿ ಹೊಚ್ಚಹೊಸತಾದ ಬೆಂಕಿಗೆ ಆ ಕೂಡಲೆ ಆಹುತಿ

ಮುನ್ನಮಮರೇಂದ್ರ ವಹ್ನಿಯಮವಾರ್ಧಿಪರಿಂ ತನಗಾದ ಲಾಭವಂ
ತನ್ನಯ ಚಿತ್ತದೊಳ್ ಬಗೆದು ನೋಡಿದಳಾಕೆ ಕಿರಾತಧೂರ್ತನಂ ೫೫೮

ವಿಸ್ಮಯಮಪ್ಪಿನಂ ಖಳಪುಳಿಂದನ ನಿಂದ ಮಹತ್ಕಳೇವರಂ
ಭಸ್ಮಮಯಂ ದಲಾಗ್ರ[. .] ತಂನೆನೆಕಂಡನುರಾಗಪೂರ್ಬಿ ಮುಂ
ದಸ್ಮಿತವಕ್ತ್ರಪಂಕಜೆ ಬಟಿಕ್ಕಟವೀಪದದೊಳ್ ನಿಜಾಧಿನಾ
ಥಸ್ಮರಣಪ್ರಜಾಬಲದಿನೊಂದೆಡೆಗೂಡು ತೆರಳ್ದಳಾಕ್ಷಣಂ ೫೫೯

ನಾನಾ ದೇಶದ ಸೆಟ್ಟಿಗುತ್ತರರೆಬರ್ ಭಾಸ್ವದ್ಬಲೀವರ್ದ ಸಂ
ತಾನಂ ತಾಳ್ದಿದ ವಸ್ತ್ರರತ್ನ ವಿಲಸತ್ಕಸ್ತೂರಿ ಕರ್ಪೂರಗಂ
ಧಾನೀಕಂ ಬೆರಸೊಂದು ಸಿಂಧುತಟದೊಳ್ ಬಿಟ್ಟಿರ್ದುದಂ ಕಂಡು ಲ
ಜ್ಜಾನಮ್ರಾನನೆ ಮೆಲ್ಲಮೆಲ್ಲನೊಲವಿಂ ಸಾರ್ದಳ್ ಮನೋಪೇಕ್ಷ್ಯದಿಂ ೫೬೦

ವ॥ ಆ ಸಮಯದೊಳ್

ಕಾಲಂ ಕಾಡಾನೆಯಾದಂದದೊಳಿಭಪತಿಯೊಂದಲ್ಲಿಗೆಯ್ತಂದು ನಾಲ್ಕುಂ
ಕಾಲಿಂ ಶುಂಡಾಗ್ರದಿಂ ದಂತದಿನರೆದು ಸಮಸ್ತ ಪ್ರಜಾಜಾಲಮಂ ತ

ಯಾಗುತ್ತಾನೆ ಎಂಬ ಅನುಗ್ರಹವನ್ನು ಈ ಮೊದಲೇ ದೇವೇಂದ್ರ, ಅಗ್ನಿ, ಯಮ, ವರುಣರಿಂದ (ಪಡೆದು) ತನಗಾದ ಲಾಭವನ್ನು ತನ್ನ ಮನಸ್ಸಿನಲ್ಲಿಯೇ ಭಾವಿಸಿ, ಆಕೆ ನೀಚನಾದ ಬೇಡನನ್ನು ನಿಟ್ಟಿಸಿದಳು. ೫೫೯. ಆಶ್ಚರ್ಯವಾಗುವಂತೆ, ನೀಚನಾದ ಬೇಡನ ನಿಂತ ದೊಡ್ಡ ಶರೀರವು ಬೂದಿಪಾಲಾಯಿತಷ್ಟೆ......(ಅದನ್ನು) ನೋಡಿ ಸಂತೋಷವುಕ್ಕಿ ನಸುನಗೆಯಿಂದ ಕೂಡಿದ ಕಮಲಮುಖಿ ತರುವಾಯ ಅಡವಿಯ ಎಡೆಯಲ್ಲಿ ತನ್ನ ಗಂಡನ ಸ್ಮರಣೆಯೆಂಬ ಪ್ರಜಾಬಲದಿಂದಲೇ ಒಂದು ಸ್ಥಳವನ್ನು ಕೂಡು ಆ ಕೂಡಲೆ ಹೊರಟಳು. ೫೬೦. ನಾನಾ ದೇಶಗಳ ಕೆಲವು ವ್ಯಾಪಾರಿಗಳು, ತೇಜೋಮಯವಾದ ಎತ್ತುಗಳ ಜೋಡಿಗಳು, ಇವು ಹೊತ್ತ ವಸ್ತ್ರ, ರತ್ನ, ಪ್ರಕಾಶಮಾನವಾದ, ಕಸ್ತೂರಿ, ಕರ್ಪೂರಗಂಧದ ಸಮೂಹಗಳಿಂದ ಕೂಡಿ ಒಂದು ನದಿಯ ದಡದಲ್ಲಿ ಬೀಡು ಬಿಟ್ಟಿದ್ದನ್ನು ನೋಡಿ, ನಾಚಿಕೆಯಿಂದ ತಗ್ಗಿಸಿದಂತಹ ಮುಖವುಳ್ಳಾಕೆ ಮನಸ್ಸಿನ ಅಭಿಪ್ರಾಯವನ್ನು ಪ್ರಕಟಿಸುತ್ತ ಮೆಲ್ಲಮೆಲ್ಲಗೆ ಪ್ರೀತಿಯಿಂದ ಸಾರಿ ಬಂದಳು. ವ॥ ಆ ಹೊತ್ತಿನಲ್ಲಿ ೫೬೧. ಕಾಲಪುರುಷನೇ ಕಾಡಾನೆಯಾದನೋ ಎಂಬಂತೆ ಒಂದು ಸಲಗನು ಅಲ್ಲಿಗೆ ಬಂದು ನಾಲ್ಕು ಕಾಲುಗಳಿಂದಲೂ, ಸೊಂಡಿಲಿನ ತುದಿಯಿಂದಲೂ, ಕೋರೆಹಲ್ಲುಗಳಿಂದಲೂ ಸಕಲ ಜನಸಂದಣಿಯನ್ನೂ ಪುಡಿಮಾಡಿ, ಆ ಲೀಲಾಕ್ರೀಡೆ (ಆ ರಕ್ತಪಾತದ ಆಟದಿಂದ ?)ಯಿಂದ ಬಲವಾಗಿ ತಿವಿದು ನಿಲ್ಲಿಸಿ ತಾಳೆಯ

ತ್ರೀಲಾಲಕ್ರೀಡೆಯಿಂದೀಡಿಱಿದು ನಿಲಿಸಿ ತಟ್ಟಿಲ್ಗಳಂ ಕಟ್ಟಿದೆತ್ತಂ
ತೂಲಂಬೊಲ್ ಪಾಱಲೂದಿತ್ತುಱಿದರೆಡಬಲಕ್ಕೋಡೆ ಬಲ್ಕಾಡೊಳಿರ್ದರ್ ೫೬೧

ಈ ಪಾಪಿ ಬಂದ ಕತದಿಂ
ದಾಪತ್ಸಂಭವಿಸಿತಿಲ್ಲಿಗೆಂದರೆಬರ್ ನಾ
ನಾ ಪರುಷವಾಕ್ಯದಿಂ ಜಡಿ
ದಾಪೊತ್ತೇ ನೂಂಕಿದರ್ ಸರೋಜಾನನೆಯಂ ೫೬೨

ಕಲ್ಲೆರ್ದೆಯಾಗಿ ಕಾಂತನ ವಿಯೋಗದ ಬೇಗೆಗೆ ಕಾನನಾಂತರದೊಳ್
ನಿಲ್ಲದೆ ಬಂದೊಡಿಲ್ಲಿಯುಮದಱಿಂ ಮಿಗಿಲಾಪುದು ದುಃಖವಕ್ಕಟ
ನ್ನೆಲ್ಲಿಗೆ ಪೋಪೆನೋ ವಿಧಿಯೆ ದೈವವಿಘಾತಿಯನಾರ್ತು ಮಾಣಿಸಲ್
ಬಲ್ಲವರಾರೆನುತ್ತಬಲೆ ಸೈವೆಱಗಾದಳತೀವ ಖೇದದಿಂ ೫೬೩

ವ॥ ಆನಂತರಂ

ಪೆರ್ಬಟ್ಟೆಯೊಂದಿರಲ್ಕಂ
ದೊರ್ಬಳೆ ಪೋಗುತ್ತಿರಲ್ಕೆ [ಕಂಡು] ಕೆಲಂಬರ್
ಪಾರ್ಬರೊಡವಂದರಿವಳತಿ
ದುರ್ಬಲೆ ಸಾರ್ಚುವೆವನಂತನಿಧಿಪಟ್ಟಣಮಂ ೫೬೪

ಗುಡಿಸಲುಗಳನ್ನು ಕಟ್ಟಿದ್ದ ಎತ್ತುಗಳನ್ನು ಹತ್ತಿಯಂತೆ ಊದಿ ಹಾರಿಸಿತು. ಮಿಕ್ಕವರು ಎಡಬಲಗಳಿಗೆ ಪಲಾಯನ ಮಾಡಲು ನಿಬಿಡವಾದ ಕಾಡಿನಲ್ಲಿದ್ದರು. ೫೬೨. ಈ ಪಾಪಿಷ್ಠೆ ಬಂದ ಕಾರಣದಿಂದ ಇಲ್ಲಿ ವಿಪತ್ತುಂಟಾಯಿತು ಎಂದು ಕೆಲವರು ಬಗೆಬಗೆಯಿಂದ, ಕಠಿನವಾದ ನುಡಿಗಳಿಂದ ಬೈಯುತ್ತ ಆ ಹೊತ್ತೆ ಕಮಲಮುಖಿಯನ್ನು ನೂಕಿದರು. ೫೬೩. ಕಲ್ಲೆದೆಮಾಡಿಕೊಂಡು ಗಂಡನ ಅಗಲಿಕೆಯ ಉದ್ವೇಗದಿಂದ ಕಾಡಿನಲ್ಲಿ ನಿಲ್ಲದೆ ಬಂದರೆ, ಇಲ್ಲಿ ಅದಕ್ಕಿಂತಲೂ ಹೆಚ್ಚಾದ ದುಃಖವೇ ಒದಗಿತು. ಅಯ್ಯೋ! ಇನ್ನೆಲ್ಲಿಗೆ ಹೋಗುವೆನೋ ! ಎಲೈ ವಿಧಿಯೆ, ದೈವದ ಆಘಾತ ವನ್ನು ಎದುರಿಸಿ ನಿವಾರಿಸಲು ಯಾರು ಬಲ್ಲರು ? ಎನ್ನುತ್ತ ಆ ಅಸಹಾಯಕವಾದ ಹೆಂಗಸು ತುಂಬ ದುಃಖದಿಂದ ನಿಬ್ಬೆರಗಾದಳು. ವ॥ ಆ ಬಳಿಕ ೫೬೪. ದೊಡ್ಡ ದಾರಿಯೊಂದಿರಲು, ಅಂದು ಒಬ್ಬಳೇ ಹೋಗುತ್ತಿರಲು, ಕೆಲವು ಬ್ರಾಹ್ಮಣರು ಕಂಡು ಒಡಗೂಡಿ ಬಂದಳು. ಈಕೆ ಅತಿ ದುರ್ಬಲಳು ಅನಂತನಿಧಿ ಪಟ್ಟಣವನ್ನು ಹೋಗಿ

ವ॥ ಎಂದು ಪೋಗುತ್ತಿರೆ

ಕಮಳಭವಾಂಡದಿಕ್ಕೆಯೆನಿಪಂದದೊಳೊಪ್ಪುವನೇಕ ಜಾತಿವ
ರ್ಣಮನೆಡೆಗೊಂಡು ಸರ್ವವಿಷಯೇಂದ್ರಿಯಸಂಪದಸಾರದಿಂದಮು
ತ್ತಮ ವಿಭವಪ್ರಸಿದ್ಧಿಯಿನಿನೇಂದು ಮನೋಹರವೀಥಿಯಿಂ ನೃಪೋ
ತ್ತಮಗೃಹದಿಂದನಂತನಿಧಿಪಟ್ಟಣವಿರ್ದುದನೇಕ ಚಿತ್ರದಿಂ ೫೬೫

ಆ ನಗರಿಯಧಿಪನಖಿಳ ದ
ಯಾನಿಳಯನನಂತಶೇಖರಂ ತದ್ವಧು ಚಂ
ದ್ರಾನನೆ ಗುಣನಿಧಿಯೆಂಬಳ್
ದಾನವಮರ್ದನನ ಸತಿಗೆ ಸರಿದೊರೆಯಾದಳ್ ೫೬೬

ವ॥ ಅಲ್ಲಿ

ಸೈರಂಧ್ರಿಯೆಂಬ ಪೆಸರಿಂ
ವಾರಿಜಮುಖಿ ಭೀಮರಾಜಸುತೆಯಾ ಸ್ಕಂಧಾ
ವಾರವನೊಲವಿಂ ಸಾರ್ದಳ್
ಪ್ರಾರಬ್ಧದ ಬಲೆಯನಟಿವ ಶೂರರುಮೊಳರೇ ೫೬೭

ಆಗಳ್ ಕರೆಸಿದಳತ್ಯನು
ರಾಗದೆ ಗುಣನಿಧಿ ನೃಪಾಗ್ರಮಹಿಷಿ ಮನೋಜ
ಸ್ತ್ರೀಗೆಣೆ ಸತತಂ ನಾನಾ
ಭೋಗಿನಿ ಸೈರಂಧ್ರಿಯಂ ಪುರಂಧ್ರಿಯರಿಂದಂ ೫೬೮

ಸೇರುವೆವು ವ॥ ಎಂದು ಹೋಗುತ್ತಿರಲು ೫೬೫. ಬ್ರಹ್ಮಾಂಡದ ಎಡೆಯೋ ಎಂಬಂತೆ ಒಪ್ಪುವ ನಾನಾ ಬಗೆಯಾದ ಜಾತಿವರ್ಣೀಯರನ್ನು ಒಡಗೊಂಡು, ಎಲ್ಲ ಇಂದ್ರಿಯಾಭಿಲಾಷೆಯ ಸಂಪತ್ತಿನ ಸಾರದಿಂದಲೂ, ಉತ್ತಮ ವೈಭವದ ಪ್ರಖ್ಯಾತಿಯಿಂದಲೂ, ಮನೋಜ್ಞವಾದ ಸೂರ್ಯಚಂದ್ರ ಬೀದಿಗಳಿಂದಲೂ, ರಾಜನ ಶ್ರೇಷ್ಠವಾದ ಅರಮನೆಯಿಂದಲೂ, ವಿವಿಧ ವೈಚಿತ್ರ್ಯಗಳಿಂದಲೂ ಅನಂತನಿಧಿ ಪಟ್ಟಣವಿದ್ದಿತು. ೫೬೬. ಆ ಪಟ್ಟಣದೊಡೆಯ ತುಂಬ ಕರುಣಾನಿಲಯನಾದ ಅನಂತಶೇಖರ ; ಆತನ ಹೆಂಡತಿ ಚಂದ್ರಮುಖಿಯಾದ ಗುಣನಿಧಿಯೆಂಬವಳು. ರಾಕ್ಷಸಸಂಹಾರಿಯಾದ (ಶ್ರೀಕೃಷ್ಣನ ?) ಪತ್ನಿಗೆ ಸರಿಸಮಾನವೆಂಬಂತಿದ್ದಳು. ವ॥ ಅಲ್ಲಿ, ೫೬೭. ಕಮಲಮುಖಿಯಾದ ಭೀಮರಾಜಕುಮಾರಿ (ದಮಯಂತಿ) ಸೈರಂಧ್ರಿಯೆಂಬ ಹೆಸರಿನಿಂದ ಆ ರಾಜಧಾನಿಯನ್ನು ಸೇರಿದಳು ಪ್ರಾರಬ್ಧಕರ್ಮದ ಪಾಶವನ್ನು ನಾಶಮಾಡುವ ಧೀರರು ಇರುವರೆ ? ೫೬೮. ಆಗ, ರತಿಸಮಾನಳೂ, ನಾನಾಭೋಗಪ್ರಿಯಳೂ, ಗುಣವಂತಳೂ ಆದ ರಾಜನ ಪಟ್ಟಮಹಿಷಿ ಅತ್ಯಂತ ಪ್ರೀತಿಯಿಂದ, ಸೇವಕಿಯರ ಮೂಲಕ ಸೈರಂಧ್ರಿಯನ್ನು ಬರಮಾಡಿಕೊಂಡಳು,

ಮಾಸಿದ ಸೀರೆ ನೀಳ್ದು ಜಿಡೆಗಟ್ಟಿದ ವೇಣಿ ವಿಹೀನಭೂಷಣಂ
ಸೂಸಿದ ಕುಂತಳಾವಳಿ ಮಲೀ[ಮ]ಸ ಕೋಮಲಮೂರ್ತಿ ಕಾಂತಚಿಂ
ತಾಸದನಾನನಂ ಸಕಲ ಭೋಗವಿವರ್ಜಿತ ಚಿತ್ತವೃತ್ತಿ ನಾ
ನಾ ಸಖಿಸಂಗದೂರವೆನಸುಂ ನೆಲಸಿರ್ದುದು ತಲ್ಲತಾಂಗಿಯೊಳ್ ೫೮೯

ವ॥ ಅದಂ ಕಂಡು

ಈ ಕಮನೀಯಶರೀರ
ಕ್ಕೇಕತಿಕಲ್ಮಷವನೇ(ದೇ)ಕೆ(?)ವಸ್ತ್ರಾಭರಣಾ
ನೀಕವನೀವೆಂ ಮತ್ಸೇ
ವಾಕಾಂಕ್ಷೆಯದುಳ್ಳೊಡೀಗಳಿಲೆ ಸೈರಂಧ್ರೀ ೫೯೦

ಈ ಪರಿಯೊಳಿರ್ಪೊಡಿರ್ಪೆಂ
ವ್ಯಾಪಾರಂ ಗಂಧಕಾರನೀಶಂ ಮತ್ಸೇ (?)
ವಾಪಥವಿದು ಮಣಿವಸ್ತ್ರಂ
ಸೋಪಾಧಿಕವೊಲ್ಲೆನೇನುಮಂ ನೃಪಕಾಂತೇ ೫೯೧

ಅದನೇಗೆಯ್ವವನೀಶನ
ಸುದತಿಯುಂ[.]ಬೆತ್ತು ಘಟ್ಟವಳ್ತಿಯನಾ ಮಾ
ರ್ಗದೊಳಿರಿಸಿ ಪುತ್ರಿಯೆಂಬಂ
ದದಿನೊಲವಿಂ ಸಲಹುತಿರ್ಪಳನುಟನವವಳಂ ೫೯೨

೫೮೯. ಮಾಸಿದ ಸೀರೆ, ನೀಳವಾಗಿ ಜಟೆಗಟ್ಟಿದ ಜಡೆ, ನಿರಾಭರಣ, ಕೆದರಿರುವ ಕೂದಲುಗಳು, ಬಾಡಿದ ಸುಕೋಮಲವಾದ ಶರೀರ, ಗಂಡನ ಚಿಂತೆಗಾಗರವಾದ ಮುಖ, ಸರ್ವಸುಖಗಳನ್ನೂ ತ್ಯಜಿಸಿರುವ ಮನಸ್ಸು, ನಾನಾ ಸಖಿಗಳ ಸ್ನೇಹದಿಂದ ದೂರವಾಗಿರುವುದು (ಮೊದಲಾದುವು) ಆ ತರುಣಿಯಲ್ಲಿ ಬಹಳಮಟ್ಟಿಗೆ ಎಡೆಮಾಡಿದ್ದುವು. ವ॥ ಅದನ್ನು ನೋಡಿ ೫೯೦. ಎಲೈ ಸೈರಂಧ್ರೀ! ಈ ಮನೋಹರವಾದ ದೇಹಕ್ಕೆ ಏಕೆ ಅತಿ ಮಾಲಿನ್ಯ? ನನ್ನ ಸೇವೆಯನ್ನು ಮಾಡಬೇಕೆಂಬ ಅಪೇಕ್ಷೆಯಿದ್ದಲ್ಲಿ, ಈಗಲೆ ಉಡುಗೆ ತೊಡುಗೆಗಳನ್ನು ಕೊಡುವೆನು. ೫೯೧. ಎಲೈ ರಾಣಿಯೆ! ಈ ರೀತಿಯಲ್ಲಿಯೇ ಇರುವೆನು. ವ್ಯಾಪಾರಿಯಾದ ಗಂಧಕಾರನೇ ಒಡೆಯನು. ನನ್ನ ಸೇವಾಮಾರ್ಗವೇ ಇದು. ಮಣಿ, ವಸ್ತ್ರ, ಬಿರುದು ಮೊದಲಾದುವುಗಳಾವುವೂ ಬೇಡ, ೫೯೨. ಅಂತೆಯೇ ಒಪ್ಪಿ, ರಾಣಿಯು ಗಂಧತೇಯುವಾಕೆಯನ್ನು ಅದೇ ರೀತಿಯಲ್ಲಿಟ್ಟು, ಆಕೆಯನ್ನು ಮಗಳೆಂಬಂತೆ

ಕಿಱಿದುದಿನಮಿರ್ದು ತಿಳಿದಳ್
ಕುಱುಪಂ ನೃಪಕಾಂತೆ ನೀಂ [ಮಗಳೆನಗೆ] ನಿನಗಾಂ
ಕಿಱಿಯಬ್ಬೆಯೆಂದು ಪೇೞ್ದ
ಱ್ಕಱುಮಿಗೆ ಮಿಗಿಲಾಯ್ತನೂನ ನಿತ್ಯಸ್ನೇಹಂ ೫೭೩

ಅಕ್ಷದ್ಯೂತವನಾಡಿ ನೈಷಧನೃಪಂ ಸಾಮ್ರಾಜ್ಯಮಂ ಸೋಲ್ತು ಚಿ
ತ್ತಕ್ಷೋಭಂ ತನಿವೆರ್ಚೆ ಕಾಂತೆಸಹಿತಂ ತದ್ದೇಶಮಂ ಬಿಟ್ಟು ಸ
ದ್ವೃಕ್ಷಂ ತೀವಿದರಣ್ಯಮಾರ್ಗದಿನನೇಕಾಯಾಸದಿಂ ಪೋದನ
ನ್ಯಕ್ಷೇತ್ರಕ್ಕಿದು ನೈಜಮೆಂದು ಪಲರಿಂ ಕೇಳ್ದಂ ವಿದರ್ಭೇಶ್ವರಂ ೫೭೪

ಭುವನದೊಳತಿಪೂಜ್ಯರೆನಿ
ಪ್ಪವನೀಶ್ವ(ಸು?)ರರಂ ಪಲಂಬರಂ ಕಳುಪಿದನೊ
ಲ್ದು ವಿಚಾರಿಸಲ್ ನಳೋರ್ವೀ
ಧವನಂ ದಮಯಂತಿಯುಂ ವಿದರ್ಭನೃಪಾಲಂ ೫೭೫

ಪಲವೆಡೆಯುಂ ಪೊಕ್ಕವನೀ
ತಿಲಕವೆನಲ್ ಮೆಱೆವನಂತನಿಧಿಪಟ್ಟಣಮಂ
ಪಲಬರ್ ಭೂಸುರರೊಲವಿಂ
ಸಲೆ ಪೊಕ್ಕರ್ ಕಂಡರಲ್ಲಿ ಭೀಮಾತ್ಮಜೆಯುಂ ೫೭೬

ಪ್ರತಿನಿತ್ಯವೂ ಪ್ರೀತಿಯಿಂದ ಕಾಪಾಡುತ್ತಿದ್ದಳು. ೫೭೩. ಸ್ವಲ್ಪ ದಿನಗಳಾದ ಬಳಿಕ, ರಾಣಿಯು (ಆಕೆಯ) ಗುರುತನ್ನು ಕಂಡುಹಿಡಿದಳು. 'ನೀನು ನನಗೆ ಮಗಳಾಗಬೇಕು. ನಿನಗೆ ನಾನು ಚಿಕ್ಕಮ್ಮನಾಗಬೇಕು' ಎಂದು ಹೇಳಿ, ಪ್ರೀತಿ ಹೆಚ್ಚಾಗಲು, ನಿಷ್ಕಳಂಕವಾದ ನಿತ್ಯಸ್ನೇಹವು ಅಧಿಕವಾಯಿತು. ೫೭೪. ನಿಷಧದೇಶದ ಮಹಾರಾಜನಾದ ನಳನು ಪಗಡೆಯ ಜೂಜಾಡಿ, ಸಾಮ್ರಾಜ್ಯವನ್ನು ಕಳೆದುಕೊಂಡು ಮನಸ್ಸಿನ ವ್ಯಾಕುಲವು ಮೇರೆ ಮೀರಿ, ಪತ್ನಿಸಮೇತನಾಗಿ ಆ ದೇಶವನ್ನು ಬಿಟ್ಟು ನಾನಾ ವೃಕ್ಷಗಳು ತುಂಬಿದ್ದ ಕಾಡಿನ ದಾರಿಯಲ್ಲಿ ಅನೇಕ ವಿಧವಾದ ಆಯಾಸಕ್ಕೆ ಗುರಿಯಾಗಿ ಬೇರೆ ಎಡೆಗೆ ಹೋದನು. ಇದು ಸತ್ಯವಾದುದೆಂದು ವಿದರ್ಭದೇಶದ ಮಹಾರಾಜನು ಹಲವರಿಂದ ಕೇಳಿದನು. ೫೭೫. ಭೂಮಂಡಲದಲ್ಲಿ ಬಹಳ ಮಾನ್ಯರೆನ್ನಿಸಿದ್ದ ಹಲವಾರು ಬ್ರಾಹ್ಮಣರನ್ನು, ನಳಮಹಾರಾಜನನ್ನೂ ದಮಯಂತಿಯನ್ನೂ ವಿಚಾರಿಸಲೆಂದು ವಿದರ್ಭಮಹಾರಾಜನು ಮೆಚ್ಚಿ ಕಳುಹಿಸಿಕೊಟ್ಟನು. ೫೭೬. ಕೆಲವು ಬ್ರಾಹ್ಮಣರು ಹಲವೆಡೆಗಳನ್ನು ಹೊಕ್ಕು, (ಕಡೆಗೆ) ಭೂತಿಲಕವೋ ಎಂಬಂತೆ ಮೆರೆಯುತ್ತಿದ್ದ ಅನಂತನಿಧಿ ಪಟ್ಟಣವನ್ನು ಪ್ರೀತಿಯಿಂದ

ವ॥ ಅಂತು ಕಂಡು

ದಮಯಂತಿಯಿರ್ದ ದುಃಖ
ಕ್ರಮಮಂ ಭೀಮಂಗೆ ಭೂಸುರರ್ ಪೇೞಲ್ ತ
ದ್ರಮಣಿಯನಾಪ್ತರಿನುರ್ವೀ
ರಮಣಂ ಕರೆಸಲ್ಕೆ ಬಂದಳಸ್ಥಿರಗತಿಯಿಂ ೫೭೭

ಪಾಡೞಿದು ಕೋಮಳಾಂಗಂ
ಬಾಡೆ ನಿಜಾವಯವದಮಳಮಣಿಭೂಷಣಮಂ
ನೋಡುವಡೆದೋವಿನೋಲೆಯ(?)
ತೋಡುಬೞಿಯಲ್ ಪೊಕ್ಕಳಬಲೆ ಜನಕಾಲಯಮಂ ೫೭೮

ವ॥ ಇತ್ತಲ್

ವನದೊಳ್ ನಂಬಿಸಿ ನಿದ್ರೆಗೆಯ್ಸಿ ಸತಿಯಂ ದಾಕ್ಷಿಣ್ಯಮಂ ಸ್ನೇಹಬಂ
ಧನಮಂ ಶೋಕವನಾದಿಯಂ ಬಗೆಯದುನ್ಮತ್ತಂಬೊಲುದ್ದೇಶದಿಂ
ದನುತಾಪಂ ಕಡೆಗಣ್ಚೆ ವಿಹ್ವಳತೆಯಿಂ ದಿಗ್ಭ್ರಾಂತಿ ಮೆಯ್ವೆರ್ಚಲೊ
ರ್ವನೆ ಪೋದಂ ನಳನನ್ಯದೇಶಪದಮಂ ಸಾರುತ್ತ ಕಾಂತಾರದೊಳ್ ೫೭೯

ಕುಜಸಂದೋಹದಿನಂಧಕಾರವನಿಶಂ ತೀವಿರ್ಪ ದುಷ್ಟಾಪದ
ವ್ರಜಘೋರಧ್ವನಿಯಿಂ ನಿಕುಂಜನಿಕರಂ ತೀವಿರ್ಪ ನಾನಾ ಜರ

ಪ್ರವೇಶಿಸಿ, ಅಲ್ಲಿ ಭೀಮರಾಜನ ಮಗಳನ್ನು ಕಂಡರು. ವ॥ ಹಾಗೆ ನೋಡಿ, ೫೭೭ ದಮಯಂತಿಯಿದ್ದ ವ್ಯಸನಸ್ಥಿತಿಯನ್ನು ಭೀಮನಿಗೆ ಬ್ರಾಹ್ಮಣರು ಬಂದು ಹೇಳಲು, ಆ ತರುಣಿಯನ್ನು ರಾಜರು ಇಷ್ಟರ ಮೂಲಕ ಕರೆಸಲು, (ಆಕೆ) ಅವ್ಯವಸ್ಥಿತವಾದ ಗತಿಯಲ್ಲಿ ಬಂದಳು. ೫೭೮. ಸ್ಥಿತಿಗೆಟ್ಟು, ಕೋಮಲವಾದ ಶರೀರವು ಬಾಡಿರಲು, ತನ್ನ ಅಂಗಗಳ ಪವಿತ್ರವಾದ ಮಣಿಖಚಿತವಾದ ಒಡವೆಗಳನ್ನು ನೋಡಲು......ತರಳೆಯಾದ ದಮಯಂತಿ ತಂದೆಯ ಮನೆಯನ್ನು ಪ್ರವೇಶಿಸಿದಳು. ವ॥ ಇತ್ತ ೫೭೯. ಅರಣ್ಯದಲ್ಲಿ ಹೆಂಡತಿಯನ್ನು ನಂಬಿಸಿ, ನಿದ್ದೆಮಾಡಿಸಿ, ದಾಕ್ಷಿಣ್ಯ, ಸ್ನೇಹಬಂಧನ, ಮುಳ್ಳುಗಳು ಮೊದಲಾದುವನ್ನು ಗಮನಿಸದೆ, ಹುಚ್ಚು ಹಿಡಿದವನಂತೆ, ದುಃಖವು ಮೇರೆಮೀರಲು ತಳಮಳದಿಂದ, ದಿಗ್ಭ್ರಾಂತಿ ಅತ್ಯಧಿಕವಾಗಲು, ನಳಮಹಾರಾಜನು ಉದ್ದೇಶಪೂರ್ವಕವಾಗಿ ಬೇರೆ ದೇಶವನ್ನು ಹುಡುಕಿಕೊಂಡು ಅರಣ್ಯದಲ್ಲಿ ಒಬ್ಬನೇ ಹೋದನು. ೫೮೦. ಗಿಡಗಳ ಸಮೂಹದಿಂದ ಸರ್ವದಾ ಕತ್ತಲೆ ತುಂಬಿರುವ, ದುಷ್ಟಮೃಗಗಳ ವೃಂದದ ಭಯಂಕರವಾದ ಧ್ವನಿಯಿಂದ ಪೊದೆಗಳ ಸಮೂಹವು ತುಂಬಿರುವ, ವಿವಿಧ ಬಗೆಯಾದ

ದ್ಭುಜಗಪ್ರೋನ್ಮುಖಫೂತ್ಕೃತಂ ದೆಸೆಗಳೊಳ್ ಪೆರ್ಚಿರ್ಪರಣ್ಯಾಂತವಂ
ರಜನೀಮಧ್ಯದೊಳೆಯ್ದಿದಂ ಹೃದಯದೊಂದುದ್ವೇಗದಿಂ ಭೂಭುಜಂ ೫೮೦

ತರತರದ ಪ್ರವಾಳಲತೆಯಿಂ ಕಡಲಂ ಘ[ನ] ಕೀಚಕಾಳಿಯಿಂ
ಕುರುಕುಲವಂ ರುಚಿಪ್ರಚುರಚಿತ್ರಶಿಖಂಡಿಯಿನಂತರಿಕ್ಷಮಂ
ಹರಿಬಲದಿಂದ ಪಾಂಡುಸುತರಂ ಕಮನೀಯ ಸಹಸ್ರನೇತ್ರದಿಂ
ಸುರಪನನೆಯ್ದೆ ಪೋಲ್ತಧಿಕಪಾವನಮಂ ಪಡೆದಿರ್ದುದಾ ವನಂ ೫೮೧

ಕಾಕಳಿಯ ವೇಣುನಾದಂ
ಗೋಕುಲಮಂ ತೀವೆ ವಿಮಳಸದ್ವೃಕ್ಷಚ್ಛಾ
ಯಾಕೌತುಕದಿಂ ಕಾಂತಾ
ನೀಕದಿನದು ಗೋಪಮೂರ್ತಿಯಂ ಪ್ರಕಟಿಸುಗುಂ ೫೮೨

ವ॥ ಅದರೊಳ್

ಬಟಲುತ್ತಂ ನಿಡುಗಣ್ಗೆ ದಿಗ್ಭ್ರಮೆ ಮಿಗಲ್ ಕಾಂತಾರದೊಳ್ ಸಂತತಂ
ತೊಟಲುತ್ತಂ ಮಗುಟ್ದಿಂ ಮನೋರಮಣಿಯಂ ಕಾಣ್ಬಂದವೆಂತೆಂದು ಸು

ಮುದಿಯ ಹಾವುಗಳ ಮುಖದಿಂದ ಹೊಮ್ಮುವ ಪೂತ್ಕೃತವು ದಿಕ್ಕುದಿಕ್ಕುಗಳಲ್ಲಿಯೂ ಹೆಚ್ಚಿರುವ ಅರಣ್ಯಮಧ್ಯದಲ್ಲಿ, ನಟ್ಟಿರುಳಿನಲ್ಲಿ ಎದೆಯಲ್ಲಿ ಉಕ್ಕಿಬರುತ್ತಿರುವ ದುಃಖದಿಂದ ಮಹಾರಾಜನು ನಡೆದನು. ೫೮೧. ಬಗೆಬಗೆಯ ಚಿಗುರುಬಳ್ಳಿಗಳಿಂದ (ಹವಳಗಳಿಂದ) ಸಮುದ್ರವನ್ನೂ, ಶ್ರೇಷ್ಠವಾದ ಬಿದಿರುಗಳ ಸಮೂಹದಿಂದ (ಕೀಚಕನೆಂಬ ದುಷ್ಟನಿಂದ) ಕುರುಕುಲವನ್ನೂ, ಕಾಂತಿವೈಶಾಲ್ಯವುಳ್ಳ ವಿಚಿತ್ರ ನವಿಲುಗಳಿಂದ (ಬಾಣಗಳ ವ್ಯಾಪ್ತಿಯಿಂದ ?) ಅಂತರಿಕ್ಷವನ್ನೂ, ಸಿಂಹದ ಬಲದಿಂದ (ಶ್ರೀಕೃಷ್ಣನ ಬಲದಿಂದ) ಪಾಂಡವರನ್ನೂ, ಮನೋಹರವಾದ ಸಾವಿರಾರು ಬೇರುಗಳಿಂದ (ಸಾವಿರ ಕಣ್ಣುಗಳಿಂದ) ಇಂದ್ರನನ್ನೂ ಹೋಲುತ್ತ ಆ ಅರಣ್ಯವು ಪಾವಿತ್ರ್ಯವನ್ನು ಪಡೆದಿತ್ತು. (ಇಲ್ಲಿ ಪ್ರಯೋಗವಾಗಿರುವ ವಿರೋಧಾಭಾಸಾಲಂಕಾರದ ಪರಿಹಾರವನ್ನು ಆಯಾ ಶಬ್ದಗಳ ಪರ್ಯಾಯ ಅರ್ಥಗಳನ್ನು ಕಂಸದಲ್ಲಿ ಸೂಚಿಸುವ ಮೂಲಕ ವ್ಯಕ್ತಪಡಿಸಿದೆ.) ೫೮೨. ಮಧುರವಾದ ಬಿದಿರಿನ ನಾದವು ಆಕಾಶವನ್ನೆಲ್ಲ ಆವರಿಸಿರಲು, ಪವಿತ್ರವಾದ ಒಳ್ಳೆಯ ಗಿಡಮರಗಳ ನೆರಳಿನ ಅಪೇಕ್ಷೆಯಿಂದಲೂ, ಲತಾಸಮೂಹದಿಂದಲೂ ಅದು (ಅರಣ್ಯವು) ಸಂರಕ್ಷಕನನ್ನು ಪ್ರಕಟಿಸುವಂತಿದ್ದಿತು. (ಈ ಪದ್ಯವು ಪರ್ಯಾಯವಾಗಿ ಶ್ರೀಕೃಷ್ಣನಿಗೂ ಅನ್ವಯಿಸುತ್ತದೆ. ಮನೋಜ್ಞವಾದ ಕೊಳಲಿನ ದನಿ ಗೋಕುಲವನ್ನೆಲ್ಲ ಆವರಿಸಿರಲು, ಪವಿತ್ರವಾದ ಒಳ್ಳೆಯ ಗಿಡದ ನೆರಳಿನ ಆಶಯದಿಂದಲೂ (?) ಗೋಪಿಯರ ಸಮೂಹದಿಂದಲೂ ಆ ಅರಣ್ಯವು ಶ್ರೀಕೃಷ್ಣನ ಮೂರ್ತಿಯಂತೆ ತೋರಿಬರುವುದು) ವ॥ ಆದರಲ್ಲಿ ೫೮೩. ಒಳಲುತ್ತಲೂ, ಇಡಿಯ ಕಣ್ಣಿಗೆ ದಿಗ್ಭ್ರಮೆ ಹೆಚ್ಚಾಗಲು ಅರಣ್ಯದಲ್ಲಿ ಸರ್ವದಾ

ಯ್ದುಟಲುತ್ತುಂ ಧಗೆ ಕೈಗೊಳಲ್ ಮತಿಗೆಡುತ್ತುಂ ಚಿತ್ತದೊಳ್ ದೈವಮಂ
ಪಟಿವುತ್ತುಂ ನಡೆದಂ ನೃಪಾಲತಿಲಕಂ ದೇಶಾಂತರಾಯಾಸದಿಂ ೫೮೩

ವ|| ಅಂತು ಪೋಗೆವೋಗೆ

ದಿಗ್ನಿಕರಕ್ಕೆ ಪೆರ್ಚಿ ಕಡುಕರ್ಬೊಗೆಯಿಂ ಕಿಡಿಯಿಂ ನೆಗಟ್ದ ದಾ
ವಾಗ್ನಿ ಕವಲ್ದು ಪರ್ವೆ ಮೃಗ ಪಕ್ಷಿ ಭುಜಂಗ ಪುಳಿಂದಸಂಕುಳಂ
ಮಗ್ನವನೆಯ್ದೆ ದಗ್ಧಮಯಮಾಗಲದಂ ತವೆ ಕಂಡು ಭೂಪನು
ದ್ವಿಗ್ನಮನಂ ಮದೀಯ ಪಥವೆಂತೆನುತಿರ್ದನತೀವ ಚಿಂತೆಯಿಂ ೫೮೪

ಪೊ(ಪೊ?)ದಱಂ ಪೊಕ್ಕು ಕುಜಾಗ್ರಮಕ್ಕಡರ್ದು ಪುಲ್ಲಂ ಪರ್ಚಿ ದುಷ್ಟಾಹಿವೃಂ
ದದ ಬೆಂಬತ್ತಿ ಮೃಗಾಳಿಯಂ ತವಿಸಿ ಪಕ್ಷಿಶ್ರೇಣಿಯಂ ತುತ್ತಿ ಪೆ
ರ್ಚಿದ ವಂಶಂಗಳ ವಂಶಮಂ ದಹಿಸಿ ಘೋಷಾನೀಕಮಂ ತೀರ್ಚಿ ಕಾ
ಯ್ಪೊದವಲ್ ನಾಲ್ದೆಸೆಗೆಯ್ದೆ ಚಾರಿವರಿಯುತ್ತಾಭೀಳ ದಾವಾನಳಂ ೫೮೫

ದೂರದೊಳಿರ್ದು ಕರ್ಬೊಗೆಯ ಪೆರ್ಬಲೆಯಂ ತವೆಬೀಸಿ ತಚ್ಛಟಾ
ಕಾರದ ಬೊಬ್ಬೆಯಿಂ ಮೃಗವನೆಬ್ಬಿಸಿ ಪಲ್ಗಿಡಿಯಿಟ್ಟಯಿಂದಿಡು

ತೊಳಲುತ್ತಲೂ, ಪುನಃ ನಾನು ಮನದನ್ನೆಯನ್ನು ಕಾಣುವ ರೀತಿಯಾದರೂ ಹೇಗೆಂದು ನಿಟ್ಟುಸಿರುಬಿಟ್ಟು ಅಳುತ್ತಲೂ, ಬೇಗೆ ವ್ಯಾಪಿಸಲು ಬುದ್ಧಿಗೆಡುತ್ತಲೂ, ಮನಸ್ಸಿನಲ್ಲಿ ದೈವವನ್ನು ಹಳಿಯುತ್ತಲೂ ದೇಶಾಂತರಶ್ರಮದಿಂದ ರಾಜವರೇಣ್ಯನು ನಡೆದನು. ವ|| ಹಾಗೆ ಹೋಗು ಹೋಗುತ್ತಿರಲು, ೫೮೪. ಮೇಲೆದ್ದ ಕಾಡುಗಿಚ್ಚು ದಿಗಂತಗಳಿಗೆ ಆವರಿಸಿ, ವಿಶೇಷವಾದ ಕಪ್ಪುಹೊಗೆಯಿಂದಲೂ, ಕಿಡಿಯಿಂದಲೂ ಕವರಿ ಹಬ್ಬಲು, ಪ್ರಾಣಿ, ಪಕ್ಷಿ, ಹಾವು, ಬೇಡರಸಮೂಹವು ಸಿಕ್ಕಿಬಿದ್ದು ಸುಟ್ಟುಹೋಗಲು, ಅದನ್ನು ವಿಶೇಷವಾಗಿ ನೋಡಿ ಮನಸ್ಸಿನಲ್ಲಿ ತಳಮಳಗೊಂಡ ಮಹಾರಾಜನು ಅತ್ಯಂತ ಚಿಂತಾಕುಲನಾಗಿ ನನ್ನ ದಾರಿಯಾದರೂ ಹೇಗೆ ಎನ್ನುತ್ತಿದ್ದನು. ೫೮೫. ಪೊದೆಯನ್ನು ಹೊಕ್ಕು, ಗಿಡಗಳ ತುದಿಯನ್ನು ಮುಟ್ಟಿ, ಹುಲ್ಲನ್ನು ಹಬ್ಬಿಕೊಂಡು, ದುಷ್ಟಹಾವುಗಳ ಸಮೂಹವನ್ನು ಬೆನ್ನಟ್ಟಿ, ಪ್ರಾಣಿಸಮೂಹವನ್ನು ನಾಶಮಾಡಿ. ಪಕ್ಷಿಗಳ ಪಂಕ್ತಿಯನ್ನು ತುತ್ತನ್ನಾಗಿ ತೆಗೆದುಕೊಂಡು, ಹೆಚ್ಚಾಗಿ ಬೆಳೆದಿದ್ದ ಬಿದಿರುಗಳ ಬಳಗವನ್ನೇ ಸುಟ್ಟು, ಗೋವಳರ ಹಟ್ಟಿಗಳ (ನದೀತಟದಲ್ಲಿರುವ ಸಣ್ಣ ಹಳ್ಳಿಗಳ) ಸಮೂಹವನ್ನು ಕೊನೆಗಾಣಿಸಿ ಶಾಖವುಂಟಾಗಲು (ಧಗೆಯೇಳಲು) ಭಯಂಕರವಾದ ದಾವಾಗ್ನಿ ನಾಲ್ಕು ದಿಕ್ಕುಗಳಿಗೂ ಸೋಂಕಿ ವ್ಯಾಪಿಸಿತ್ತು. ೫೮೬. ನವದಾವಾಗ್ನಿಯೆಂಬ ಮಹಾರಾಜನು ದೂರದಲ್ಲಿಯೇ ನಿಂತಿದ್ದು, ಕಪ್ಪಾದ ಹೊಗೆಯ ದೊಡ್ಡ ಬಲೆಯನ್ನು ವಿಶೇಷವಾಗಿ ಬೀಸಿ, ಅದರ ಛಟಛಟ

ತ್ಕೋರಣದಿಂ ಪೊದಟ್ದುರಿಯ ಕೂರಲಗಂಬುಗಳಿಂದೆಸುತ್ತ ಕಾಂ
ತಾರದೊಳಾಡಿದಂ ನವದವಾನಳ ಭೂಪತಿ ಬಿಲ್ಲ ಬೇಂಟೆಯಂ ೫೮೬

ಗಡಣದ ಮತ್ಸಖಿ ಕಡುಪಿಂ
ನಡೆದುದೆ ಮನ್ಮಾರ್ಗವೆಂದು ಬಿರುಗಾಳಿಯ ಪೀ
ರ್ದಡಿಯಿಟ್ಟಂ ಬೇಂಟೆಗೆ ಪೇ
ರಡವಿಯೊಳತಿಕೋಪದಿಂ ದವಾನಳಭೂಪಂ ೫೮೭

ವನವನಮಾಲಿಯುಟ್ಟ ನವಪೀತಪಟಂ ವನದೇವಿ ತೊಟ್ಟ ಕಾಂ
ಚನಮಯಭೂಷಣಂ ವನಗಜಾಳಿಗೆ ಬೀಸಿದ ಹೊನ್ನ ಜಾಂಚೆ ತ
ದ್ವನ ವಿಲಸತ್ಸರೋವರ ಕನತ್ಕನಕಾಂಬುಜವೆಂಬಿನಂ ಮಹಾ
ವನದೊಳಗಬ್ಬರಿಸುತ್ತುದು ದವಾನಳಮಾಲೆ ಸುದೀಪ್ತಿಜಾಲದಿಂ ೫೮೮

ವ॥ ಮತ್ತಮಲ್ಲಿ ಕೋಡೂಱಿ ಕೆಡೆವ ಕಾಡಾನೆಗಳಿಂ, ನೀಡಿದ ನಾಲಗೆಯೊಳ್ ನೊರೆ ಸುತ್ತಿ ಘುರುಘುರಿಸಿ ಜನವನಱಸಿ ಬೞಲ್ವ ಲುಲಾಯಂಗಳಿಂ, ಉರಿ ಮುಸುಂಕೆ ಕರಿಕರಿದು ದಿಂಡುಗೆಡೆವ ಪುಂಡರೀಕಂಗಳಿಂ, ಕರ್ಬೊಗೆ ಕವಿಯೆ ಕಲ್ಲಗವಿಯೊಳ್ ಕೆಡೆವ ಭಲ್ಲೂಕಂಗಳಿಂ, ಇಕ್ಕೆಯಿಂದಿಂಕಿಕ್ಕಲಾಱದಲ್ಲಿಯೆ ಮುಗ್ಗುವ ಹುಲ್ಲೆವಿಂಡುಗಳಿಂ, ಕೊಳ್ಳಿಗಿಡಿ ತಾಗಲಳ್ಳೆವೊಯ್ದು ಬೀೞ್ವ ಬೆಳ್ಳಿರಳೆಗಳಿಂ,

ವೆಂಬ ಆಕಾರದ ಆರ್ಭಟದಿಂದ ಪ್ರಾಣಿಗಳನ್ನು ಎಬ್ಬಿಸಿ, ಬಲಿಷ್ಠವಾದ ಕಿಡಿಯೆಂಬ ಈಟಿಯಿಂದ ತಿವಿಯುತ್ತ ಒಂದೇ ತೆರನಾಗಿ ವ್ಯಾಪಿಸಿದ ಉರಿಯ ಹರಿತವಾದ ಬಾಣಗಳಿಂದ ಬಿಲ್ಲಿನ ನೆರವಿನಿಂದ ಕಾಡಿನಲ್ಲಿ ಬೇಟೆಯನ್ನು ಆಡಿದನು. ೫೮೭. ದಾವಾಗ್ನಿರಾಜನು ದಟ್ಟೈಸಿದ ನನ್ನ ಸಖಿ ಹಿಗ್ಗಿನಿಂದ ನಡೆದುದೇ ನನ್ನ ದಾರಿಯೆಂದು ಬಿರುಗಾಳಿಯನ್ನೂ ಹೀರಿ, ನಿಬಿಡವಾದ ಕಾಡಿನಲ್ಲಿ ಕೋಪದಿಂದ ಬೇಟೆಗೆ ಹೆಜ್ಜೆಯಿಟ್ಟನು. ೫೮೮. ವನದ ಶ್ರೀಕೃಷ್ಣನು ಉಟ್ಟ ಹೊಸದಾದ ಪೀತಾಂಬರ, ವನದೇವಿ ತೊಟ್ಟ ಬಂಗಾರದಿಂದ ಮಾಡಿದ ಒಡವೆಗಳು, ವನವೆಂಬ ಆನೆಯ ಹಿಂಡಿಗೆ ಬಿಗಿದ ಬಂಗಾರದ ಪಕ್ಕರಕ್ಕೆ, ಆ ವನದ ಉಜ್ವಲ ಸರೋವರದಲ್ಲಿ ಹೊಳೆಯುವ ಚಿನ್ನದ ತಾವರೆ ಎಂಬಂತೆ, ಆ ವಿಸ್ತಾರವಾದ ಕಾಡಿನೊಳಗೆ ದಾವಾಗ್ನಿಮಾಲೆ ತೇಜೋಮಯವಾದ ಜ್ವಾಲೆಗಳಿಂದ ಅಧಿಕಾಧಿಕವಾಯಿತು. ವ॥ ಬಳಿಕ ಅಲ್ಲಿ ಕೊಂಬನ್ನು ಊರಿ ಕೆಡೆವ ಕಾಡಾನೆಗಳಿಂದಲೂ, ಚಾಚಿದ ನಾಲಗೆಯಲ್ಲಿ ನೊರೆಸುತ್ತಿ ಘುರುಘುರಿಸಿ ನೀರನ್ನು ಹುಡುಕಿಕೊಂಡು ಬಳಲುವ ಎಮ್ಮೆಗಳಿಂದಲೂ, ಉರಿ ಮುತ್ತಲು ಕರಿಕಾಗಿ ಉರುಳಿಬೀಳುವ ತಾವರೆಹೂವುಗಳಿಂದಲೂ. ಕಪ್ಪಾದ ಹೊಗೆ ಆವರಿಸಲು ಕಲ್ಲಗವಿಯಲ್ಲಿ ಕೆಡೆದು ಬೀಳುವ ಕರಡಿಗಳಿಂದಲೂ, ನೆಲೆಯಿಂದ ನೆಗೆಯಲಾರದೆ ಅಲ್ಲಿಯೇ ಕಂದುವ ಜಿಂಕೆಗಳ ಸಮೂಹಗಳಿಂದಲೂ, ಕೊಳ್ಳಿಯ ಕಿಚ್ಚು ಸೋಂಕಲು ಪಕ್ಕೆ ಒಡೆದುಕೊಂಡು ಬೀಳುವ ಬೆದರಿದ ಜಿಂಕೆಗಳಿಂದಲೂ (ಬಿಳಿಯ

ಉರಿಯುಟ್ಟು ಪರಿಪರಿದು ತೊರಳೆವಾಯ್ದುರುಳ್ವ ಮರೆವಿಂಡುಗಳಿಂದೊರೆಡಿಯಿಂದವೆ ಧಾರಿಣಿಯುಂ ತಾರೆಬೀಳ್ವ ಸಾರಂಗಗಳಿಂ, ಕಿಱುಗಿಡಿಗಳ್ ಚುಱುಚುಱ್ರನೆ ತಾಗಿ ನಿಱಿನಿಱಿಗುಟ್ಟೆ(ಟ್ಟೆ?) ಮಱಿಯುಂ ಕೊಂಡೋಡಲಾಱದೆ ಗುಂಡುಗೆಡೆವ ಕೋಡಗಂಗಳಿಂ, ಪಕ್ಕಂ ಸೀದು ಮುಕ್ಕುಱಿಬಿದ್ದ ಪಕ್ಕಿಗಳಿಂ ಬೊರೆವೊರೆದು ಸರವಿಯಂತೆ ಸುವಿಯಂತೆ(?) ಸುರುಳ್ದು ಕಿಡೆವುರಗಂಗಳಿಂ, ಸರ್ವಾಂಗವಂ ಕರ್ಬೊಗೆ ಸುತ್ತೆ ಕೊರ್ಬಿದೊಡಲಂ ಬಿಡುವ ಪೆರ್ಬಾವುಗಳಿಂದಗುರ್ಬುವೆತ್ತುಮತುಮಲ್ಲದೆಯುಂ

ಘೋರತರಪ್ರಭೂತದವವಹ್ನಿ ಮಹಾಟವಿಯೊಳ್ ಚಟಚ್ಚಟಾ
ಕಾರದಿನುಣ್ಮಿ ಕರ್ಬೊಗೆಯ ಮುರ್ಬುರಿ ಪರ್ವಿ ಸಮಸ್ತ ಜೀವಸಂ
ಹಾರವಿದೆಂಬಿನಂ ದೆಸೆಯನಾಕ್ರಮಿಸುತ್ತಿರಲಲ್ಲಿ ದೈನ್ಯಘೂ
ತ್ಕಾರದಿನಿರ್ದುದೊಂದಜಗರಂ ಸತತೋಗ್ರಗರಂ ಭಯಂಕರಂ ೫೪೯

ಘಟಯೋನಿಯ ಹೃತ್ಕೋಪೋ
ತ್ಕಟಶಾಪದಿನಿಳೆಗೆ ಕೆಡೆದ ನಹುಷನವೊಲ್ ದು
ರ್ಘಟ ದಾವಾನಳನೊಳ್ ಸಂ
ಕಟದಿಂದಿರ್ದುದು ಬೞಲ್ಕೆಯುಂ ಗೋನಾಸಂ ೫೫೦

ಜಿಂಕೆಗಳಿಂದಲೂ ?) ಉರಿಹತ್ತಿ ಹರಿಹರಿದು ಗುಲ್ಮವು ಹೊರಹೊಮ್ಮಿ ಉರುಳುವ ಮರೆಯ (ಒಂದು ಬಗೆಯಾದ ಜಿಂಕೆ) ಗುಂಪುಗಳಿಂದಲೂ, ಒಂದೇ ಒಂದು ಹೆಜ್ಜೆಯಲ್ಲಿ ಭೂಮಿಯಿಂದ ಚಿಮ್ಮಿ (?) ಬೀಳುವ ಸಾರಂಗಗಳಿಂದಲೂ (ಚುಕ್ಕೆಗಳಿರುವ ಜಿಂಕೆಗಳು), ಚಿಕ್ಕಚಿಕ್ಕ ಕಿಡಿಗಳು ಚುರುಚುರ್ರನೆ ತಾಗಿ ನಿರಿನಿರಿಗುಡಲು (?) ಮರಿಯನ್ನು ತೆಗೆದು ಕೊಂಡು ಹೋಗಲಾರದೆ ಗುಂಪಾಗಿ ಬೀಳುವ ಕೋತಿಗಳಿಂದಲೂ, ರೆಕ್ಕೆಗಳು ಸೀದು ಮುದುರಿಬಿದ್ದ ಹಕ್ಕಿಗಳಿಂದಲೂ, ಬುಸುಬುಸುಗುಟ್ಟಿ ಹಗ್ಗದಂತೆ, ಸರವಿಯಂತೆ (?) ಸುರುಟಿಕೊಂಡು ಕೆಡೆಯುವ ಹಾವುಗಳಿಂದಲೂ, ಎಲ್ಲ ಅವಯುವಗಳನ್ನೂ ಕಪ್ಪಾದ ಹೊಗೆ ಸುತ್ತಲು ಕೊಬ್ಬಿದ ದೇಹವನ್ನು ತೊರೆಯುವ ಹೆಬ್ಬಾವುಗಳಿಂದಲೂ ಭಯಂಕರ ವಾಯಿತು. ಅಷ್ಟೇ ಅಲ್ಲದೆ, ೫೪೯. ಭಯಂಕರವಾಗಿ ತೋರಿಬಂದ ದಾವಾಗ್ನಿ ದೊಡ್ಡ ಕಾಡಿನಲ್ಲಿ ಛಟಛಟಾಕೃತಿಯಿಂದ ಹೊಮ್ಮಿ ಕಪ್ಪಾದ ಹೊಗೆಯ ಮಬ್ಬಿನ ಉರಿ ಹಬ್ಬಿ ಸಕಲ ಜೀವನಸಂಹಾರವಿದು ಎಂಬಂತೆ ದಿಕ್ಕನ್ನು ವ್ಯಾಪಿಸುತ್ತಿರಲು, ಅಲ್ಲಿ ದೀನವಾಗಿ ಘೂತ್ಕಾರ ಮಾಡುತ್ತ ಸರ್ವದಾ ಉಗ್ರಗರವೂ (ಉಗ್ರಕರವೂ ?), ಭೀತಿಕರವೂ ಆಗಿದ್ದ ಹೆಬ್ಬಾವೊಂದಿದ್ದಿತು. ೫೫೦. ಅಗಸ್ತ್ಯನ ಹೃದಯದ ಕೋಪದ ಉಗ್ರಶಾಪದಿಂದ ಭೂಮಿಗೆ ಉರುಳಿಬಿದ್ದ ನಹುಷನಂತೆ ದುರ್ಭೇದ್ಯವಾದ ದಾವಾಗ್ನಿಯಲ್ಲಿ ಹೆಬ್ಬಾವು ಬಳಲಿಕೆ

ಕಾಳಿ ಕರಾಳಿ ಭೈರವಿ ಮಹಾಯಮದೂತಿಕೆಯೆಂಬ ದಾಡೆಗಳ್
ಬಾಳ ಶಶಾಂಕನಂತೆ ಮಿಱುಗಲ್ ತನುಕಾಂತಿಗೆ ತಪ್ತಕಾಂಚನಂ
ಕೀೞ್ನೆ ಧಾತ್ರಿಯೊಳ್ ಕೆಡೆದ ಯೋಜನಬಾಹುವಿನಂದದಿಂದತಿ
ಸ್ಥೂಳ ಶರೀರದೊಂದಜಗರಂ ಪೊರಳುತ್ತಿರೆ ಕಂಡನುರ್ವಿಪಂ ೫೯೧

ವನವಹ್ನಿಯ ಭಯದಿಂ ಭೋಂ
ಕೆನೆ ತೊಲಗಿಸಿ ಜೀವದಾನವಂ ಕೊಡುವ ಮಹಾ
ತ್ಮನದಾವನೆಂದತಿಕ್ರಂ
ದನದಿಂದಿರ್ದುದು ವಿಷಾನನಂ ಕಾನನದೊಳ್ ೫೯೨

ವ॥ ಅಂತಿರ್ದಜಗರಂ ಪ್ರಜಾನಾಥನಂ ಕಂಡು

ಭೀತನನುಗ್ರಪಾವಕಪರೀತನನುತ್ತಮ ನಾಗವಂಶಸಂ
ಭೂತನನುದ್ಧತಾಪಹತಚೇತನನೂರ್ಜಿತ ಬುದ್ಧಿ ಶಾಸನಂ
ಖ್ಯಾತನನಚ್ಛವಾಯುಪರಿಪೀತನನಾದಿ (?) ಸಮೇತನಂ ಧರಿ
ತ್ರೀತಳನಾಥ ರಕ್ಷಿಸೊಲವಿಂ ಶರಣಾಗತವಜ್ರಪಂಜರಾ ೫೯೩

ವ॥ ಎಂಬುದುಂ

ನಿನ್ನಯ ಪೆಸರಂ ಪೇೞೆಲೆ
ಪನ್ನಗಯೆನಲಾದೊಡಪ್ಪುಕುಲ ನಾಗರೊಳಾ

ಯಿಂದ ಸಂಕಟಪಡುತ್ತಿದ್ದಿತು. ೫೯೧. ಕಾಳಿ, ಕರಾಳಿ, ಭೈರವಿ, ಮಹಾಯಮದೂತಿಕೆ ಯೆನ್ನುವ ದಾಡೆಗಳು ಬಾಲಚಂದ್ರನಂತೆ ಬೆಳಗುತ್ತಿರಲು, ಶರೀರಕಾಂತಿಯು ಕಾಸಿದ ಬಂಗಾರವನ್ನೇ ಕಡೆಗಣಿಸುವಂತಿರಲು, ಭೂಮಿಯಲ್ಲಿ ಕೆಡೆದುಬಿದ್ದ ಯೋಜನ ಬಾಹುವಿನಂತೆ ಅತಿಸ್ಥೂಲವಾದ ದೇಹವುಳ್ಳ ಒಂದು ಹೆಬ್ಬಾವು ಹೊರಳುತ್ತಿರಲು ಮಹಾರಾಜನು ಕಂಡನು. ೫೯೨. ಬೆಂಕಿಯ ಭಯದಿಂದ ಕೂಡಲೆ ತಪ್ಪಿಸಿ ಜೀವದಾನವನ್ನು ನೀಡುವ ಮಹಾತ್ಮನು ಯಾವನಿರುವನೋ ಎಂದು ವಿಷಮುಖಿಯಾದ ಸರ್ಪವು ಕಾಡಿನಲ್ಲಿ ಗೋಳಿಡುತ್ತಿತ್ತು. ವ॥ ಹಾಗಿದ್ದ ಅಜಗರವು (ಹೆಬ್ಬಾವು) ಪ್ರಜಾಪರಿಪಾಲಕನಾದ ರಾಜನನ್ನು ನೋಡಿ ೫೯೩. ಶರಣು ಬಂದವರಿಗೆ ವಜ್ರಪಂಜರದಂತಿರುವ ಮಹಾರಾಜನೆ, ಭಯಗೊಂಡವನನ್ನು ಭಯಂಕರವಾದ ಅಗ್ನಿಯಿಂದ ಸುತ್ತುವರಿದಿರುವವನನ್ನು, ಶ್ರೇಷ್ಠ ನಾಗವಂಶೋದ್ಭವನನ್ನು, ಅಧಿಕ ಶಾಖದಿಂದ ಹತನಾದ ಜೀವಿಯನ್ನು, ಅಭಿವೃದ್ಧಿಪರವಾದ ಬುದ್ಧಿವಿಧಾಯಕನನ್ನು, ಪ್ರಖ್ಯಾತನನ್ನು, ಶ್ರೇಷ್ಠವಾಯುವನ್ನು ಸೇವಿಸುವವನನ್ನು...... ಪ್ರೇಮದಿಂದ ರಕ್ಷಿಸು, ವ॥ ಎನ್ನಲು, ೫೯೪. ಎಲೈ ಸರ್ಪವೇ, ನಿನ್ನ ಹೆಸರನ್ನು ಹೇಳು

ದೆನ್ನ ಪೆಸರ್ ಕರ್ಕೋಟಕ
ನಿನ್ನೇನಂ ಪೇಳ್ವೆನವನಿಪಾಲಲಲಾಮಾ ೫೯೪

ಇನಿತು ಬೃಹದ್ದೇಹವನಾ
ನೆನಿತಂತರವಾಂತು ಪೋಪೆನಹಿಪತಿಯೆನೆ ಮ
ತ್ತನುವತಿಲಘು ಕೊಂಡೊಯ್ದೆ
ನ್ನನೊಂದು ನಿರ್ದಾವದಲ್ಲಿ ನಿಱಿಸು ಮಹೀಶಾ ೫೯೫

ವ॥ ಆದಲ್ಲದೊಡಂ

ನೂಱಿನ್ನೂಱೆನ್ನೆ ನಾಂ ಪತ್ತಡಿಯನೆಣಿಸಿಕೊಂಡೆನ್ನನಿನ್ನೊಂದು ತಾಣಂ
ಬೇಱೆಂಬಂತಿಟ್ಟು ನೀಂ ರಕ್ಷಿಪುದೆನಲಹಿಯಂ ಪೊತ್ತು ಭೂಪಾಲಕಂ ಬಾ
ಯ್ದಾಱುತ್ತಂ ಭಾರದಿಂ ಗೋಣ್ ಕುಸಿಯಲಡಿಗಳಿಂದೊಂದೆರಡ್ಮೂಱು ನಾಲ್ಕೈ
ದಾಱೇಳೆಂಟೊಂಬತುಂ ಪತ್ತೆನೆ ಸರಭಸದಿಂ ಪತ್ತಿ ಕಚ್ಚಿತ್ತು ಸರ್ಪಂ ೫೯೬

ವಿಶದ ಯಶೋನ್ನತನವನಿಪ
ನಶಕ್ತನೆನಿಪಹಿಯನಾಂತ ಗಣನೆಗಳಡಿಯಂ
ದಶಯೆನಲೌಡಿತ್ತಾಗಳ್
ಪಿಶುನರ್ಗುಪಕಾರಮುಂಟೆ ವಸುಧಾತಳದೊಳ್ ೫೯೭

ಎನ್ನಲು ಹಾಗಾದಲ್ಲಿ, ರಾಜಶ್ರೇಷ್ಠನೇ, ಇನ್ನೇನು ಹೇಳಲಿ, ಅಷ್ಟಕುಲ ಸರ್ಪರಲ್ಲಿ ನನ್ನ ಹೆಸರು ಕರ್ಕೋಟಕ (ಎಂದಿತು). ೫೯೫. ಫಣಿರಾಜನೆ! ಇಷ್ಟು ದೊಡ್ಡ ದೇಹವನ್ನು ನಾನು ಎಷ್ಟು ದೂರ ಹೊತ್ತು ಹೋಗಬಲ್ಲೆ ಎನ್ನಲು, ರಾಜೇಂದ್ರನೆ! ನನ್ನ ದೇಹ ತುಂಬ ಹಗುರ, ನನ್ನನ್ನು ಕೊಂಡೊಯ್ದು ಬೆಂಕಿಯಿಲ್ಲದೆಡೆಯಲ್ಲಿ ಇರಿಸು, ವ॥ ಹಾಗಿಲ್ಲದಿದ್ದರೆ, ೫೯೬. ನಾನು ನೂರು ಇನ್ನೂರು ಎನ್ನುವುದಿಲ್ಲ. ಹತ್ತು ಹೆಜ್ಜೆಯನ್ನು ಎಣಿಸಿಕೊಂಡು ನನ್ನನ್ನು ಇನ್ನೊಂದು ಜಾಗದಲ್ಲಿ ಬೇರೆ ಎಂಬಂತೆ ಇಟ್ಟು ನೀನು ರಕ್ಷಿಸುವುದು. ಎನ್ನಲು ರಾಜನು ಹಾವನ್ನು ಹೊತ್ತುಕೊಂಡು, ಬಾಯಿ ಒಣಗುತ್ತ, ಭಾರದಿಂದ ಕತ್ತು ಕುಸಿಯಲು ಹೆಜ್ಜೆಯಿಟ್ಟು ಒಂದು ಎರಡು ಮೂರು ನಾಲ್ಕು ಐದು ಆರು ಏಳು ಎಂಟು ಒಂಬತ್ತು ಹತ್ತು ಎನ್ನುವಷ್ಟರಲ್ಲಿ ಸರ್ಪವು ರಭಸದಿಂದ ಮೇಲೆ ಹತ್ತಿ ಕಚ್ಚಿತು. ೫೯೭. ನಿರ್ಮಲವಾದ ಕೀರ್ತಿಯಿಂದ ಉನ್ನತವಾದ ರಾಜನು ದುರ್ಬಲವೆನ್ನಿಸುವ ಸರ್ಪವನ್ನು ಹೊತ್ತು (ಅಂತು?) ಹತ್ತು ಹೆಜ್ಜೆಗಳನ್ನು ಎಣಿಸಲು, ಆ ಕೂಡಲೆ ಕಚ್ಚಿತು.

ವ॥ ಆಗಳುಂ

ಮೂಗು ಮುರುಂಟಿ ಕಣ್ಗಳೊಳಸಾರ್ದು ಬೆರಲ್ ಎಂಗೆ ಡೊಂಕಿ ಚೆಲ್ವ ಮೆ
ಯ್ಯಾಗಳೆ ಗಂಟುಗಟ್ಟಿ ಕಿವಿ ಸುಕ್ಕಿ ಮುಖಂ ಕಡುಗಂದಿ ಗೋಣ್ ಕರಂ
ಬಾಗಿ ಮಡಂ ಸುರುಳ್ದು ನಿಖಿಳಾವಯವಂ ವಿಪರೀತವಾಗಿಯು
ದ್ವೇಗದೊಳಿರ್ದನಾಗಳವನೀಪತಿ ದುರ್ವಿಷ ದುಷ್ಟಬಾಧೆಯಿಂ ೫೯೮

ವ॥ ಆಗಳ್

ಆತ್ಮಪಕಾರಮಂ ನಿನಗೆ ಮಾಡಿದ ಮತ್ತನುವಿಂಗೆ ಮತ್ತಿದೇಂ
ಪ್ರತ್ಯುಪಕಾರಮುಗ್ರ ವಿಷವಹ್ನಿಯನೀವುದು ದುಷ್ಟಪನ್ನಗಾ
ಪತ್ಯಚಯಕ್ಕೆ ಪಾಲನೆಜೆಯಲ್ ವಿಷವಾದಪುದೆಂಬ ಗಾದೆಯಂ
ಸತ್ಯವನಾಗಿಸಲ್ ಪಡೆದಳಲ್ಲದೆ ಕದ್ರು ಭುಜಂಗವಲ್ಲಭಾ ೫೯೯

ನೀನಾರ್ತು ಪಸಿದು ಮಜ್ಜೀ
ವಾನಿಲನಂ ಪೀರ್ವುದುಚಿತವಲ್ಲದೆ ತನುವಂ
ಮಾನವನೆಯ್ದೆ ಪುದುಚಿತವೆ
ಕೀನಾಶಪ್ರತಿಭೆಯೇಕೆ ಪವನಾಹಾರಾ ೬೦೦

ಛಿದ್ರನಿವಾಸರಂ ಪದವಿಹೀನರನಶ್ರುತರಂ ದ್ವಿಜಿಹ್ವರಂ
ಕ್ಷುದ್ರರನುಗ್ರರಂ ಕುಟಿಲಮಾರ್ಗಿಗಳಂ ವಿಷನೇತ್ರರಂ ಫಣೋ

ಭೂಮಿಯಲ್ಲಿ ಕೆಟ್ಟವರಿಗೆ ಉಪಕಾರ ಮಾಡಬಹುದೆ ? ವ॥ ಆಗಲೀ (?) ೫೯೮. ಮೂಗು ಮುರುಟಿಕೊಂಡು, ಕಣ್ಣುಗಳು ಗುಳಿಬಿದ್ದು. ಬೆರಳುಗಳು ಡೊಂಕುಡೊಂಕಾಗಿ. ಚೆಲುವಾದ ಮೈ ಆಗಲೆ ಗಂಟುಕಟ್ಟಿ, ಕಿವಿಸುಕ್ಕಿ, ಮುಖವು ಬಹಳ ಸೊರಗಿ. ಕತ್ತು ವಿಪರೀತವಾಗಿ ವಾಲಿಕೊಂಡು. ಹಿಮ್ಮಡಿ ಸುರುಟಿಕೊಂಡು, ಸಮಸ್ತ ಅಂಗಗಳೂ ಅಸ್ತವ್ಯಸ್ತವಾಗಿ ದುರ್ವಿಷವೇರಿದ ಸಂಕಟದಿಂದ ರಾಜನು ಆಗ ದುಃಖಿತನಾಗಿದ್ದನು. ವ॥ ಆಗ, ೫೯೯. ಎಲೈ ಸರ್ಪರಾಜನೆ ! ನಿನಗೆ ಆತ್ಮಪಕಾರವನ್ನು ಮಾಡಿದ ನನ್ನ ಶರೀರಕ್ಕೆ ಪುನಃ ಭಯಂಕರವಾದ ವಿಷಾಗ್ನಿಯನ್ನು ನೀಡುವುದು ಎಂಥ ಪ್ರತ್ಯುಪಕಾರ ? ದುಷ್ಟ ಸರ್ಪಸಂತಾನ ಸಮೂಹಕ್ಕೆ ಹಾಲನ್ನು ಎರೆಯಲು ವಿಷವಾಗುತ್ತದೆ ಎಂಬ ಗಾದೆಯನ್ನು ನಿಜವನ್ನಾಗಿ ಮಾಡಲೆಂದು ಕದ್ರು (ನಿಮ್ಮನ್ನು) ಹೆತ್ತಳಲ್ಲವೆ ? ೬೦೦. ಎಲೈ ಎಲರುಣಿ (ವಾಯು ಭಕ್ಷಕ) ಯಾದ ಸರ್ಪವೆ ! ನೀನು ಹಸಿದು ಬಯಸಿ ನನ್ನ ಬಾಳಿನ ಉಸಿರನ್ನೇ ಹೀರುವುದು ಸಾಧುವಾಗುತ್ತಿತ್ತಲ್ಲದೆ, ಶರೀರವನ್ನು (ಹೀಗೆ) ಅಂದಗೆಡಿಸುವುದು ತಕ್ಕುದೆ ? ಈ ಯಮ ಪ್ರತಿಭೆಯಾದರೂ ಏಕೆ ? ೬೦೧. ಜರ್ಝರಿತ ನಿವಾಸಿಗಳನ್ನು, ಪದಚ್ಯುತರನ್ನು, ಅವೈದಿಕರನ್ನು, ಎರಡು ನಾಲಗೆಯುಳ್ಳವರನ್ನು, ಕ್ಷುದ್ರರನ್ನು, ಭಯಂಕರರಾದವರನ್ನು,

ಪದ್ರವಶೀಲರಂ ನೆಗಟ್ದಿ ಧೋಜನನಪ್ರಿಯರಂ ಕೃತಘ್ನರಂ
ಕೌದ್ರತರಾಸ್ಯರಂ ಬೆರಸುವಾತನನೀತಿಯ ಸೇತುವಲ್ಲವೇ ೬೮೧

ವ॥ ಅದಲ್ಲದೊಡಂ

ಮಾತೇಂ ಕೃತಘ್ನನಿಂದಂ
ಪಾತಕಿಗಳದಾರ್ ಪೆಜಿರ್ ಮಹಾಪಾತಕಸಂ
ಘಾತ ಪ್ರಾಯಶ್ಚಿತ್ತಂ
ಭೂತದಯಾಸ್ಥಿತಿ ಕೃತಜ್ಞಗುಣಸದ್ಭಾವಂ ೬೮೨

ಪರಪೀಡೆಯನೆಸಗುವವಂ
ನರಕವನುಂಡುಂಡು ದಣಿಯನೇತೆಜದಿಂದಂ
ಪರಸುಖಮಂ ಚಿಂತಿಸುವಂ
ನಿರಂತರಂ ಸ್ವರ್ಗಲೋಕಶೇಖರನಲ್ತೇ ೬೮೩

ಜರೆಯಿಂ ವ್ಯಾಧಿಯಿನಾಧಿಯಿಂ ವ್ಯಸನದಿಂ ದುಸ್ಸಂಗದಿಂ ದುಃಖದಿಂ
ದರಿಯಿಂ ಬಂಧುವಿಯೋಗದಿಂ ವಿಷಯದಿಂ ಮೋಹತ್ವದಿಂ ಲೋಕಮ
ತ್ಸರದಿಂ ಕ್ಷೀಣವನೆಯ್ದುಗುಂ ತನುವಿದಂ ಕೊಡುಂಡು ಮತ್ತೇಕೆ ಮೈ
ಮರವಟ್ಟನ್ಯರ ಪೀಡೆಯಂ ಬಯಸುವರ್ ದೋಷಾವಿಲರ್ ಗಾವಿಲರ್ ೬೮೪

ಕಪಟಮಾರ್ಗಿಗಳನ್ನು, ವಿಷದ ಕಣ್ಣುಳ್ಳವರನ್ನು, ಅಧಿಕವಾಗಿ ಪೀಡಿಸುವವರನ್ನು, ಕೀಳು ರೀತಿಯಲ್ಲಿ ಹುಟ್ಟಿದವರನ್ನು, ಕೃತಘ್ನರನ್ನು, ಭಯಂಕರ ಮುಖಿಗಳನ್ನು ಬೆರಸುವಾತನು ಅನೀತಿಯ ಸೇತುವೆಯಂತಲ್ಲವೆ ? ವ॥ ಹಾಗಿಲ್ಲದಿದ್ದಲ್ಲಿ ೬೮೨. ಮಾತೇನು ! ಕೃತಘ್ನನಿಗಿಂತಲೂ ಇತರ ಪಾತಕಿಗಳು ಯಾರಿರುವರು ? ಮಹಾಪಾತಕದಿಂದ ಆದ ತೀವ್ರವಾದ ಆಘಾತಕ್ಕೆ ಪ್ರಾಣಿಗಳಲ್ಲಿ ದಯಾಗುಣವೂ, ಕೃತಜ್ಞಗುಣ ಸದ್ಭಾವವೂ ಪ್ರಾಯಶ್ಚಿತ್ತ. ೬೮೩. ಪರಹಿಂಸೆಯನ್ನು ಮಾಡುವವನು ನರಕಯಾತನೆಯನ್ನು ಉಂಡುಂಡು ಯಾವ ರೀತಿಯಿಂದಲೂ ದಣಿಯುವುದಿಲ್ಲ. ಪರೋಪಕಾರವನ್ನೇ ಚಿಂತಿಸುವವನು ಸರ್ವದಾ ಸ್ವರ್ಗಲೋಕಕ್ಕೆ ಪ್ರಭುವಲ್ಲವೆ ? ೬೮೪. ಮುಪ್ಪಿನಿಂದಲೂ, ರೋಗದಿಂದಲೂ ಚಿಂತೆಯಿಂದಲೂ, ವ್ಯಸನದಿಂದಲೂ, ದುಷ್ಟಸಹವಾಸದಿಂದಲೂ, ವ್ಯಥೆಯಿಂದಲೂ, ಶತ್ರುವಿನಿಂದಲೂ, ಬಂಧುಗಳ ಅಗಲಿಕೆಯಿಂದಲೂ, ಇಂದ್ರಿಯಾಭಿಲಾಷೆಯಿಂದಲೂ, ವ್ಯಾಮೋಹದಿಂದಲೂ, ಲೋಕದ್ವೇಷದಿಂದಲೂ ಶರೀರವು ಕೃಶವಾಗುತ್ತದೆ. ಇದನ್ನು ಕೂಡಿ, ಉಂಡು, ಪುನಃ ಯಾಕೆ ಮೈಮರೆತು, ದೋಷಯುಕ್ತರಾದ ಅಜ್ಞಾನಿ

ಇದನಱಿದದೇಕೆ ಮದ್ದೇ
ಹದ ಕಾಂತಿಯನಟಿದು ಜಪವನುಟಿದೆ ಎಲೆ ದು
ರ್ಮದ ಚಿತ್ರ ನಿನಗದೇನಾ
ದುದು ಫಲವೆನ್ನನ್ನರೊಳಕೆ ನಿನಗತಿಮಿತ್ರರ್ ೬೦೫

ಪತ್ತೆಂದೊಡೆ ಪತ್ತಿದೆನಿದು
ಚಿತ್ತಕ್ಕೆ ವಿರೋಧಮಾಯ್ತೆ ನಿನಗಿದು ಮೇಲಿ
ನ್ನುತ್ತಮಕಾರ್ಯಾಸ್ಪದವಾ
ನಿತ್ತಪೆನಂಬರವನುತ್ತರಕ್ರಿಯೆಗೀಗಳ್ ೬೦೬

ವ॥ ಎಂದು

ಮೃದುನಾಗವಸ್ತ್ರವೆರಡಂ
ಪದೆದಿತ್ತಂ ಫಣಿಪನವನಿಪಂಗಿದು ನಿನ್ನಂ
ಗದ ಕಲಿ ಪೋಗಲ್ ಬೇಗಂ
ಪೊದೆಯಲ್ ನಿನ್ನಂಗಕಾಂತಿಯುಂ ಪ್ರಕಟಿಸುಗುಂ ೬೦೭

ಆ ನಾಗವಸ್ತ್ರವೆರಡಂ
ಭೂನಾಥಂ ಸೀಳ್ದು ತನ್ನ ತೊಡೆಯೊಳ್ ಬೈಚಿ
ಟ್ಟೇನಿಲ್ಲಿಗೆ ಕಜ್ಜವೆನು
ತ್ತಾನಮ್ರಶಿರಸ್ಕನಾಗಿ ಮಿಗೆಪೊಡಗೊಂಡಂ ೬೦೮

ಗಳು ಮತ್ತೊಬ್ಬರ ಹಿಂಸೆಯನ್ನು ಬಯಸುವರು ? ೬೦೫. ಎಲೈ ದುರ್ಮದ ಚಿತ್ರನೆ ! ಇದನ್ನು ತಿಳಿದು ಏಕೆ ನನ್ನ ಶರೀರದಕಾಂತಿಯನ್ನು ಕುಂದಿಸಿ, ಜಪವನ್ನು ತೊರೆದೆ ? ನಿನಗೆ ಏನು ಫಲವುಂಟಾಯಿತು ? ನಿನಗೆ ನನ್ನಂತಹ ಆಪ್ತಮಿತ್ರರು ಇರುವರೆ ? ೬೦೬. ಹತ್ತು ಎನ್ನಲು ಹತ್ತಿದೆನು. ಇದರಿಂದ ಮನಸ್ಸಿಗೆ ವಿರೋಧವಾಯಿತೆ ? ಇನ್ನು ಮುಂದೆ ಇದು ನಿನಗೆ ಒಳ್ಳೆಯ ಕೆಲಸಕ್ಕೆಅವಕಾಶವಾಗುತ್ತದೆ. ಮುಂದಣ ಕೆಲಸ ಈಗ (ನಿನಗೆ) ಬಟ್ಟೆಯನ್ನು ಕೊಡುವೆನು. (ಈ ಪದ್ಯದಲ್ಲಿ 'ಪತ್ತು' ಎಂಬ ಶಬ್ದವನ್ನು ದ್ವಂದ್ವಾರ್ಥದಲ್ಲಿ ಬಳಸಿರುವುದನ್ನು ಗಮನಿಸಬಹುದು.) ವ॥ ಎಂಬುದಾಗಿ ಹೇಳಿ ೬೦೭. ಫಣಿರಾಜನು ಮೃದುವಾದ ಎರಡು ನಾಗವಸ್ತ್ರಗಳನ್ನು ಮಹಾರಾಜನಿಗೆ ಪ್ರೀತಿಯಿಂದ ಕೊಟ್ಟನು. ನಿನ್ನ ಶರೀರದ ದೋಷನಿವಾರಣೆಯಾಗಲು (ಕಲಿಪುರುಷ ನಿಂದ ಬಿಡುಗಡೆಯಾಗಲು) ಇದನ್ನು ಪೊದ್ದಕೂಡಲೇ ನಿನ್ನ ಶರೀರದ ತೇಜಸ್ಸು ವಿದಿತ ವಾಗುವುದು. ೬೦೮. ಮಹಾರಾಜನು ಆ ಎರಡು ನಾಗವಸ್ತ್ರಗಳನ್ನೂ ಸೀಳಿ ತನ್ನ ತೊಡೆಯಲ್ಲಿ ಅವಿತಿಟ್ಟು, ಇಲ್ಲಿ ಇನ್ನೇನು ಕೆಲಸ ಎನ್ನುತ್ತ ತಲೆಬಾಗಿ ರಭಸದಿಂದ ಹೊರ

ವ॥ ಆನ್ನೆಗಂ ಮುಂದೆ

ಗೋಪುರದೊಳ್ ತೆಱಂಬೊಳೆಯೆ ರತ್ನಕನತ್ಕಳಶಂಗಳಿಂದಮ
ಪ್ಪಾಪದ ಭಿತ್ತಿಯೊಳ್ ತರತರಂಬಿಡಿದಿರ್ಪ ಪತಾಕೆಯಿಂ ನವ
ದ್ವೀಪವಿದೆಂಬಿನಂ ನಯನಕೌತುಕವಾಗಿರೆ ಕಾಣಲಾಯ್ತಯೋ
ಧ್ಯಾಪುರ ರಾಜಧಾನಿ ಸಕಲಾವನಿಪಂಗಿದಿರೊಳ್ ಮುದಂ ಮಿಗಲ್ ೬೦೯

ಸುಂದರಿಯಪ್ಪ ಪಾರಿದಿವಮಂದಿರೆಯರ್ ಭವನೇತ್ರವಹ್ನಿಯಂ
ನಂದಿಸಿ ಶೀತಳಾಂಬುಕಳಶಾಮೃತವಂ ತಳಿದಂಗಸೌಷ್ಠವಂ
ಕುಂದದ ಮಾಟ್ಕೆಯಿಂ ಮಗುಟ್ದು ಕಾಮನನೆಬ್ಬಿಸಲೆಂದು ಸಂತತಂ
ನಿಂದಪರೆಂಬಿನಂ ಸೊಬಗಿನುನ್ನತಿಯಂ ತಳೆದರ್ ವಿಳಾಸದಿಂ ೬೧೦

ಸ್ತನಕಲಶಂ ಸುವರ್ಣಕಲಶಂ ನವನಿರ್ಮಳ ಶೀತಳಾಂಬು ಯೌ
ವನರಸವಾಸೆಗೆಯ್ವ ಸುವಿಟರ್ ಪಥಿಕರ್ ನಯನಪ್ರಭಾವಿಭಾ
ವನೆ ಶಿಶಿರಾಲಯಂ ಮೃದುಕಳಧ್ವನಿ ಸೀರ್ಪನಿ ಜಂಗಮಪ್ರಪಾ
ಘನತರಗೇಹವೆಂಬ ತೆಱದಿಂ ಮೆಱೆದತ್ತಬಲಾಕದಂಬಕಂ ೬೧೧

ಟನು. ವ॥ ಆ ವೇಳೆಗೆ ಮುಂದೆ, ೬೦೯. ಚಿನ್ನದ ಗೋಡೆಗಳಲ್ಲಿ ನಾನಾ ಬಗೆಯಾಗಿ ಆವರಿಸಿರುವ ಬಾವುಟಗಳಿಂದಲೂ ಗೋಪುರಗಳಲ್ಲಿ ಮಿರುಮಿರುಗುವ ರತ್ನದ ಕಳಶಗಳಿಂದಲೂ ಪ್ರಕಾಶಮಾನವಾಗಿರಲು ಇದೊಂದು ನವದ್ವೀಪವೋ ಎಂಬಂತೆ ಕಣ್ಣಿಗೆ ಬೆರಗಾಗಲು, ಸಮಸ್ತ ಭೂಮಂಡಲದ ರಾಜನಿಗೆ ಸಂತೋಷವುಕ್ಕುವಂತೆ ಅಯೋಧ್ಯಾಪುರ ರಾಜಧಾನಿ ಎದುರಿನಲ್ಲಿಯೇ ಕಂಡುಬಂದಿತು. ೬೧೦. ಸುಂದರಿಯರಾದ ಪಾರಿದಿವಮಂದಿರೆಯರು (ಸಾಲಭಂಜಿಕೆಯರು ?) ಈಶ್ವರನ ಹಣೆಗಣ್ಣಿನ ಉರಿಯನ್ನು ಆರಿಸಿ, ತಣ್ಣಗಿರುವ ಕಳಶದ ನೀರನ್ನು ಚಿಮುಕಿಸಿ ಶರೀರದ ಸೌಷ್ಠವವು ಕುಂದದ ರೀತಿಯಿಂದ ಮನ್ಮಥನನ್ನು ಪುನಃ ಎಬ್ಬಿಸಲೆಂದು ಸರ್ವದಾ ನಿಂತಿರುವರೋ ಎಂಬಂತೆ ಸೌಂದರ್ಯದ ಪರಾಕಾಷ್ಠೆಯನ್ನು ವಿಳಾಸದಿಂದ ತಾಳಿದರು. ೬೧೧. ಕಳಶದಂತಹ ಮೊಲೆಗಳೇ ಚಿನ್ನದ ಕಳಶ, ಯೌವನರಸವೇ ಹೊಸದಾದ ಪವಿತ್ರ ಶೈತ್ಯವಾರಿ, ಬಯಕೆಗೊಂಡ ವಿಟರೇ ಮಾರ್ಗಗಾಮಿಗಳು, ಕಣ್ಣಿನ ಕಾಂತಿಯ ವಿಲಾಸವೇ ಶೈತ್ಯಗೃಹ, ಕೋಮಲವಾದ ಮಂಜುಳನಾದವೇ ತುಂತುರುಹನಿಗಳು, ;ಸ್ತ್ರೀಸಮೂಹವು ಚಲಿಸುವ ಶ್ರೇಷ್ಠವಾದ ಅರವಟ್ಟಿಗೆಗಳು ಎಂಬಂತೆ ಮೆರೆದಿದ್ದಿತು. (ಪ್ರಕೃತ ಪದ್ಯದಲ್ಲಿ ಸ್ತ್ರೀಯರ ಅವಯವಾದಿಗಳನ್ನು ಅರವಟ್ಟಿಗೆಯ ವಿವಿಧ ಲಕ್ಷಣಗಳೊಂದಿಗೆ ಸಮೀಕರಿಸಿದೆ.)

ಕರತಳಮಂಬುಜಂ ನಿಡುವೆರಲ್ ಕುಮುದಂ ಕರಜಂ ಮೃಣಾಳವ
ಲ್ಲರಿ ಪೊರೆದಿರ್ದಲಕ್ತಕರಸಂ ಮಕರಂದರಸಂ ಮಹೋರ್ಮಿಕಾ
ವಿರಚನೆಯೂರ್ಮಿ ಕಾಂತಿ ಕಮನೀಯ ಜಲಂ ತೆರೆಗಳ್ ಲಸತ್ಪ್ರಪಾ
ತರುಣಿಯರಂಬುಜಾಕರವಿಳಾಸಮನೀವರಸಂಖ್ಯಪಾಂಥರೊಳ್ ೭೧೨

ವ|| ಅದಱಿಂ ಮುಂದೆ

ಅಗೆವೊಯ್ದಂ ಮನ್ಮಥಂ ಭಾಸುರಪುರವರ ಭೂಜಾತಸದ್ಬೀಜಮಂ ಧಾ
ತ್ರಿಗಲಂಕಾರಂ ಪ್ರಜಾಸಂತತಿಯಭಿಮತಚಿಂತಾಫಲಂ ಕುಂದದಿರ್ಪಂ
ತಗರುಶ್ರೀಖಂಡ ಚಾಂಪೇಯಕ ಕುರವಕ ಪುನ್ನಾಗ ಮಾಕಂದ ಶಾಲಾ
ದಿಗಳಿಂ ಪೊಪಿಂದಯೋಧ್ಯಾನಗರಿಯ ಬಹಿರುದ್ಯಾನಸಂತಾನವಾಗಲ್ ೭೧೩

ವಿಹಗಪ್ರಧ್ವಾನಗಾನಂ ಭ್ರಮರನಿವಹಝುಂಕಾರಗಂಭೀರವಾದ್ಯಂ
ಬಹುಶಾಖಾಂದೋಳಲಾಸ್ಯಂ ಮಧುಕಣಗಣ ಪುಷ್ಪಾಂಜಲಿಕ್ಷೇಪಮುದ್ಯತ್
ಸಹಕಾರೋರ್ವೀಶ್ವರಾಂಗಂ ನೆಲಸಿರೆ ವಿಮಳಶ್ರೀಯನಾಳ್ದಿರ್ದಯೋಧ್ಯಾ
ಬಹಿರುದ್ಯಾನಂ ವಿಳಾಸಂಬಡೆದುದು ನಟರಂಗಸ್ಥಳಂಬೊಲ್ ನಿತಾಂತಂ ೭೧೪

೭೧೨. ಅಂಗೈ ತಾವರೆ, ನೀಳವಾದ ಬೆರಳು ಕನ್ನೈದಿಲೆ, ಉಗುರು ತಾವರೆಯ ಬಳ್ಳಿ, ಲೇಪಿಸಿಕೊಂಡಿದ್ದ ಅಲಕ್ತಕರಸವು ಮಕರಂದರಸ, (ಬಂಡು), ದೊಡ್ಡ ದೊಡ್ಡ ನಿರಿಗೆಗಳ ವಿನ್ಯಾಸವು ಅಲೆಯಕಾಂತಿ, ಮನೋಜ್ಞವಾದ ನೀರು ತೆರೆಗಳು ಎಂಬಂತೆ ಶೋಭಿಸುವ ಅರವಟ್ಟಿಗೆಯ ಕೋಮಲೆಯರು ಅಸಂಖ್ಯಾತವಾದ ಪಥಿಕರಲ್ಲಿ ತಾವರೆಯ ಕೊಳದ ವಿಲಾಸವನ್ನು ಉಂಟುಮಾಡುತ್ತಿದ್ದರು. ವ|| ಅಲ್ಲಿಂದ ಮುಂದೆ ೭೧೩. ಸುಗಂಧಯುಕ್ತವಾದ ಮೂಲಿಕೆ ; ಶ್ರೀಗಂಧ, ಸಂಪಿಗೆ, ಮದರಂಗಿ, ಸುರಹೊನ್ನೆ, ಮಾವು (ಮೊದಲಾದ) ಸಸ್ಯಸಂಪತ್ತಿನಿಂದ ಕೂಡಿ, ಕೀರ್ತಿಶಾಲಿಯಾಗಿ ಅಯೋಧ್ಯಾಪಟ್ಟಣದ ಹೊರವಳಯದ ಉದ್ಯಾನದ ಸಂತಾನವೆನ್ನಿಸಿ, ಭೂಮಿಗೆ ಶೋಭಾಯಮಾನವಾಗಿ ಪ್ರಜಾಸಮೂಹದ ಅಭಿಲಾಷೆಯ ಶ್ರೇಷ್ಠ ಫಲವು ಕಾಂತಿಹೀನವಾಗದಂತೆ ಮನ್ಮಥನು ಪ್ರಕಾಶಮಾನವೂ ಶ್ರೇಷ್ಠವೂ ಆದ ಊರಿನ ಗಿಡಗಳ ಉತ್ತಮ ಬೀಜವನ್ನು ಬಿತ್ತಿದನು. ೭೧೪. ಪಕ್ಷಿಗಳ ಕೂಜನದ ಗಾನ, ದುಂಬಿಗಳ ಸಮೂಹದ ಝೇಂಕಾರದ ಗಂಭೀರವಾದ್ಯ, ನಾನಾ ಬಗೆಯಾದ ಕೊಂಬೆಗಳ ಲೀಲಾನೃತ್ಯ, ಮಧುಬಿಂದುಸಮೂಹದಿಂದ ಕೂಡಿದ ಹೂವಿನ ಬೊಗಸೆಯ ಎರಚುವಿಕೆ, ಎತ್ತರವಾದ ಸಿಹಿಮಾವಿನಮರವೆಂಬ ಮಹಾರಾಜನ ಅಂಗಭಂಗಿಯು ನೆಲಸಿರಲು, ಪವಿತ್ರಲಕ್ಷ್ಮಿಯನ್ನೇ ಆಳುತ್ತಿದ್ದ. ಅಯೋಧ್ಯೆಯ ಹೊರವಳಯದ ಉದ್ಯಾನವು ನಾಟ್ಯರಂಗದಂತೆ ಸರ್ವದಾ ವಿಲಾಸವನ್ನು ಪಡೆಯಿತು. (ಪ್ರಕೃತಪದ್ಯದಲ್ಲಿ ನಾಟ್ಯರಂಗದ ಸರ್ವ ಲಕ್ಷಣಗಳನ್ನೂ ಸಾದೃಶ್ಯಮೂಲಕವಾಗಿ ವರ್ಣಿಸ

ವ(ದ?)ರದಳಿತಪ್ರಸೂನ ಮಕರಂದರಸಾಮೃತಪೀನಪಾನದಿಂ
ಮೊರೆವ ಮಧುವ್ರತಂ ಮದಮಧುವ್ರತಮಂ ಕಮನೀಯಪಂಚಮ
ಸ್ವರದಿನದಿರ್ಪವನ್ಯಭೃತವನ್ಯಭೃತಧ್ವನಿಯಂ ಕನರ್ನಿರಂ
ತರವನುವಾದನಂಬಡೆವ ರಾಜಶುಕಂ ಪಿರಿದಾ ವನಾಂತದೊಳ್ ೬೧೫

ದ್ವಿಜಸಂತತಿ ಋಕ್ಶಾಖಾ
ನಿಜಾಶ್ರಿತಸ್ಥಿತಿಯಿನಿರ್ಪವೊಲ್ ತದ್ವನದೊಳ್
ದ್ವಿಜಸಂತತಿ ಋಕ್ಶಾಖಾ
ನಿಜಾಶ್ರಿತಸ್ಥಿತಿಯಿನಿರ್ಪುದೆನಲೇನೊಗಟ್ವೆಂ ೬೧೬

ಸಾಲ್ವಿಡಿದಾಮ್ರಭೂಜದೆಳಗೊಂಬುಗಳೊಳ್ ಪಸುರ್ವೆತ್ತು ಬಿಣ್ಪಿನಿಂ
ನೇಲ್ವ ಫಲಂ ಸುವರ್ಣಘಟದಂದದಿನಿಪ್ಪೆಳನೀರ ಭಾರದಿಂ
ಜೋಲ್ವುದು ನಾಳಿಕೇರಮಮರ್ದಂ ಸವಿಯಿಂ ಬರಪಾರ್ದ್ವ ದಟ್ಟಿಸಲ್
ಸಾಲ್ವ ಮಡಲ್ತ ಬಕ್ಕೆವಲಸೊಪ್ಪುಗುಮಾ ವನದೊಳ್ ನಿರಂತರಂ ೬೧೭

ಲಾಗಿದೆ.) ೬೧೫. ಚೆನ್ನಾಗಿ ಅರಳಿದ ಹೂವುಗಳ ಬಂಡಿನ ರಸಾಮೃತವನ್ನು ಹೀರುವುದರಿಂದ ಮೊರೆಯುತ್ತಿರುವ ದುಂಬಿ, ಮತ್ತೇರಿದ ದುಂಬಿಯನ್ನು ಮನೋಜ್ಞವಾದ ಪಂಚಮಸ್ವರದಿಂದ ನಡುನಡುಗಿಸುವ ಕೋಗಿಲೆ, ಕೋಗಿಲೆಯ ಧ್ವನಿಯನ್ನು ಒಗಚಾಗುವಂತೆ ಸರ್ವದಾ ಅನುವಾದಿಸುವಂತಿರುವ (ಅನುರಣನ ಮಾಡುತ್ತಿರುವ) ಅರಗಿಳಿಗಳು ಆ ವನದಲ್ಲಿ ಬೇಕಾದಹಾಗಿದ್ದುವು. (ಪ್ರಕೃತ ಪದ್ಯದಲ್ಲಿ ಕವಿ ಪ್ರಯೋಗಿಸಿರುವ ಮುಕ್ತ ಪದಗ್ರಾಸಾಲಂಕಾರವನ್ನು ಗಮನಿಸತಕ್ಕುದು, ಎಂದರೆ, ಒಂದು ವಾಕ್ಯವು ಯಾವ ಪದದಿಂದ ಮುಕ್ತಾಯವಾಗುವುದೋ, ಅದೇ ಪದದಿಂದ ಮುಂದಿನ ವಾಕ್ಯವನ್ನು ಮೊದಲು ಮಾಡುವುದು. ಒಂದಕ್ಕಿಂತಲೂ ಇನ್ನೊಂದು ಅಧಿಕವಾದುದು ಎಂಬ ಅಭಿಪ್ರಾಯವು ಇಲ್ಲಿ ಸ್ವವಿದಿತವಾಗುತ್ತದೆ.) ೬೧೬. ಬ್ರಾಹ್ಮಣ ಸಮೂಹವು ಋಗ್ವೇದದ ಶಾಖೆಗಳ ಮಂತ್ರಗಳನ್ನು ಆಶ್ರಯಿಸಿರುವಂತೆಯೇ, ಆ ಅರಣ್ಯದಲ್ಲಿ ಹಕ್ಕಿಗಳ ಬಳಗವು ವೃಕ್ಷ(?)ಗಳ ಕೊಂಬೆಗಳನ್ನು ಆಶ್ರಯಿಸಿರುವುವು ಎನ್ನಲು ಏನು ಹೊಗಳಲಿ ? (ಪ್ರಕೃತ ಪದ್ಯವು ಯಮಕಾಲಂಕಾರಕ್ಕೆ ಒಳ್ಳೆಯ ಉದಾಹರಣೆ. ಕಂದಪದ್ಯದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಶಬ್ದಗಳ ಪುನರಾವೃತ್ತಿ ಕಂಡುಬಂದರೂ, ಅರ್ಥಭೇದದಿಂದ ಅವು ಬೇರೆಬೇರೆಯಾಗುತ್ತವೆ.) ೬೧೭. ಸಾಲುಗಟ್ಟಿದ್ದ ಮಾವಿನಮರದ ಎಳೆಕೊಂಬೆಗಳಲ್ಲಿ ಹಸುರಾಗಿ ಭಾರದಿಂದ ತೂಗಾಡುತಿದ್ದ ಹಣ್ಣುಗಳೂ, ಬಂಗಾರದ ಬಿಂದಿಗೆಯಂತೆ ಇರುವ ಎಳನೀರ ಭಾರದಿಂದ ಜೋಲಾಡುತ್ತಿದ್ದ ತೆಂಗಿನಮರಗಳೂ, ಅಮೃತವನ್ನು ರುಚಿಯಿಂದ ಮೀರಿಸುವಂತೆ (?) (ಕ್ಷೀಣಿಸುವಂತೆ ?) ಝುಂಕಿಸಲು ಸಾಕಾಗುವಂತೆ ಕವಲೊಡೆದ ಬಕ್ಕೆವಲಸು (ಹಲಸಿನ ಹಣ್ಣಿನಲ್ಲಿ ಒಂದು ಪ್ರಭೇದ)ಗಳೂ ಆ ವನದಲ್ಲಿ ಸರ್ವದಾ ಒಪ್ಪು

ಹೊದಱಿಸೆಯಲ್ ಮಡಲ್ತ ಮರುಗಂ ತೆನೆಗಟ್ಟಿ[ದ] ಪಚ್ಚೆ ಕಂಪುತೀ
ವಿದ ದವನಂ ನಿಮಿರ್ದ ಮುಡಿವಾಳವರಲ್ವಿರುವಂತಿ ಮೊಗ್ಗೆ ತುಂ
ಬಿದ ಪೊಸ ಜಾಜಿಯಲ್ಲುಗುವ ಮಲ್ಲಿಗೆ ಮತ್ತಮನೇಕಪುಷ್ಪಸಂ
ಪದವೊಗೆದಿರ್ಪ ತದ್ವನವಿಶೇಷವಶೇಷಜನಪ್ರಿಯಾವಹಂ ೬೧೮

ಲಲಿತಲತಾಕುಮಾರಿ ಸಹಕಾರಕುಮಾರನನಪ್ಪಿ ಕೂರ್ಮೆಯಿಂ
ನಲಿದೊಡಗೂಡಿ ಪುಷ್ಪವತಿಯಾಗಿ ಸುಗಂಧವ ಪೂರ್ಣಗರ್ಭದಿಂ
ಸಲೆ ಮಕರಂದವಂ ಪಡೆದು ಭೃಂಗಚರಂ ಬರಲಿತ್ತು ತದ್ವನ
ಸ್ಥಳಗೃಹದೊಳ್ ಗೃಹಸ್ಥಸುಖಮಂ ತಳೆದಿರ್ಪಳತೀವರಾಗದಿಂ ೬೧೯

ಅರಸಂ ಮನ್ಮಥಮುನ್ಮದಾಳಿ ಸಚಿವಂ ಕೀರಂ ಸಖಂ ಸೈನಿಕಂ
ಪರಪುಷ್ಟಾದಿವಿಹಂಗಮಂ ನಿಜಧನಂ ಮಂದಾನಿಲಂ ಕೋಂಟೆ ಮಾ
ಮರನೆಲ್ಲಾ ಕುಜಸಂಕುಳಂ ಜನಪದಂ ಚೆಲ್ವಾಗೆ ಸಾಮ್ರಾಜ್ಯ ಸುಂ(ದೊಂ?)
ದ(ದಿ?)ರಮಂ ಸೂಚಿಸುಗುಂ ಮನೋಹರವನಂ ಸಪ್ತಾಂಗ ಸಂಪತ್ತಿಯಿಂ ೬೨೦

ವ॥ ಅಲ್ಲಿಂ ಮುಂತೆ

ಪೊಂಬೆಸನೆಂಬಿನಂ ಕಣಿಶಸಂತತಿ ಪೊಣ್ಮ(ಣ್ಮೆ?) ಸುವರ್ಣಕಾಂತಿಯಿಂ
ದಿಂಬಿನಿತಿಲ್ಲದಂತು ಧರೆ ನುಣ್ಪುಸುರಿಂ ಪೊರೆಯೇಱ(ಱ?) ಚೆಲ್ವನಾ

ವಂತಿದ್ದುವು. ೬೧೮. ಗುಂಪಾಗಿ ತೋರಿಬರುವ ಕವಲೊಡೆದ ಮರುಗ, ತೆನೆಕಟ್ಟಿದ ಪಚ್ಚೆ, ಸುವಾಸನಾಯುಕ್ತವಾದ ದವನ, ಚಾಚಿಕೊಂಡಿದ್ದ ಮುಡಿವಾಳ, ಅರಳುವ ಇರುವಂತಿಗೆ, ಮೊಗ್ಗುಗಳು ತುಂಬಿದ್ದ ಹೊಸ ಜಾಜಿ, ಅಲ್ಲಲ್ಲಿ ಚೆಲ್ಲಿರುವ ಮಲ್ಲಿಗೆ, ಅಲ್ಲದೆ ಅನೇಕ ಪುಷ್ಪಸಂಪತ್ತೇ ಒದಗಿದಂತಿರುವ ಆ ವನದ ವಿಶೇಷವು ಸಮಸ್ತ ಜನರಿಗೂ ಪ್ರಿಯಕರವಾಗಿತ್ತು. ೬೧೯. ಮನೋಹರವಾದ ಬಳ್ಳಿಯೆಂಬ ವನಿತೆ ಮಾವೆಂಬ ಯುವಕನನ್ನು ತಬ್ಬಿಕೊಂಡು, ಪ್ರೇಮದಿಂದ ನಲಿದು ಒಡಗೂಡಿ, ಹೂಗಳನ್ನು ಬಿಟ್ಟು (ರಜಸ್ವಲೆಯಾಗಿ) ಪುಷ್ಟಿಗೊಂಡು (ಪೂರ್ಣಗರ್ಭವತಿಯಾಗಿ) ಸುವಾಸನೆಯನ್ನು ತುಂಬಿದ ಬಂಡನ್ನು ಗಳಿಸಿ ದುಂಬಿಯೆಂಬ ಸೇವಕನು ಬರಲು ದಾನ ನೀಡಿ, ಆ ವನಸ್ಥಳವೆಂಬ ಮನೆಯಲ್ಲಿ ತುಂಬಿದ ಒಲವಿನಿಂದ ಗೃಹಸ್ಥಸುಖವನ್ನು ತಳೆದಿರುವಳು. ೬೨೦. ಮದನನೇ ರಾಜ, ಮತ್ತೇರಿದ ದುಂಬಿಯೇ ಮಂತ್ರಿ, ಗಿಳಿಯೇ ಗೆಳೆಯ, ಕೋಗಿಲೆಯೇ ಮೊದಲಾದ ಹಕ್ಕಿಗಳು ಸೇನೆ, ಮಂದಮಾರುತವೇ ನಿಜವಾದ ಸಂಪತ್ತು, ಮಾವಿನ ಮರವೇ ಕೋಟೆ, ಸಮಸ್ತ ವೃಕ್ಷ ಸಮೂಹವೂ, ಪ್ರಜೆಗಳೂ ಸೊಬಗನ್ನು ಬೀರಲು, ಚಿತ್ತಾಕರ್ಷಕವಾದ ಉದ್ಯಾನವು ಸಪ್ತಾಂಗ ಸಂಪತ್ತಿನಿಂದ (ಕೂಡಿ) ಸಾಮ್ರಾಜ್ಯದ ಇರುವಿಕೆಯನ್ನು ಸೂಚಿಸುತ್ತಿತ್ತು. ವ॥ ಅಲ್ಲಿಂದ ಮುಂದೆ ೬೨೧. ಹೊಂಗೆಲಸವೆಂಬಂತೆ ಬತ್ತದ ತೆನೆಯ ಸಮೂಹವು ಹೊಮ್ಮಲು, ಚಿನ್ನದ ಕಾಂತಿಯಿಂದ ಸ್ವಲ್ಪವೂ ಎಡೆಯಿಲ್ಲದಂತೆ ಭೂಮಿಯು ಮೃದುವಾದ

ಯ್ಯಂಬುಜನೇತ್ರನಂಗರುಚಿಯಿಂ ವಸುಧಾಂಗನೆ ಪಚ್ಚುಗೊಂಡಳೆಂ
ದೆಂಬಭಿಶಂಕೆಯಿಂ ಕಟಮಶಾಲಿಯ ಶಾಲಿವನಂ ಜನಾವನಂ ೬೨೧

ಮಿಸುಪ ವನಶಾಲಿವನದಾ
ಪಸುರ್ಪು ನಳನಳಿಸಿ ಸುತ್ತಲುಂ ಪರ್ವಲ್ ನಾ
ಲ್ದೆಸೆ ಹರಿದಾಖ್ಯವನಾಂಪುದು
ಪೊಸದೇ ಸಂಸರ್ಗಗುಣವದೇಂ ಕೇವಳಮೇ ೬೨೨

ಶ್ರೀಶಾಲಿ ಶಕ್ತಶಾಲಿ ಮ
ಹಾಶಾಲಿ ಕದಂಬಶಾಲಿ ರಾಜಾನ್ನಂ ನಾ
ನಾಶಾಲಿ ಕಟವೆ ಮೆಣಸಿಗೆ
ಕೇಸರಿವೆಸರಿಪ್ಪೆಗಟವೆ ಶಾಲಿವಿಶೇಷಂ ೬೨೩

ವ॥ ಅಲ್ಲಿ

ಕಟವೆಯ ಕೆಯ್ಗೆ ಪಾಯ್ವ ಗಿಳಿವಿಂಡುಗಳಂ ದಸಿಗೈದು ಸೋವ ಕೋ
ಮಳೆಯರ ಸಣ್ಣ ನುಣ್ಗೊರಳನಾಲಿಸಿ ಮನ್ಮಥಚಾಪ ಶಿಂಜಿನೀ
ಕಳಕಳಶಂಕೆಯಿಂ ಪಥಿಕ ಕಾಮುಕಸಂತತಿ ತಮ್ಮ ಚಿತ್ತವಿ
ಹ್ವಳತೆಯನೆಯ್ದೆ ಮುಂದುಗಿಡುವರ್ ಕಡುಪಿಂ ನಡೆಗೆಟ್ಟು ಬಟ್ಟೆಯೊಳ್ ೬೨೪

ಹಸುರಿನಿಂದ ಹೊರೆ ಹೆಚ್ಚಲು, ಜನಸಂರಕ್ಷಕವಾದ ಒಳ್ಳೆಯ ಬತ್ತದ ಗದ್ದೆಯು ಭೂದೇವಿಯು ಪುಂಡರೀಕಾಕ್ಷನಾದ ಶ್ರೀವಿಷ್ಣುವಿನ ದೇಹಕಾಂತಿಯನ್ನು ಹಂಚಿಕೊಂಡಳೆಂಬ ಸಂದೇಹವನ್ನು ಉಂಟುಮಾಡುವಂತೆ ಮನೋಹರವಾಗಿದ್ದಿತು. ೬೨೨. ಹೊಳೆಯುವ ಉದ್ಯಾನ, ಬತ್ತದ ಗದ್ದೆಯ ಹಸುರುಬಣ್ಣವು ನಳನಳಸಿ ಸುತ್ತಮುತ್ತಲೂ ಹಬ್ಬಿರಲು, ನಾಲ್ಕು ದಿಕ್ಕುಗಳೂ ಹಸುರಿನ ಹೆಸರನ್ನು (ಹರಿದಂತ= ದಿಗಂತ) ತಳೆಯುವುದು ಹೊಸತಾದುದೆ ? ಸಹವಾಸಗುಣವೆನ್ನುವುದು ಸಾಮಾನ್ಯವಾದುದೇ ! ೬೨೩. ಶ್ರೀಬತ್ತ, ಕೆಂಪು ಬತ್ತ, ದೊಡ್ಡ ಬತ್ತ, ಕದಂಬ ಬತ್ತ, ರಾಜಾನ್ನ (ಎಂಬ) ನಾನಾ ಬಗೆಯಾದ ಬತ್ತಗಳಿದ್ದುವು. ಮೆಣಸಿಗೆ ಕೇಸರಿಯ ಹೆಸರೂ, ಹಿಪ್ಪೆಗೆ ಬತ್ತದ ಪ್ರಕಾರವೆಂಬುದೂ ಸರಿಹೊಂದುತ್ತವೆಯೆ ? (ಸಾಧ್ಯವೆನ್ನಲಾದೀತೆ ?) ವ॥ ಅಲ್ಲಿ ೬೨೪. ಬತ್ತದ ಗದ್ದೆಗಳಿಗೆ ಹಾರಿಬರುವ ಗಿಳಿಗಳ ಹಿಂಡುಗಳನ್ನು ಕೂಗಿ ಅಟ್ಟುವ ಕೋಮಲೆಯರ ಸಣ್ಣ ನುಣ್ದನಿಯನ್ನು ಕಾಮುಕರಾದ ಮಾರ್ಗಗಾಮಿಗಳ ಸಮೂಹವು ಕೇಳಿ, ಮನ್ಮಥನ ಬಿಲ್ಲಿನದೆಯೆ ಶಬ್ದವೆಂಬ ಭ್ರಾಂತಿಯಿಂದ, ತಮ್ಮ ಮನಸ್ಸು ಹೊಯ್ದಾಡಲು. ದಾರಿಯಲ್ಲಿ

14

ಏಕೆಯೊ ಮಾಡಿದಂ ವಿಧಿ ಘಟಸ್ತನವಂ ನಡುಸಣ್ಣವಂ ಮೃಗಾ
ನೀಕವನಟ್ಟುಚಿಂ ಪರಿದು ಸೋವ ಬಲಂ ಕಿಡುವಂತು ಭಂಗಿಸಲ್
ಕೋಕಿಳ ರಾಜಕೀರತತಿ ಬಂದು ಬಟಲ್ಕೆಯನೀವವೆನ್ನವೆಂ
ಬಾಕುಳಚಿತ್ತದಿಂ ಕಟಮದೊಳ್ ನೆಲಸಿರ್ಪುದು ಪಾಮರೀಜನಂ ೬೨೫

ತೆನೆಯಂ ಕರ್ಚಿ ನಭಕ್ಕೆ ಪಾಯ್ವ ಗಿಳಿವಿಂಡಂ ಮಂಡಲಾಕಾರವಂ
ಕನಲಾಂತೀಕ್ಷಿಪ ಪಾಮರೀಜನದ ನೇತ್ರಜ್ಯೋತ್ಸ್ನೆ ನೀಳ್ದತ್ತನಂ
ಗನೃಪಾಲಂಗೆ ತಳಿರ್ತ ಪೀಲಿದಟಿಗೊಂಡಿಂದೂಪಲೋದ್ದಂಡ ನೂ
ತನದಂಡಂ ನೆಲೆಗೊಂಡವೊಲ್ ವಿಟಮನಸ್ಸಂಪ್ರೀತಿಯಿಂ ಕಾಂತಿಯಿಂ ೬೨೬

ಕವಣೆಯೊ ಕಾಮಪಾಶವೊ ಪೊದಟ್ಟಿಡುಗಲ್ಗಳೊ ಪಾಯ್ವನಂಗಬಾ
ಣವೊ ಗಿಳಿ ಸೋವ ನುಣ್ದನಿಯೊ ಮನ್ಮಥಮಂತ್ರವೊ ಪುಲ್ಲೆವಿಂಡು ಬೆ
ಚ್ಚುವ ಬಳೆಗೆಯ್ಯ ಮೆಲ್ಲುಲಿಪೊ ನಲ್ಲರ ಲಲ್ಲೆಯೊ ಪೇಟೆನಲ್ ವಿಳಾ
ಸವನೆಡೆಗೊಂಡ ಪಾಮರಿಯರೊಪ್ಪುವರಾ ಕಟಮಪ್ರದೇಶದೊಳ್ ೬೨೭

ಪೊಱವೊಟಲಚ್ಚ ನಂದನವನಂ ಕಟಮಸ್ಥಳಿ ಪುಷ್ಪವಾಟವೊ
ಳ್ಗೆಱೆ ಕೃತಕಾದ್ರಿ ಶೈತ್ಯಜಲಶಾಲೆ ಗಜಾಶ್ವವಿಹಾರಭೂಮಿ ಕಾ

ಅತ್ಯಧಿಕವಾಗಿ ಹೆಜ್ಜೆ ತಪ್ಪಿ ಕಂಗೆಡುವರು. ೬೨೫. ಮೃಗಗಳ ಸಮೂಹವನ್ನು ಪ್ರೀತಿಯಿಂದ ಓಡಿಸಿ ಬೆನ್ನಟ್ಟುವ ಶಕ್ತಿಯು ಕೆಡುವಂತೆ ಹಂಗಿಸಲು, ಬ್ರಹ್ಮನು ಕುಂಭದಂತಹ ಮೊಲೆಯನ್ನೂ, ತೆಳುವಾದ ಸೊಂಟವನ್ನೂ ಏಕೆ ನಿರ್ಮಿಸಿದನೋ ? ಕೋಗಿಲೆ, ಅರಗಿಳಿಗಳ ಹಿಂಡು ಬಂದು (ತಮಗೆ) ಆಯಾಸವನ್ನುಂಟುಮಾಡಿದುವು ಎನ್ನದೆ ಇರುತ್ತವೆಯೆ ? ಎಂಬ ವ್ಯಾಕುಲ ಮನಸ್ಸಿನಿಂದ ಸ್ತ್ರೀಯರ ಸಮೂಹವು ಬತ್ತದ ಗದ್ದೆಯಲ್ಲಿ ಬೀಡು ಬಿಟ್ಟಿತ್ತು. ೬೨೬. ತೆನೆಯನ್ನು ಕಚ್ಚಿಕೊಂಡು ಆಕಾಶಕ್ಕೆ ಹಾರುವ ಗಿಳಿಗಳ ಸಮೂಹವನ್ನೂ, ಮಂಡಲಾಕೃತಿಯನ್ನು ಕೋಪಗೊಂಡು ನೋಡುವ ಹಳ್ಳಿಗಾಡಿನ ಸ್ತ್ರೀಯರ ಕಣ್ಣ ಬೆಳದಿಂಗಳು, ವಿಟರ ಮನಸ್ಸಂತೋಷದಿಂದಲೂ, ಕಾಂತಿಯಿಂದಲೂ, ಮನ್ಮಥನಿಗೆ ವಿಕಸಿತವಾದ ನವಿಲುಗರಿಯ ಕೊಡೆಯನ್ನು ಹಿಡಿದು, ಚಂದ್ರಕಾಂತಶಿಲೆಯ ನಿಡಿದಾದ ಹೊಸದಂಡವನ್ನು ಅಣಿಗೊಳಿಸಿದಂತೆ ನೀಳವಾಗಿ ಹಬ್ಬಿತ್ತು. ೬೨೭. ಕವಣೆಗಲ್ಲೊ ಕಾಮಪಾಶವೊ, ಹೊರಹೊಮ್ಮಿದ ಇಡುಗಲ್ಲುಗಳೊ ಹಾಯುವ ಮನ್ಮಥನ ಬಾಣವೊ, ಗಿಳಿಯನ್ನು ಅಟ್ಟುವ ಇಂಚರವೊ ಮನ್ಮಥನ ಮಂತ್ರವೊ, ಜಿಂಕೆಗಳ ಗುಂಪು ಹೆದರುವ ಬಳೆಗೆಯ್ಯ ಮೆಲ್ದನಿಯೊ, ಪ್ರಿಯರಲಲ್ಲೆಯೊ ಹೇಳು ಎಂಬಂತೆ, ವಿಲಾಸದಿಂದ ಒಡಗೂಡಿದ ಗ್ರಾಮೀಣಸ್ತ್ರೀಯರು ಆ ಬತ್ತದ ಗದ್ದೆಗಳಲ್ಲಿ ಒಪ್ಪುತ್ತಿದ್ದರು. ೬೨೮. ಊರ ಹೊರಗಿನ ಶ್ರೇಷ್ಠವಾದ ನಂದನವನ, ಗದ್ದೆಗಳ ಎಡೆ, ಹೂವಿನ ತೋಟ, ಒಳ್ಳೆಯ ಕೆರೆ, ಕೃತಕಪರ್ವತ, ತಣ್ಣೀರಿನ ಮಂದಿರ, ಆನೆಕುದುರೆಗಳ ವಿಹಾರಸ್ಥಳ, ಕಾಯಿಗಳ

ಯ್ದುಱುಗಲ ಸಾಲ್ಮರಂ ಪರಿದು ಕುಂದದ ನೀರ್ ಪರಿಕಾಲ್ ನಿರಂತರಂ
ಮೆಱೆವಿನೆಗಂ ಪ್ರಸಿದ್ಧಿವಡೆದತ್ತು ನೆಗಟ್ತೆಗಯೋಧ್ಯಪಟ್ಟಣಂ ೭೨೮

ಆಕಾಶಂ ನಿಕಷೋಪಲಂ ತನಗೆನಲ್ ಚೆಲ್ವಾದ ಹೇಮೋನ್ನತ
ಪ್ರಾಕಾರಂ ಶರಧಿಪ್ರಮಾಣಾ ಪರಿಖಾಚಕ್ರಂ ಮಹಾಟ್ಟಾಳಕಾ
ನೀಕಂ ತಿದ್ದಿ ನಿಮಿರ್ದ ಡೆಂಕಣಿಮಿಳಿರ್ ನಾನಾ ಪತಾಕಾಧ್ವಜ
ವ್ಯಾಕೀರ್ಣಂ ಸುರಶೈಲಮಂ ನೆನೆಯಿಸಲ್ ಪೋಲ್ದತ್ತಯೋಧ್ಯಾಪುರಂ ೭೨೯

ಪವಣಿಲ್ಲದ ಗೋಪುರವೊ
ಪ್ಪುವ ಸತ್ಕುಲರಾಜಹಂಸವೀಧಿಯಿನಾಕಾ
ಶವನಿಱಿಕೆಯ್ದುಗ್ಗಂ ನಾನಾ
ನವರತ್ನ ವಿತಾನದಿಂದಯೋಧ್ಯಾನಗರಂ ೭೩೦

ಗೋಪುರದಿಂ ರಂಜಿಪಯೋ
ಧ್ಯಾಪುರಿ ಸುಮನಃಪ್ರಕೀರ್ಣ ಪುಣ್ಯಾವಸಥಾ
ಪ್ಯಾಪದ ಕಳಶೋತ್ಕರದಿಂ
ಗೋಪುರಮಂ ಪೋಲ್ವುದೆಂಬುದೊಂದಚ್ಚರಿಯೇ ೭೩೧

ಗೊಂಚಲುಳ್ಳ ಸಾಲುಗಿಡಗಳು, ಹರಿದೂ ಹರಿದು ಕಡಿಮೆಯಾಗದ ನೀರಿನ ಕಾಲುವೆಗಳು ಸರ್ವದಾ ಮೆರೆಯುವ ಮಟ್ಟಿಗೆ ಅಯೋಧ್ಯಾಪಟ್ಟಣವು ಕೀರ್ತಿಯಿಂದ ಪ್ರಸಿದ್ಧಿಯನ್ನು ಪಡೆದಿತ್ತು. ೭೨೯. ಆಕಾಶವೇ ತನಗೆ ಒರೆಗಲ್ಲೆಂಬಂತೆ ಸುಂದರವೂ ಎತ್ತರವೂ ಆದ ಬಂಗಾರದ ಪೌಳಿಗಳೂ, ಸಮುದ್ರದ ಆಳತೆಯುಳ್ಳ ಸುತ್ತುಗಟ್ಟಿದ ಕಂದಕವೂ, ದೊಡ್ಡ ದೊಡ್ಡ ಆಳ್ವೇರಿಗಳ ಸಮೂಹವೂ, ಅಚ್ಚುಕಟ್ಟಾಗಿ ಮೇಲೆ ಚಾಚಿರುವ ಬುರುಜಿನ ತೆನೆಗಳೂ, ದಿಕ್ಕು ದಿಕ್ಕುಗಳಲ್ಲೆಲ್ಲ ಅಲ್ಲಾಡುತ್ತಿರುವ ನಾನಾ ವಿಧವಾದ ಬಾವುಟಗಳೂ, (ಇರುವ) ಅಯೋಧ್ಯಾಪಟ್ಟಣವು ಕನಕಾಚಲವನ್ನು ಸ್ಮರಿಸುವಂತೆ ಹೋಲುತ್ತಿದ್ದಿತು. ೭೩೦. ಆಳತೆಗೆ ಎಟುಕದ ಗೋಪುರಗಳಿಂದಲೂ, ಶ್ರೇಷ್ಠವಂಶದ ರಾಜಪ್ರಮುಖರ ಬೀದಿಗಳಿಂದಲೂ, ಬಗೆಬಗೆಯಾದ ನವರತ್ನಗಳ ಮೇಲ್ಕಟ್ಟುಗಳಿಂದಲೂ ಅಯೋಧ್ಯಾ ಪಟ್ಟಣವು ಆಕಾಶವನ್ನೇ ಮೀರಿಸುವಂತಿದ್ದಿತು. ೭೩೧. ಗೋಪುರಗಳಿಂದ ವಿರಾಜಿಸುವ ಅಯೋಧ್ಯಾಪಟ್ಟಣವು ಹೂವುಗಳಿಂದ ಕಿಕ್ಕಿರಿದು ಪುಣ್ಯಾಶ್ರಯವುಳ್ಳ ಚಿನ್ನದ ಕಳಶಗಳ ಸಮೂಹದಿಂದ ಗೋಕುಲ (?) ವನ್ನೇ ಹೋಲುವುದೆನ್ನುವುದರಲ್ಲಿ ಆಶ್ಚರ್ಯವೇನು ? (ಪುಣ್ಯಕ್ಕೆ ನೆಲೆಯಾದ ಗೋಕುಲದಲ್ಲಿಯೂ ದೇವತೆಗಳ ಸಮೂಹ, ಸಮೃದ್ಧಿಸಂಕೇತ ವಾದ ಚಿನ್ನದ ಕಳಶಗಳೇ ಮೊದಲಾದುವು ಇರುವುವೆಂದು ಕವಿಯ ಅಭಿಪ್ರಾಯ

ಗಣನಾತೀತ ಭುಜಂಗರಾಜನಿಕರಕ್ರೀಡಾಸಹಸ್ರಾಂಗಣಂ
ಗಣಬದ್ಧಪ್ರಿಯಮಾಣ ಮಂಗಳ ಲಸತ್ಸೌಭಾಗ್ಯಘಂಟಾವಿಶೇ
ಷಣ ಭೇರೀರವವಾವಗಂ ಸ್ಮರಧನುರ್ಜ್ಯಾಘೋಷವೆಂಬಂದದಿಂ
ಗಣಿಕಾಗೇಹದೊಳೊಪ್ಪಿರಲ್ ಸೊಬಗಿನಿಂ ಚೆಲ್ವಾಯ್ತಯೋಧ್ಯಾಪುರಂ ೬೩೨

ಅವಿರಳ ಲಜ್ಜಾ ಕಂಚುಕ
ವವಯುವದಿಂ ಪಿಂಗೆ ತಮ್ಮ ಕಾಲ್ಗೆಡೆ ಗಣಿಕಾ
ಯುವತೀ ನಿತಂಬವಲ್ಮೀ
ಕವನೆಡೆಗೊಂಡಿರ್ಪುದುರು ಭುಜಂಗಪ್ರಕರಂ ೬೩೩

ಸಲೆ ನೀರಂ ಪೊತ್ತನೀಶಂ ಸುರವರನೆನಸುಂ ಲಜ್ಜೆಗೆಟ್ಟಂ ವಿಧಾತ್ರಂ
ತಲೆಗೊಟ್ಟಂ ನಾರಿಯಾದಂ ಹರಿ ದಿನಪತಿ ದುರ್ನಾಮವಂ ಪೊತ್ತನೆಂದುಂ

ವಿರುವಂತಿದೆ ?) ೬೩೨. ಲೆಕ್ಕವಿಲ್ಲದಷ್ಟು ರಸಿಕರಾಜರ ಸಮೂಹವು ಕ್ರೀಡಿಸುವ ಸಾವಿರಗಟ್ಟಲೆ ನೆಲೆಗಳಿಂದಲೂ, ನಿಯತವೂ ಪ್ರಿಯವೂ ಮಂಗಳಕರವೂ ಪ್ರಕಾಶ ಮಾನವೂ ಸೌಭಾಗ್ಯದಾಯಕವೂ ಆದ ಘಂಟಾನಾದದೊಂದಿಗೆ ಭೇರೀಶಬ್ದವು ಯಾವಾಗಲೂ ಮನ್ಮಥನ ಬಿಲ್ಲಿನ ಹೆದೆಯ ಘೋಷವೋ ಎಂಬಂತೆ ವೇಶ್ಯಾವಾಟಿಗಳಲ್ಲಿ ಒಪ್ಪಿರಲು ಅಯೋಧ್ಯಾಪಟ್ಟಣವು ಸೌಂದರ್ಯದಿಂದ ಸೊಗಸಾಯಿತು. ೬೩೩. ನಾಚಿಕೆ ಯೆಂಬ ಮೇಲುಕವಚವು ಒಂದೇ ಸಮನಾಗಿ ಶರೀರದಿಂದ ಕಳಚಿರಲು, ವಿಶೇಷ ರೀತಿ ಯಾದ ವಿಟರಸಮೂಹವು (ಸರ್ಪಸದೃಶರಾದ ವಿಟರ ಸಮೂಹವು) ತಮ್ಮ ಕಾಲು ಜಾರಿರಲು ತರುಣಿಯರ ತೊಡೆಯೆಂಬ ಹುತ್ತದ ಆಶ್ರಯವನ್ನು ಪಡೆದಿದ್ದಿತು. ೬೩೪. ಈಶ್ವರನು ನೀರನ್ನು ಹೊತ್ತನು, ದೇವೇಂದ್ರನು ಹೇಗೂ ನಾಚಿಕೆಗೆಟ್ಟನು, ಬ್ರಹ್ಮನು ತಲೆಯನ್ನೇ ಒಪ್ಪಿಸಿದನು, ವಿಷ್ಣು ಸ್ತ್ರೀವೇಷವನ್ನು ತಾಳಿದನು, ಸೂರ್ಯನು ಕೆಟ್ಟ ಹೆಸರನ್ನು ಪಡೆದನು, ವಾಯು ಎಂದಿಗೂ ನೆಲೆನಿಲ್ಲುವನಲ್ಲ, ಚಂದ್ರನು ಆಕಾಶವನ್ನೇ ತೊರೆದನು, ಇನ್ನು ಇತರರ ಪಾಡು ಏನಾಗದು ಎಂಬುದಾಗಿ ಕಾಂತಿಯುಕ್ತರಾದ ಕಮ ಲಾಕ್ಷಿಯರು ತಮ್ಮ ಸೌಂದರ್ಯವನ್ನು (ಕುರಿತು) ವಿಶೇಷವಾಗಿ ಕೊಂಡಾಡಿಕೊಳ್ಳು ತ್ತಿದ್ದರು. (ಇಲ್ಲಿ ತಮ್ಮ ಚೆಲುವಿನಿಂದ ಬೀಗಿದ ಸ್ತ್ರೀಯರ ವಿತಂಡವಾದದ ವೈಖರಿಯನ್ನು ಕಾಣಬಹುದು. ಈಶ್ವರನು ಜಟೆಯಲ್ಲಿ ಗಂಗೆಯನ್ನು ಧರಿಸಿರುವ, ಇಂದ್ರನು ಅಹಲ್ಯೆಯ ದೆಸೆಯಿಂದ ಶಾಪಗ್ರಸ್ತನಾದನು. ಬ್ರಹ್ಮನು ವೇದಗಳನ್ನು ನಿಂದಿಸಿ ಈಶ್ವರನಿಂದ

ನೆಲೆಗೊಳ್ಳಂ ವಾಯು ಚಂದ್ರಂ ಪರವನುಚಿದನಿನ್ನನ್ಯರೇನಾಗರೆಂದು
ಜ್ವಲ ನೇತ್ರಾಂಭೋಜೆಯರ್ ತಮ್ಮಯ ಸೊಬಗನತಿಸ್ತೋತ್ರವಂ ಮಾಡುತಿರ್ಪರ್ ೭೩೪

ಹಯ ಗಜ ರತ್ನ ವಸ್ತ್ರ ಘನಸಾರ ಮೃಗೋದ್ಭವರೋಹಣದ್ರುಮ
ತ್ರಯವಖಿಳೇಂದ್ರಿಯಪ್ರಿಯತರೋತ್ತಮ ಮುಖ್ಯ ಸಮಸ್ತ ವಸ್ತುವಿ
ಕ್ರಯವಿತರೇತರಪ್ರಚುರ ಪೂಜ್ಯ ವಣಿಗ್ವರರಿಂ ನಿರಂತರಂ
ನಿಯತದೊಳೊಪ್ಪುಗುಂ ವಿಪಣಿ ವಿಶ್ರುತಸುಂದರ ವೀಥಿವೀಥಿಯೊಳ್ ೭೩೫

ಸಕಲ ಸುಹೃತ್ಪ್ರಧಾನ ಸುಕವೀಂದ್ರ ಪುರೋಹಿತ ಸೌಧಶಾಲೆ ಪೀ
ಠಿಕೆ ನವರತ್ನ ಗೋಪುರವಿರಾಜಿತ ನಿರ್ಮಲ ರಾಜಮಂದಿರಂ
ಸುಕರಶಲಾಕೆ ಹೇಮಕಳಶಂ ವಿಲಸತ್ಕುಸುಮಾಳಿಯಾಗೆ ಕೌ
ತುಕವೆನಿಸಿತ್ತಯೋಧಿಪುರಮುತ್ತಮಕೀರ್ತಿಪರಂ ಮನೋಹರಂ ೭೩೬

ಪ್ರತಿಪಕ್ಷ ಕ್ಷತ್ರಿಯಪ್ರಾಕ್ತನ ನಿಖಿಳಧರಾಕೋಶ ಸೇನಾಚಯಂ ಸ್ವೀ
ಕೃತನುದ್ಯದ್ಧಾರ್ಮಿಕಂ ಪಾವನಚರಿತನನಿಂದಾಪರಂ ದೋಷಸಂವ

ಕೋಪಕ್ಕೆ ಗುರಿಯಾಗಿ ತನ್ನ ಒಂದು ತಲೆಯನ್ನು ಕಳೆದುಕೊಂಡು ವಿಷ್ಣುವು ಮೋಹಿನೀ ರೂಪವನ್ನು ತಾಳಿದನು. ಸೂರ್ಯನು ಊರ್ವಶಿಯನ್ನು ಕಂಡು ಮೋಹಿತನಾದನು. ವಾಯುವಾದರೋ ಸ್ವಭಾವತಃ ಚಂಚಲಚಿತ್ತನು. ಚಂದ್ರನು ಗುರುಪತ್ನಿಯಾದ ತಾರೆ ಯಲ್ಲಿಯೇ ಅನುರಕ್ತನಾದನು ) ೭೩೫. ಕುದುರೆ, ಆನೆ, ರತ್ನ, ವಸ್ತ್ರ, ಕರ್ಪೂರ. ಕಸ್ತೂರಿ ಮೂರು ತೆರನಾದ ಗಂಧದ ಮರಗಳು, ಎಲ್ಲ ಇಂದ್ರಿಯಗಳಿಗೂ ಹಿತಕರವೂ ಉತ್ತಮೋತ್ತ ಮವೂ ಪ್ರಧಾನವೂ ಆದ ಎಲ್ಲ ಪದಾರ್ಥಗಳ ಮಾರಾಟದಿಂದಲೂ, ಬೇರೆ ಬೇರೆಯಾಗಿ ಹೆಸರುವಾಸಿಯಾಗಿರುವ ಮಾನ್ಯ ವರ್ತಕವರೇಣ್ಯರಿಂದಲೂ ಪ್ರಖ್ಯಾತವೂ ಮನೋ ಹರವೂ ಆಗಿದ್ದ ಬೀದಿ ಬೀದಿಯಲ್ಲಿರುವ ಅಂಗಡಿಗಳು ಸರ್ವದಾ ಅಚ್ಚುಕಟ್ಟಾಗಿ ತೋರಿ ಬರುತ್ತಿದ್ದವು. ೭೩೬. ಸಮಸ್ತ ಸ್ನೇಹಿತರ, ಮಂತ್ರಿಗಳ, ಒಳ್ಳೆಯ ಕವಿಗಳ ಪುರೋಹಿತರ ಶುಭ್ರವಾದ ಮಂದಿರಗಳು ಪೀಠಿಕೆಯಂತಿರಲು, (Pedastal) ನವರತ್ನ ಗಳಿಂದ ನಿಬಿಡವಾಗಿದ್ದ ಗೋಪುರಗಳಿಂದ ಶೋಭಿಸುವ ನಿರ್ಮಲವಾದ ಅರಮನೆಗಳು ಸುಕರವಾದ ಶಲಾಕೆಗಳಂತಿರಲು(Filaments), ಚಿನ್ನದ ಕಳಶಗಳು ಪ್ರಕಾಶಮಾನವಾದ ಹೂವುಗಳ ಸಮೂಹವಾಗಲು, ಶ್ರೇಷ್ಠ ಕೀರ್ತಿಪರವೂ, ಮನೋಜ್ಞವೂ ಆಗಿದ್ದ ಅಯೋಧ್ಯಾಪಟ್ಟಣವು ಉತ್ಸುಕದಾಯವಾಗಿತ್ತು. ೭೩೭. ಶತ್ರುಗಳಾದ ಕ್ಷತ್ರಿಯರ ಪ್ರಾಚೀನವಾದ ಸಮಸ್ತ ಭೂಮಿ, ಕೋಶ, ಸೇನಾಸಮೂಹಗಳನ್ನು ಸ್ವಾಧೀನ ಮಾಡಿ ಕೊಂಡಿರುವವನೂ, ಉನ್ನತವಾದ ಧರ್ಮಪರಾಯಣನೂ, ಪವಿತ್ರವಾದ ನಡತೆಯುಳ್ಳ ವನೂ, ಯಾವ ಅವಹೇಳನಕ್ಕೂ ಗುರಿಯಾಗದಿರುವವನೂ, ನಿಷ್ಕಳಂಕನೂ, ದಿಗ್ದಿಗಂತಗಳ

ರ್ಜಿತನಾಶಾಪೂರಿತ ಪ್ರಕಟವಿಶದಯಶಂ ವಂದಿಮಂದಾರಭೂಜಂ
ಋತುಪರ್ಣಂ ತತ್ಪುರಕ್ಕಧಿಪನನುಪಮತೇಜಂ ಕಳಾನೀಕನೈಜಂ ೬೩೭

ವ॥ ಅಂತಿರ್ದಯೋಧ್ಯಾಪುರವಂ ನರನಾಥಂ ಪೊಕ್ಕು

ಅಗಣಿತವತ್ಯಪೂರ್ವತರಮುತ್ತಮಲಕ್ಷಣಮುನ್ನತಾನನಂ
ಸುಗಮಚಿತ್ತವಬ್ಧಿರವ ಹೇಷಿತಮುಜ್ಜ್ವಲವರ್ಣಮಗ್ರಸಂ
ಯುಗಜಯಸತ್ತ್ವವಾದನಯನಪ್ರಿಯಮೊ...,ವಾಜಿ ಶಾ
ಲೆಗೆ ನಡೆತಂದನೊಲ್ದು ನಳಭೂಪತಿ ಬಾಹುಕನೂತ್ನನಾಮದಿಂ ೬೩೮

ನರನಾಥಂ ಪರಮೋತ್ಸವಂಬೆರಸು ಪೂರ್ವಪ್ರೀತಿ ಮೆಯ್ವೆರ್ಚೆ ಮಂ
ದುರವಂ ಪೊಕ್ಕು ಕುಳೀರ ಸೈಂಧವ ಮಹಾಸೌರಾಷ್ಟ್ರ ಕಾಂಭೋಜ ಬ
ರ್ಬರ ಯೌಧೇಯ ಖುರಾಸ ಬಾಹ್ಲಿಕಧರಾಜಾತಾಶ್ವಮಂ ನೋಡಿ ತ
ತ್ತುರಗಾಧ್ಯಕ್ಷನನೆಯ್ದಿ ಸಂತಸಪಡೆದಂ ತಾಂ ಬಾಹುಕಾಖ್ಯಾನದಿಂ ೬೩೯

ವಿಜಯಸ್ತಂಭಪ್ರತಿಷ್ಠಾಪಕರ ನಿರುಪಮ ಬಾಹುಬಲಂ ವೀರಸೇನಾ
ತ್ಮಜನುಗ್ರಾರಾತಿಕಾಲಂ ನಿಷಧವಿಷಯನಾಥಂ ವಿದರ್ಭಾಂಗನಾವಾ

ವರೆಗೂ ವ್ಯಾಪಿಸಿರುವ ವಿಸ್ತಾರವಾದ ಯಶಸ್ಸುಳ್ಳವನೂ, ಹೊಗಳುಭಟ್ಟರೆಂಬುವರಿಗೆ ಕಲ್ಪವೃಕ್ಷದಂತಿರುವವನೂ, ಅಸಮಾನವಾದ ಪ್ರಭೆಯುಳ್ಳವನೂ, ಕಲಾಸಮೂಹಗಳಲ್ಲಿ ಸ್ವಾಭಾವಿಕ ಅಭಿರುಚಿಯುಳ್ಳವನೂ ಆದ ಋತುಪರ್ಣನು ಆ ಪಟ್ಟಣಕ್ಕೆ ಒಡೆಯುನಾಗಿದ್ದನು. ವ॥ ಹಾಗಿದ್ದ ಅಯೋಧ್ಯಾಪಟ್ಟಣವನ್ನು ನಳಮಹಾರಾಜನು ಪ್ರವೇಶಿಸಿ, ೬೩೮. ಅಪಾರವೂ, ಅತ್ಯಂತ ಅಪೂರ್ವವೂ, ಉತ್ತಮಲಕ್ಷಣವೂ, ಮೇಲಕ್ಕೆ ಎತ್ತಿದ ಮುಖವುಳ್ಳುದೂ, ಸುಕರವಾದ ಮನಸ್ಸುಳ್ಳುದೂ, ಸಮುದ್ರಘೋಷದಂತಹ ಹೇಷಾರವವುಳ್ಳುದೂ, ಪ್ರಕಾಶಮಾನವಾದ ಬಣ್ಣವುಳ್ಳುದೂ, ಮುಂಭಾಗದಲ್ಲಿ ಹೊಂದಿಕೊಂಡಿರುವ ಜಯಪೂರ್ಣವಾದ ವಾದ್ಯಗಳನ್ನು ಅನುಸರಿಸಿ ನೆಡೆಯುವ ಅಭಿಲಾಷೆಯುಳ್ಳುದೂ ಆದ ...ಕುದುರೆಗಳಿದ್ದ ಶಾಲೆಗೆ ನಳಮಹಾರಾಜನು ಬಾಹುಕನೆಂಬ ಹೊಸಹೆಸರಿನಿಂದ ನಡೆದು ಕೊಂಡು ಬಂದನು. ೬೩೯. ಮಹಾರಾಜನು ಅತ್ಯಂತ ಸಂತೋಷದಿಂದ ಹಿಂದಿನ ಪ್ರೀತಿ ಉಕ್ಕಿ ಬರುತ್ತಿರಲು, ಕುದುರೆಯ ಲಾಯವನ್ನು ಪ್ರವೇಶಿಸಿ, ಕುಳೀರ, ಸಿಂಧುದೇಶ, ಮಹಾಸೌರಾಷ್ಟ್ರ, ಕಾಂಭೋಜ, ಬರ್ಬರ, ಯೌಧೇಯ, ಖುರಾಸ, ಬಾಹ್ಲಿಕದೇಶಗಳಲ್ಲಿ ಹುಟ್ಟಿದ ಕುದುರೆಗಳನ್ನು ಕಂಡು, ಬಾಹುಕನೆಂಬ ಹೆಸರಿನಿಂಡ ಆ ಕುದುರೆಗಳ ಮೇಲ್ವಿಚಾರಕನ ಸಮೀಪಕ್ಕೆ ಹೋಗಿ ಆನಂದಿಸಿದನು. ೬೪೦. ವಿಜಯದ ಕಂಬವನ್ನು ಸ್ಥಾಪಿಸಬಲ್ಲ ಅಸಮಾನವಾದ ಬಾಹುಬಲವುಳ್ಳವನೂ, ವೀರಸೇನನ ಮಗನೂ, ಭಯಂಕರವಾದ ಶತ್ರುಗಳಿಗೆ ಯಮಪ್ರಾಯನೂ, ನಿಷಧದೇಶದ ಒಡೆಯನೂ, ವಿದರ್ಭದೇಶದ ಪುತ್ರಿ

ರಿಜನೇತ್ರಪ್ರೀತಿಕಾಂತಂ ನಳನರಪನಯೋಧ್ಯಾಪುರಾಧೀಶ ವಾಜಿ
ವ್ರಜಸೇವಾಜೀವಿಯಾದಂ ವಿಧಿವಶವನದಂ ಮಾಣಿಸಲ್ ಬಲ್ಲನಾವಂ ೬೪೦

ಹಗರಣವಾಡಿಸಿತ್ತು ಹರಿಯುಂ ಹರನಂ ತಿರಿಸಿತ್ತು ಬೊಮ್ಮನಂ
ಮಗಳೊಡಗೂಡಿಸಿತ್ತು ರವಿಯುಂ ನೆಲೆಗೊಂಡಿರಲೀಯದಿಂದ್ರನಂ
ನಗೆಗೆಡೆಮಾಡಿಸಿತ್ತು ಶಶಿಯುಂ ಕಸದೊಳ್ ನೆರಪಿತ್ತು ತಮ್ಮ ಬ
ಲ್ಮೆಗೆ ಬೆರೆತಿಪ್ಪರಂ ವಿಧಿ ದಿಟಂ ಬಗೆಗೊಂಬುದೆ ಮರ್ತ್ಯಗಿರ್ತ್ಯರಂ ೬೪೧

ತಾಯುಂ ಮಗನಿಂ ಕೊಲಿಸದೆ
ನೋಯಲ್ಕಟ್ಟಸದೆ ನೆಲಕಿ ನೆಲಕಿಲಬಲಿಯುಂ ?
ಬಾಯಿಂ ಸ್ವೈವರ ಪೊಸಪು
ಗ್ಗಾಯಿಲನಂ ಕೊಂದು ಕೂಗಿಸದೆ ಬಿದಿ ಸತತಂ ೬೪೨

ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ
ತಡಗೆಡಿಸಿತ್ತು ಶೂದ್ರಕನ ಪೆರ್ದಲೆಯುಂ ಕುಜದೊಳ್ ತೊಡರ್ಚಿಸಿ

ಯಾದ ದಮಯಂತಿಯ ಕಮಲಾಕ್ಷಗಳಿಗೆ ಪ್ರೀತಿಯನ್ನುಂಟುಮಾಡುವ ಪ್ರಿಯನೂ ಆದ ನಳಮಹಾರಾಜನು ಅಯೋಧ್ಯಾಪಟ್ಟಣದ ಒಡೆಯನ ಕುದುರೆಗಳ ತಂಡವನ್ನು ಸೇವಿಸುವ ಜೀವನವನ್ನು ಕೈಕೊಂಡನು. ಆ ದೈವಾಯತ್ತವನ್ನು ನಿವಾರಿಸಲು ಯಾರು ಬಲ್ಲರು ? ೬೪೧. ವಿಷ್ಣುವನ್ನು ತೊಂದರೆಗೆ ಗುರಿಮಾಡಿತ್ತು. ಶಿವನನ್ನು ತಿರುಪೆ ಬೇಡುವಂತೆ ಮಾಡಿಸಿತ್ತು, ಬ್ರಹ್ಮನು ಮಗಳನ್ನು ಒಡಗೂಡುವಂತೆ ಮಾಡಿತ್ತು. ಸೂರ್ಯನನ್ನು ಒಂದು ಸ್ಥಳದಲ್ಲಿ ಇರುವಂತೆ ಅವಕಾಶ ನೀಡದು. ಇಂದ್ರನನ್ನು ನಗೆಗೀಡುಮಾಡಿತ್ತು. ಚಂದ್ರನನ್ನು ಕಳಂಕದೊಂದಿಗೆ ಕೂಡಿತ್ತು. ತಮ್ಮ ಸೊಕ್ಕಿನಿಂದ ಕೂಡಿದವರನ್ನು ಮರ್ತ್ಯಗಿರ್ತ್ಯರು ಯಾರೇ ಇರಲಿ, ವಿಧಿಯು ನಿಜವಾಗಿಯೂ ಲಕ್ಷ್ಯಮಾಡುತ್ತದೆಯೆ ? ೬೪೨. ವಿಧಿಯು ಏಕಪ್ರಕಾರವಾಗಿ ತಾಯಿಯನ್ನು ಮಗನಿಂದ ಕೊಲ್ಲಿಸದೆ ? ನೋಯುವಂತೆ ಬೆನ್ನಟ್ಟಿಸದೆ......ಬಡಾಯಿ ಕೊಚ್ಚಿಕೊಳ್ಳುವ ಹೊಸ ಹಮ್ಮುಗಾರರನ್ನು ಕೊಂದುಕೂಗಿಸದೆ ಇರುವುದೆ ? ೬೪೩. ಪಾಂಡವರು ಅರಣ್ಯವನ್ನು ಪ್ರವೇಶಿಸುವಂತೆ ಮಾಡಿತ್ತು. ಯಾದವರನ್ನು ಪರಸ್ಪರವಾಗಿ ಕೊಲ್ಲುವಂತೆ ಮಾಡಿತ್ತು. ಶೂದ್ರಕನ ದೊಡ್ಡತಲೆಯನ್ನು ಮರಕ್ಕೆ ಸಿಕ್ಕಿಬೀಳುವಂತೆ ಮಾಡಿತ್ತು. ಪೂರ್ಣಕುಂಭನೆಂಬ ರಾಜನ ಮಗನಾದ ಶೂದ್ರಕನಿಗೆ ಕಾಲಜ್ಞಾನಿಯೊಬ್ಬನು 'ನಿನ್ನ ತಲೆಯನ್ನು ಕಂಚುವಾಳದ ಮರಕ್ಕೆ ಕಟ್ಟಲಾಗುವುದು' ಎಂದು ಹೇಳಿಹೋದನು. ರಾಜನು ಆ ವಿಪತ್ತನ್ನು ನಿವಾರಿಸಿಕೊಳ್ಳಲು ನಾನಾ ಪ್ರಯತ್ನಗಳನ್ನು ಮಾಡಿದನು. ಕಡೆಗೆ ತನಗೆ ತಾನೇ ಹೆಳವನಾಗಿ ಕಾರೆಯಲ್ಲಿ ನೆಲಸಿದ್ದನು. ಆಗ ದೈವವು ತುಂಟಕುದುರೆಯ ರೂಪದಲ್ಲಿ ಆತನಲ್ಲಿಗೆ ಬಂದು ಆತನನ್ನು ದೂರಕ್ಕೆ ಕರೆದೊಯ್ದು ಒಂದು ಕಂಚವಾಳದ ಗಿಡದಡಿಯಲ್ಲಿ ಕೆಡವಿತು, ಆ

ತ್ತಿಡೆಗಿಡಿಸಿತ್ತನೇಕ ನೃಪಸಂತತಿಯಂ ಕಡುಕೆಯ್ದು ಮಿಕ್ಕರಂ
ಬಿಡುವುದೆ ಬಾತೆಗೆಟ್ಟ ವಿಧಿ ಬಲ್ಲಿದರಾವೆಡೆಯಲ್ಲಿ ಪೊಕ್ಕರಂ ೬೪೩

ಯತಿಗಳ್ ಸಿ[ದ್ಧ]ರ್ ನಿತ್ಯ
ವ್ರತಿಗಳ್ ದೈವಜ್ಞರಾಗಮಜ್ಞರ್ ಧಾತ್ರೀ
ಪತಿಗಳ್ ಮಂತ್ರಜ್ಞರ್ ವಿಧಿ
ಗತಿಯಂ ನಿಜಸತ್ತ್ವದಿಂದ ಕಳೆವವರೊಳರೇ ೬೪೪

ಸುರಪನೊಳಗಾದ ದಿಗಧೀ
ಶ್ವರರಂ ಬ್ರಹ್ಮಾದಿದೇವರಂ ಸಕಳ ಫಣಾ
ಧರರಂ ಕಿನ್ನರರಂ ಮುನಿ
ವರರಂ ಬಿದಿ ಬಿಡದು ಮಿಕ್ಕರಂ ಬಿಟ್ಟಪುದೇ ೬೪೫

ದೇಹಕ್ಕನುಗುಣವಾಗಿರೆ
ಬಾಹುಕನೆಂಬಧಮನಾಮಮಂ ತಳೆದನಿಶಂ
ಸಾಹಸದಿಂ ಋತುಪರ್ಣನ
ಸಾಹಣಿಯಂ ಸಾರ್ದು ಸುಖದಿನಿರ್ದನಿಳೇಶಂ ೬೪೬

ಹೊತ್ತಿಗೆ ಸರಿಯಾಗಿ ಕೆಲವು ಕಳ್ಳರು, ಮುತ್ತುಮಾಣಿಕಗಳನ್ನು ಅಪಹರಿಸಿಕೊಂಡು ಅತ್ತ ಹೋಗುತ್ತ ಕೆಲವನ್ನು ಅಲ್ಲಿ ಕೆಡವಿಕೊಂಡು ಮುಂದೆ ತೆರಳಿದರು. ಆ ಮೂಲಕ ಶೂದ್ರಕನ ಮೇಲೆ ಅಪವಾದ ಬಂದಿತು. ಆಗ ವಿಚಾರಣೆ ನಡೆದು, ಆತನ ತಲೆಯ ಮೇಲೆ ಒಂದು ಗೊಂಬೆಯನ್ನಿಟ್ಟು ಅದನ್ನು ಹೊಡೆದುಕೆಡವಬೇಕೆಂದು ಆಜ್ಞೆಯಾಯಿತು. ಹಾಗೆಯೇ ಮಾಡುವಲ್ಲಿ, ಶಿರಚ್ಛೇದಕನ ಕೈತಪ್ಪಿ, ಗೊಂಬೆಗೆ ಬದಲಾಗಿ ಶೂದ್ರಕನ ತಲೆಗೇ ಗುರಿತಾಕಿತು. ಶೂದ್ರಕನ ವಿಷಯದಲ್ಲಿ ಹೀಗೆ ದೈವಜ್ಞನ ಮಾತು ನಿಜವಾಯಿತು. (ನೋಡಿ : ಸೋಮೇಶ್ವರ ಶತಕ "ತಲೆಯಂ ಕಟ್ಟಿರೆ ಕಂಚವಾಳ ಮರದೊಳ್ ಶೂದ್ರೀಕ ವೀರಾಖ್ಯನಂ-ಪ. ೪೨) ಹಲವಾರು ರಾಜರ ಸಮೂಹವನ್ನು ದಿಕ್ಕುಗೆಡಿಸಿತ್ತು. ಅತ್ಯಂತ ದರ್ಪದಿಂದ ಮೀರಿದವರನ್ನೂ, ಬಲಿಷ್ಠರೆನ್ನಿಸಿ ಯಾವ ಎಡೆಯಲ್ಲಿ ಹೊಕ್ಕಂತವರನ್ನೂ ಬಾಳುಗೆಟ್ಟ ದೈವ ಬಿಡಬಲ್ಲುದೆ ? ೬೪೪. ಯತಿಗಳು, ಸಿದ್ಧರು, ನಿತ್ಯವ್ರತಾನುಷ್ಠಾನ ಪರರು, ದೈವಜ್ಞರು, ಶಾಸ್ತ್ರವೇತ್ತರು, ಭೂಪಾಲಕರು, ಮಂತ್ರವಿದರು ದೈವಗತಿಯನ್ನು ತಮ್ಮ ತಮ್ಮ ಶಕ್ತಿಯಿಂದ ನಿವಾರಿಸಿಕೊಳ್ಳಲು ಶಕ್ತರಾಗುವರೆ. ೬೪೫. ಇಂದ್ರನೇ ಮೊದಲಾದ ದಿಕ್ಪಾಲಕರನ್ನೂ, ಬ್ರಹ್ಮನೇ ಮೊದಲಾದ ದೇವರುಗಳನ್ನೂ ಸಮಸ್ತ ನಾಗರನ್ನೂ, ಕಿನ್ನರರನ್ನೂ, ಮುನಿಶ್ರೇಷ್ಠರನ್ನೂ ವಿಧಿ ಬಿಡುವುದಿಲ್ಲ ಎಂದಮೇಲೆ, ಉಳಿದವರನ್ನು ಬಿಡುತ್ತದೆಯೆ ? ೬೪೬. ಶರೀರಕ್ಕೆ ತಕ್ಕಂತೆ ಬಾಹುಕನೆಂಬ ಕೀಳು ಹೆಸರನ್ನು ತಳೆದು, ಸರ್ವದಾ ಸಾಹಸದಿಂದ, ಋತುಪರ್ಣಮಹಾರಾಜನು ಸೂತನ

ವ॥ ಅಂತಿರ್ಪುದುಂ

ಮುಂದುರದಾರ್ಕೆಯಿನಾ
ತಂ ದಯೆಯಿಂದೀಯೆ ಬಾಹುಕಂ ಮೋಹದಿನೊ
[ಲ್ದ ?] ಲ್ದಿಂದು ಮೊದಲಾಗಿ ವಾಜಿಯ
ವೃಂದವನಾರ್ಕೈವೃತಿರ್ಪನಿರುಳುಂ ಪಗಲುಂ ೬೪೭

ತುರಗಾನೀಕದ ಮೆಯ್ಯನೊತ್ತಿಸುವ ನಿಚ್ಚಂ ಮೇಹನಾರೈವ ಗೋ
ವರನೆಲ್ಲಂ ಕಳಿಗೊಂಬ ನೀರ್ಗುಡಿವ ತಾಣಕ್ಕೇಱಿಕೊಂಡೊಯ್ವ ಮುಂ
ದುರವಂ ಶೋಧಿಪ ವಾಜಿಮುಖ್ಯವ ಮನಂ ಮೆಚ್ಚಲ್ಕೆ ಮುಯ್ಯಾಂಪ ತ
ನ್ನಿರವಿಂಗಳ್ಕುವ ಚಿಂತೆಯಿಂ ನೆಲಸಿದಂ ಸೌಹಾರ್ದದಿಂ ಬಾಹುಕಂ ೬೪೮

ಕವಳವನೊಲ್ದು ಕೂಡಿಸುವ ರೋಗದವಂ ಪೊರೆಕೈದ ಶೈತ್ಯಪಾ
ನವನೊಳಗೀವ ವಸ್ಥಿಮುಖವಂ ಮಿಗೆ ಶೋಧಿಪ ಸೂಕಳಾಶ್ವಮುಂ
ಜವಳಿಯನಿಕ್ಕಿಯೋಡಿಸುವ ವಾರುವವಂ ನಡೆಪಾಡಿಸಲ್ಕೆ ನೋ
ಡುವ ಮಱಿಗಳ್ಗೆ ಪಾಲನೆಱೆವುಜ್ಜುಗವಂ ತಳೆದಿರ್ಪನಾವಗಂ ೬೪೯

ಒಡವೆಯ ಮುಂದಣಿಂ ತೆಗೆದು ಕಟ್ಟಿದ ಬಲ್ಮಱಿಗಳ್ಗೆ ಚಾಟಿಯಂ
ಪಿಡಿವ ಕನಲ್ದು ನಂಟಿಸುವ ದುಷ್ಟತುರಂಗಚಯಕ್ಕೆ ಕಬ್ಬಿಯಂ

ಬಳಿಗೆ ಹೋಗಿ ಮಹಾರಾಜನು ಸುಖವಾಗಿದ್ದನು. ವ॥ ಹಾಗಿರಲು. ೬೪೭. ಆತನು ಕುದುರೆಯ ಲಾಯವನ್ನು ನೋಡಿಕೊಳ್ಳುವ ಕೆಲಸವನ್ನು ಕೃಪೆಯಿಂದ ವಹಿಸಲು, ಬಾಹುಕನು ಅಭಿಮಾನದಿಂದ ಮೆಚ್ಚಿಕೊಂಡು ಅಂದು ಮೊದಲ್ಗೊಂಡು, ಹಗಲೂ ಇರುಳೂ ಕುದುರೆಯ ಸಮೂಹವನ್ನು ಪಾಲಿಸುತ್ತಿದ್ದನು. ೬೪೮. ಕುದುರೆಗಳ ಸಮೂಹದ ಮೈತಿಕ್ಕುವ(ಮಾಲೀಸುಮಾಡುವ), ಪ್ರತಿನಿತ್ಯವೂ ಅವುಗಳ ಮೇವನ್ನು ನೋಡಿಕೊಳ್ಳುವ, ಇತರ ತುರುಗಾಹಿಗಳೊಂದಿಗೆ (ಕುದುರೆಯ ಮೇಲ್ವಿಚಾರಕರು ?) ಸ್ನೇಹ ಬೆಳಸುವ, ನೀರನ್ನು ಕುಡಿಯುವ ಎಡೆಗೆ ಹತ್ತಿಕೊಂಡೊಯ್ಯುವ, ಲಾಯವನ್ನು ಅಣಿಗೊಳಿಸುವ, ಕುದುರೆಯ ಪ್ರಮುಖನು ಮನಮೆಚ್ಚಲು ಉಡುಗೊರೆಯನ್ನು ಪ್ರತಿಯಾಗಿ ಪಡೆಯುವ ತನ್ನ ಸ್ಥಿತಿಗಾಗಿ ಹೆದರುವ ಚಿಂತೆಯಿಂದ ಬಾಹುಕನು ಸ್ನೇಹಪೂರ್ವಕವಾಗಿ ಇದ್ದನು. ೬೪೯. ಆಹಾರವನ್ನು ಪ್ರೀತಿಯಿಂದ ಶೇಖರಿಸುವ, ರೋಗಗೊಂಡವುಗಳನ್ನು ಸಲಹುವ, ತಣ್ಣಗಿರುವ ನೀರನ್ನು ನೀಡುವ, ವಸ್ಥಿಮುಖವನ್ನು (?) ಹುಡುಕುವ, ಒಳ್ಳೆಯ ಜಾತಿಯ ಕುದುರೆಗಳ ಜೋಡಿಯನ್ನು ಕೂಡಿಸಿ ಓಡಿಸುವ, ಕುದುರೆಗಳನ್ನು ಓಡಾಡಿಸಿ ನೋಡುವ, ಕುದುರೆಯ ಮರಿಗಳಿಗೆ ಹಾಲನ್ನು ಕುಡಿಸುವ ಕಾರ್ಯಗಳನ್ನು ಸರ್ವದಾ ನಿರ್ವಹಿಸುತ್ತಿದ್ದನು. ೬೫೦. ಮುಂಭಾಗದಿಂದ ಒಡವೆಯನ್ನು ತೆಗೆದುಕಟ್ಟಿದ ಬಲಿಷ್ಠವಾದ ಮರಿಗಳಿಗೆ ಚಾಟಿಯನ್ನು ಆಡಿಸುವ,

ತುಡಿಸುವ ಹೊನ್ನ ಹಲ್ಲಣದಿನೊಪ್ಪುವ ದರ್ಪದ ವಾರುವಂಗಳಂ
ನಡೆಸುವ ಸಂಭ್ರಮಕ್ಕೆ ನೆಲೆಯಾದನಪೂರ್ವದ ದೇಹ ಬಾಹುಕಂ ೭೫೦

ಇಲ್ಲಿಡು ಹೊನ್ನ ಹಲ್ಲಣವನೊಟ್ಟಿಲನಾನಿಸು ಹಕ್ಕರಕ್ಕೆಯುಂ
ಬಲ್ಲಿಯುವಂ ಬಯಲ್ಗೆ ತೆಗೆ ಜೋಡ ಸುರಕ್ಷಿತವಾಗಿ ಮಾಡು ಭೂ
ವಲ್ಲಭನಾಂಪ ಸೀಸಕವನೋಸರಿಸುಜ್ಜ್ವಲ ಖಡ್ಗದೇಣುಗಳ್
ಪಲ್ಲಟವಾಗದಂತೋಜೆಗಳೊಳ್ ನಿಜಿಸೆಂದುಸಿರ್ವಂ ನಿರಂತರಂ ೭೫೧

ವ॥ ಇಂತಿರೆ

ತುರಗಪರೀಕ್ಷೆಯೊಳ್ ತುರಗರಕ್ಷೆಯೊಳುಗ್ರತುರಂಗಶಿಕ್ಷೆಯೊಳ್
ಪರಿಣತನತ್ಯಪೂರ್ವಗುಣಿ ಬಾಹುಕನೊಳ್ಳಿದನೆಂಬ ವಾರ್ತೆ ಸ
ತ್ಪುರದೊಳಗೆಲ್ಲಿಯುಂ ಪರೆಯೆ ಕೇಳ್ದೊಲವಿಂ ಋತುಪರ್ಣಭೂಭುಜಂ
ಕರೆಸಿ ಶರೀರಮಂ ಪದೆದು ನೋಡಿ ನಗುತ್ತುಡಲಿತ್ತನಾಕ್ಷಣಂ ೭೫೨

ವ॥ ಅಂತಾ ಮನ್ನಣೆಯಿಂ ಸುಖದಿನಿರ್ಪನ್ನೆಗಂ

ಎಸೆವ ಪತಿವ್ರತಸ್ಥೆ ದಮಯಂತಿ ಮನಃಪ್ರಿಯನಂ ವಿಚಾರಿಸಲ್
ದೆಸೆದೆಸೆಗಳ್ಗೆ ಭೂಸುರರ ವೇಷದ ಚಾರರನಟ್ಟಲಲ್ಲಿಯೊ

ಕಿಡಿಕಿಡಿಯಾಗಿ ವರ್ತಿಸುವ (?), ಕೆಟ್ಟ ಕುದುರೆಗಳ ಸಮೂಹಕ್ಕೆ ಕಡಿವಾಣವನ್ನು ತೊಡಿಸುವ, ಚಿನ್ನದ ಹಲ್ಲಣದಿಂದ ಒಪ್ಪುವ ದರ್ಪಿಷ್ಠವಾದ ಕುದುರೆಗಳನ್ನು ನಡೆಸುವ ಸಡಗರದಲ್ಲಿ ಅಪೂರ್ವವಾದ ಶರೀರವುಳ್ಳ ಬಾಹುಕನು ತೊಡಗಿದ್ದನು. ೭೫೧. ಹೊನ್ನಹಲ್ಲಣ (ಕಡಿವಾಣ)ವನ್ನು ಇಲ್ಲಿಡು, ಒಟ್ಟಿಲನ್ನು (ಕುದುರೆಗೆ ತೊಡಿಸುವ ಯಾವುದಾದರೂ ಒಂದು ತೊಡಿಗೆಯಿರಬಹುದೆ ?) ಹೊಂದಿಸು, ಪಕ್ಕರಕ್ಷೆಯನ್ನು ಈಟಿಯನ್ನು ಹೊರಕ್ಕೆ ತೆಗೆದಿಡಿ, ಮೈಯ ಕಾಪನ್ನು ಸುರಕ್ಷಿತವಾಗಿ ಮಾಡಿರಿ, ಮಹಾರಾಜ ಧರಿಸುವ ಶೀರ್ಷಕವನ್ನು (ತಲೆಯತೊಡಿಗೆ) ಅಣಿಮಾಡಿರಿ, ಪ್ರಕಾಶವಾದ ಖಡ್ಗದ ತುದಿಗಳು ಪಲ್ಲಟವಾಗದಂತೆ ಓರೆಗಳಲ್ಲಿ ಇರಿಸಿರಿ ಎಂಬುದಾಗಿ ಸರ್ವದಾ ಹೇಳುವನು. ವ॥ ಹೀಗಿರಲು. ೭೫೨. ಕುದುರೆಯ ಪರೀಕ್ಷೆಯಲ್ಲಿ, ಕುದುರೆಯ ರಕ್ಷಣೆಯಲ್ಲಿ, ತುಂಟಕುದುರೆಯ ಶಿಕ್ಷೆಯಲ್ಲಿ ಬಾಹುಕನು ಪ್ರವೀಣ, ಅತ್ಯಪೂರ್ವ ಗುಣವಂತ ಒಳ್ಳೆಯವನು ಎಂಬ ಸುದ್ದಿ ಆ ಊರಿನಲ್ಲಿ ಎಲ್ಲೆಡೆಯಲ್ಲಿಯೂ ಹರಡಿರಲು, ಋತುಪರ್ಣ ಮಹಾರಾಜನು ಪ್ರೀತಿಯಿಂದ ಕೇಳಿ, (ಆತನನ್ನು) ಬರಮಾಡಿಕೊಂಡು ಶರೀರವನ್ನು ವಿಶ್ವಾಸದಿಂದ ಕಂಡು, ನಗುತ್ತ ಆ ಕೂಡಲೆ ಉಡುವ ಬಟ್ಟೆಯನ್ನುಕೊಟ್ಟನು. ವ॥ ಹಾಗೆ ಆ ಗೌರವದಿಂದ ಸುಖವಾಗಿ ಇರುವಲ್ಲಿ ೭೫೩. ಪತಿವ್ರತಾನಿರತಳಾದ ದಮಯಂತಿ ತನ್ನ ಇನಿಯನನ್ನು ವಿಚಾರಿಸಲೆಂದು ಬ್ರಾಹ್ಮಣ ವೇಷಧಾರಿಗಳಾದ ದೂತರನ್ನು ದಿಕ್ಕುದಿಕ್ಕುಗಳಿಗೂ ಕಳುಹಿಸಿಕೊಡಲು, ಅವರಲ್ಲಿ ಅಸಮಾನ

ರ್ವಸದ್ವೃತನೂರ್ಜಿತ ಪ್ರಬಲ ಬುದ್ಧಿಯಿನೊಪ್ಪುವಯೋಧ್ಯೆಯಂ ನಿಜ
ಪ್ರಸರದಿನೆಯ್ದಿ ತತ್ತುರಗಶಾಲೆಯ ಬಾಗಿಲೊಳಿರ್ದನುದ್ಧತಂ ೬೫೩

ಪಲವಂದದ ವಾರ್ತೆಯನ
ಸ್ಖಲಿತವೆನಲ್ ಮೆಲ್ಲ ತಾಣವೇದೊಂದು ಮೃದು
ಸ್ಥಳಜಗತಿಯೊಳಿರ್ದಂ ನಡೆ
ದಲಸಿಕೆಯಂ ಕಳೆಯಲೆಂದು ಚಾರಂ ಧೀರಂ ೬೫೪

ವ|| ಅಂತಿರ್ದು ತನ್ನೊಳಿಂತೆಂದಂ

ಅಂಗವಿಹೀನನಾಟವಿಕನುತ್ತಮ ಸಾಹಸಿ ಲಜ್ಜೆಗೇಡಿ ದು
ಸ್ಸಂಗಿ ಕುರೂಪಿ ದುರ್ವ್ಯಸನಿ ಮದ್ಯಪಿ ಧೂರ್ತನನಾಥನಾವಗಂ
ಪೆಂಗೊಲೆಗಂಜದಂ ಪಿಸುಣನತ್ಯಧಮಂ ಪುಸಿಕಂ ಸಮಸ್ತರಂ
ಭಂಗಿಸುವಂ ಮನಂ ಬಯಸಿ ಸಾರ್ವೆಡೆಯಲ್ಲವೆ ವಾಜಿ ಮಂದುರಂ ೬೫೫

ಪರದೇಶಿ ದುರ್ಜನಂ ದ್ಯೂ
ತರತಂ ದುಷ್ಕರ್ಮಿ ಬಂದಿಕಾಱಂ ಚೋರಂ
ನರಕಿಯತಿಪಾಪಿಯಲ್ಲದೆ
ತುರಂಗನಿಕರಕ್ಕೆ ಗೋವರಪ್ಪರೆ ಸತತಂ ೬೫೬

ನಾದ ಒಬ್ಬನು, ಉನ್ನತ ಮೇಧಾವಿಯಾದ ಪ್ರಚಂಡನು ತನ್ನ ಪರಿವಾರ ಸಮೇತನಾಗಿ ಅಣಿಯಾದ ಅಯೋಧ್ಯಾಪುರವನ್ನು ತಲುಪಿ, ಆ ಊರಿನ ಹಯಶಾಲೆಯ ಬಾಗಿಲಿನಲ್ಲಿ ಇದ್ದನು. ೬೫೪. ನಡೆದುಬಂದ ಬಳಲಿಕೆಯನ್ನು ಪರಿಹರಿಸಿಕೊಳ್ಳುವ ಸಲುವಾಗಿ ಧೀರನಾದ ಆ ದೂತನು, ಹಲವಾರು ತೆರನಾದ ಸುದ್ದಿಗಳನ್ನು ಏಕಪ್ರಕಾರವಾಗಿ ಮೆಲುಕು ಹಾಕುವ ಎಡೆಯೆಂದು (ಬಗೆದು), ಮೃದುಸ್ಥಳವಾದ ಒಂದು ಜಗುಲಿಯ ಮೇಲೆ ಇದ್ದನು. ವ|| ಹಾಗಿದ್ದುಕೊಂಡು ತನ್ನಲ್ಲಿಯೇ ಹೀಗೆಂದುಕೊಂಡನು, ೬೫೫. ಶರೀರವಿಕಲನೂ, ಅರಣ್ಯವಾಸಿಯೂ, ಶ್ರೇಷ್ಠಸಮರ್ಥನೂ, ನಾಚಿಕೆಯಿಲ್ಲದವನೂ, ದುಷ್ಟಸಹವಾಸಿಯೂ, ಕುರೂಪಿಯೂ, ಕೆಟ್ಟನಡತೆಯುಳ್ಳವನೂ, ಮದ್ಯಪಾನಾಸಕ್ತನೂ, ನೀಚನೂ, ಅನಾಥನೂ, ಹೆಣ್ಣಿನ ಕೊಲೆಗೆ ಎಂದೆಂದೂ ಹಿಂತೆಗೆಯದವನೂ, ಕೃಪಣನೂ, ಅತ್ಯಧಮನೂ, ಸುಳ್ಳುಗಾರನೂ, ಎಲ್ಲರನ್ನೂ ಹೀಯಾಳಿಸುವವನೂ ಆದವನು ಮನಸಾರೆ ಒಪ್ಪಿ ಪ್ರವೇಶಿಸುವ ಸ್ಥಳವು ಕುದುರೆಯ ಲಾಯವಲ್ಲವೆ ? ೬೫೬. ದಿಕ್ಕುಗೆಟ್ಟವನು, ದುಷ್ಟ, ಜೂಜುಗಾರ, ದುಷ್ಕರ್ಮಿ, ಸೆರೆಯಾಳು, ಕಳ್ಳ, ನರಕಿ, ಅತಿಪಾಪಿಷ್ಠರಲ್ಲದೆ (ಇತರರು) ಕುದುರೆಗಳ

ವ॥ ಅದಱಿಂದೇನಾನುಮೊಂದು ವಾರ್ತಾವಿಶೇಷಮಂ ಕೇಳಲಪ್ಪುದೆಂದಲ್ಲಿರ್ಪುದುಂ

ಅಲ್ಲಿಗೆ [ಯ]ದೃಚ್ಛೆಯಿಂ ಚಿ
ತ್ತೋಲ್ಲಾಸಂ ಜನಿಸಿ ಬಾಹುಕಂ ಬಂದು ಮುದಂ
ಪಲ್ಲವಿಸೆ ದೂತನಂ ನೀ
ನೆಲ್ಲಿಂದೆಯ್ತಂದೆಯೆಂದು ಕೇಳಲ್ ಬಗೆದಂ ೬೫೭

ಎಲ್ಲಿಂದ ಬಂದೆ ನಿನ್ನಂ
ಬಲ್ಲವರಾರಾರುಮೊಳರೆ ಕಾರ್ಯಂ ನಿನಗೇ
ನಿಲ್ಲಿ ತಿಳಿವಂತು ಪೇೞೆನ
ಗೆಲ್ಲವನೆಂದೊಲ್ದು ಬಾಹುಕಂ ಬೆಸಗೊಂಡಂ ೬೫೮

ವ॥ ಅಂತು ಬೆಸಗೊಳ್ವುದುಂ

ಅಡವಿಯೊಳಾತ್ಮವಲ್ಲಭೆಯನೊರ್ವಳ ನಿದ್ರೆಗೆಯ್ಸಿ ತಾಂ
ನಡುವಿರುಳೆರ್ದು ಪೋದ ನಳನೆಂಬ ಮಹಾತ್ಮನದೆಲ್ಲಿ ಪೊಕ್ಕನೆಂ
ದಡಿಗಡಿಗೆಯ್ದೆ ಚಿಂತಿಸಿ ವಿಚಾರಿಸಲಟ್ಟಿದಳೆನ್ನನಾತನಾ
ಮಡದಿ ಧರಿತ್ರಿಯಂ ತಿರುಗಿಯೊಂದೆಡೆಗಾಣದೆ ಬಂದೆನೀಕ್ಷಣಂ ೬೫೯

ವ॥ ಅದಂ ಬಾಹುಕಂ ಕೇಳ್ದು

ಈ ತೆಱದಿಂ ಕಳುಪುವುದು
ಸ್ವಾತಂತ್ರ್ಯದ ಸತಿಯರೊಳಗೆ (ರ?) ಧರೆಯೊಳೆನುತ್ತೊ

ಸಮೂಹಕ್ಕೆ ಸರ್ವದಾ ಪಾಲಕರಾಗುವರೆ ?] ವ॥ ಆದ್ದರಿಂದ ಯಾವುದಾದರೊಂದು ವಿಶೇಷ ಸಂಗತಿಯನ್ನು ಕೇಳಲಾಗುವುದೆಂದು ಅಲ್ಲಿರಲು, ೬೫೭. ಬಾಹುಕನು ಮನಃ ಪ್ರಸನ್ನಗೊಂಡು, ತನ್ನ ಇಷ್ಟಾನುಸಾರವಾಗಿ ಅಲ್ಲಿಗೆ ಬಂದು, ಸಂತೋಷವು ಚಿಗುರೊಡೆಯಲು, ಚಾರನನ್ನು (ಕಂಡು) 'ನೀನು ಎಲ್ಲಿಂದ ಬಂದೆ' ಎಂದು ಕೇಳಲು ಆಶಿಸಿದನು. ೬೫೮. 'ಎಲ್ಲಿಂದ ಬಂದೆ ? ನಿನ್ನನ್ನು ತಿಳಿದವರು ಯಾರಾದರೂ ಇರುವರೆ ? ಇಲ್ಲಿ ನಿನಗೇನು ಕೆಲಸ ? ಸ್ಪಷ್ಟವಾಗುವಂತೆ ಎಲ್ಲವನ್ನೂ ನನಗೆ ಹೇಳು' ಎಂದು ಬಾಹುಕನು ಪ್ರೀತಿಯಿಂದ ಕೇಳಿದನು. ವ॥ ಹಾಗೆ ಕೇಳಲು, ೬೫೯. ಕಾಡಿನಲ್ಲಿ ತನ್ನ ಹೆಂಡತಿಯೊಬ್ಬಳನ್ನೇ ನಿದ್ರೆ ಮಾಡಿಸಿ ತಾನು ನಟ್ಟಿರುಳಿನಲ್ಲಿಯೇ ಎದ್ದು ಹೋದ ನಳನೆಂಬ ಮಹಾತ್ಮನು ಎಲ್ಲಿ ಹೊಕ್ಕಿರುವನೋ ಎಂದು ನಿಮಿಷ ನಿಮಿಷವೂ ಚಿಂತಿಸಿ, ವಿಚಾರಿಸುವ ಸಲುವಾಗಿ ಆತನ ಹೆಂಡತಿ ನನ್ನನ್ನು ಕಳುಹಿಸಿಕೊಟ್ಟಳು. ಈ ಭೂಮಂಡಲವನ್ನೆಲ್ಲ ಅಲೆದಾಡಿ, ಒಂದು ಸ್ಥಳದಲ್ಲಿಯೂ (ನಳನನ್ನು) ಕಾಣದೆ ಈ ಕ್ಷಣ (ಇಲ್ಲಿಗೆ) ಬಂದೆನು. ವ॥ ಅದನ್ನು ಬಾಹುಕನು ಕೇಳಿ. ೬೬೦. ಭೂಮಿಯಲ್ಲಿ ಈ ತೆರನಾಗಿ ಕಳುಹಿಸುವ

ಲ್ದಾತಂ ಪೋದಂ ಪುರದಿಂ
ದೂತಂ ಪೊಜಿಮಟ್ಟು ಬಂದಬಟ್ಟೆಗೆ ನಡೆದಂ ೬೬೦

ವ॥ ಆತಂ ಕುಂಡಿನಪುರಕ್ಕೆ ಮಗುಟ್ಟು ಬಂದು ದಮಯಂತಿಯಂ ಕಂಡು

ಪ್ರಿಯದಿಂ ಕೇಳ್ ವಿಧುಮುಖಿಯಾ
ನಯೋಧ್ಯಿಯಿಂ ಬಂದೆನಲ್ಲಿ ಪುಟ್ಟಿದ ನವವಾ
ರ್ತೆಯದೊರ್ವ ಬಾಹುಕಂ ನೃಪ
ಹಯರಕ್ಷಕನೆಂದ ಮಾತು ಮತ್ಸನ್ನಿಧಿಯೊಳ್ ೬೬೧

ಕಾಂತನನಜಿಸಲ್ ಸ್ತ್ರೀ ಸ್ವಾ
ತಂತ್ರ್ಯದಿನಟ್ಟುವವರೊಳರೆಯೆಂದಾತಂ ಪೋ
ದಂ ತತ್ಪುರದೊಳ್ ಮತ್ತೇ
ನುಂ ತಿಳಿಯದು ನಿನ್ನ ಪತಿಯ ನಿಜವೃತ್ತಾಂತಂ ೬೬೨

ವ॥ ಆದಲ್ಲದೆಯುಂ

ಗಂಡನೆನಿಸನೀಕೆಯ ನಳಿ
ಗುಂ(ಗಂ)ಡಿನೊಳಸವಸದಿ ಗಾರಣವನೆಸಗುವಳಂ(ನಂ?)
ಕಂಡೆನೆನುತ್ತಂ ಭೀಷ್ಮಂ
ಭಂಡಣದೊಳ್ ಸಲೆ ಶಿಖಂಡಿಗಂಡಂತಿರ್ದಂ ೬೬೩

ಸ್ವಾತಂತ್ರ್ಯವುಳ್ಳ ಸತಿಯರು ಇರುವರೆ ಎನ್ನುತ್ತ ಆತನು ಹೊರಟನು. ದೂತನು ಆ ಊರಿನಿಂದ ಹೊರಟು, ಬಂದ ದಾರಿಯಲ್ಲಿ ನಡೆದನು. ವ॥ ಆತನು ಕುಂಡಿನಪುರಕ್ಕೆ ಹಿಂತಿರುಗಿ ಬಂದು ದಮಯಂತಿಯನ್ನು ನೋಡಿ, ೬೬೧. ಎಲೈ ಚಂದ್ರಮುಖಿಯೇ, ನಾನು ಅಯೋಧ್ಯೆಯಿಂದ ಬಂದೆ. ಅಲ್ಲಿ ಹುಟ್ಟಿದ ಹೊಸ ಸುದ್ದಿಯನ್ನು ವಿಶ್ವಾಸವಿಟ್ಟು ಕೇಳು. ರಾಜನ ಅಶ್ವಪಾಲಕನಾದ ಬಾಹುಕನೆಂಬುವನು ನನ್ನ ಬಳಿಯಲ್ಲಿ ಆಡಿದ ಮಾತಿದು ೬೬೨. 'ಗಂಡನನ್ನು ಹುಡುಕಲು ಹೆಂಗಸರಲ್ಲಿ ಸ್ವಾತಂತ್ರ್ಯ ವಹಿಸಿ ಕಳುಹಿಸುವವರು ಇದ್ದಾರೆಯೆ?' ಎಂದು (ನುಡಿದು) ಆತನು ತೆರಳಿದನು. ಆ ಊರಿನಲ್ಲಿ ನಿನ್ನ ಗಂಡನ ಸಂಗತಿಯು ಬೇರೇನೂ ತಿಳಿದುಬರಲಿಲ್ಲ. ವ॥ ಅಷ್ಟೇ ಅಲ್ಲದೆ, ೬೬೩. ಈಕೆಯನ್ನು ನಿಶ್ಶಕ್ತನಾಗಿ ಆತುರದಿಂದ ದೂರಿಗೆ ಗುರಿಮಾಡುವವನು ಗಂಡನೆನ್ನಿಸುವುದಿಲ್ಲ ಎನ್ನುತ್ತ

ವ॥ ಅದಂ ಕೇಳ್ದು ದಮಯಂತಿ ಕತಿಪಯದಿನವಂ ಕಳೆಯೆ

ಅನುಸಯದಿಂ ದಮಯಂತಿಗೆ
ಪುನಸ್ಸ್ವಯಂವರವನೆಸಗುವಂ ಭೀಮನೃಪಂ
ಜನಪತಿಗಳ್ ಶೀಘ್ರತೆಯಿಂ
ತನತನಗೆಯ್ತರ್ಪುದಿರದೆ ನಾಳೆ ಮುಹೂರ್ತಂ ೬೭೪

ಎಂಬೀ ವಾರ್ತೆಯನೆಲ್ಲವ
ನಂಬುದರವದಿಂದಯೋಧ್ಯೆಯೊಳ್ ಸಾಜಿ ಮಗು
ಟ್ದಂಬಂ ಕಡುಪಿಂದೆಚ್ಚಪ
ರೆಂಬಂದದಿನಿಲ್ಲಿಗೊಲ್ದು ಬರ್ಪುದು ಬೇಗಂ ೬೭೫

ಎಂದೊರ್ವ ಪಾರ್ವನಂ ಪೇ
ಟೆಂದೊಲವಿಂ ಕಳುಪಿ ಭೀಮಸುತೆ ದೈವವದೇ
ನಂದವನೆಸಗುವುದೋ ಮ
ನ್ನಂದನರತಿಭಾಗ್ಯವೆಂತುಟೋ ಎನುತಿರ್ದಳ್ ೬೭೬

ಅತ್ತಲಯೋಧ್ಯೆಗೆ ಪಾರ್ವಂ
ಬಿತ್ತರದಿಂ ಪೋಗಿ ತತ್ಸ್ವಯಂವರ ವಿಲಸ
ದ್ವೃತ್ತಾಂತಬೀಜವಂ ತವೆ
ಬಿತ್ತಿದನೆಲ್ಲರ್ಗೆ ಮನದ ಕೌತುಕವಾಗಲ್ ೬೭೭

ಭೀಷ್ಮನು ಯುದ್ಧಮಾಡುವಲ್ಲಿ ಶಿಖಂಡಿಯನ್ನು ಕಂಡಂತೆ ಇದ್ದನು. ವ॥ ಅದನ್ನು ಕೇಳಿ ದಮಯಂತಿ ಕೆಲವು ದಿನಗಳನ್ನು ಕಳೆಯಲು. ೬೭೪. 'ಭೀಮರಾಜನು ಪ್ರೀತಿಯಿಂದ ದಮಯಂತಿಗೆ ಪುನಃ ಸ್ವಯಂವರವನ್ನು ಮಾಡುವನು. ರಾಜರು ವಿಳಂಬಮಾಡದೆ ತಾವಾಗಿಯೇ ಬೇಗ ಬರತಕ್ಕದು. ನಾಳೆಯೇ ಮುಹೂರ್ತ' ೬೭೫. ಎಂಬುದಾಗಿ ಈ ಸಮಸ್ತ ವೃತ್ತಾಂತವನ್ನು, ಮೇಘಘೋಷದಿಂದ ಅಯೋಧ್ಯೆಯಲ್ಲಿ ಸಾರಿ ಹೇಳಿ, (ಬಿಟ್ಟ) ಬಾಣವನ್ನೇ ಉತ್ಸಾಹದಿಂದ ಪುನಃ ಹೊಡೆಯುವರೋ ಎಂಬಂತೆ, ಇಲ್ಲಿಗೆ ಬೇಗನೆ ಪ್ರೀತಿಯಿಂದ ಬರತಕ್ಕುದು ೬೭೬. ಎಂದು ಒಬ್ಬ ಬ್ರಾಹ್ಮಣನಿಗೆ ಹೇಳುವಂತೆ ವಿಶ್ವಾಸದಿಂದ ಕಳುಹಿಸಿಕೊಟ್ಟು, ಭೀಮಕುಮಾರಿ ದೈವವು ಯಾವ ರೀತಿಯಾಗಿ ವರ್ತಿಸುವುದೋ, ನನ್ನ ಮಕ್ಕಳ ಭಾಗ್ಯವಾದರೂ ಹೇಗಿದೆಯೋ ಎನ್ನುತ್ತ ಇದ್ದಳು. ೬೭೭. ಅತ್ತ ಬ್ರಾಹ್ಮಣನು ಅಯೋಧ್ಯೆಯ ಎಲ್ಲೆಡೆಗಳಿಗೂ ಹೋಗಿ ಆ ಸ್ವಯಂವರದ ಸುಪ್ರಸಿದ್ಧವಾದ ಸುದ್ದಿಯ ಬೀಜವನ್ನು ಎಲ್ಲರ ಮನಸ್ಸಿಗೂ ಕುತೂಹಲವಾಗುವಂತೆ ಅತಿಶಯವಾಗಿ ಬಿತ್ತಿದನು.

ವ॥ ಅದಂ ಋತುಪರ್ಣಂ ಕೇಳ್ದು

ನಾಳೆ ಮುಹೂರ್ತಕೆಯ್ದುವ
ಭಾಳಾಕ್ಷನದಾರ್ ಸಹಸ್ರಯೋಜನಪಥಮಂ
ಕೇಳಲ್ಕಘಟಿತವೆಂದು ನೃ
ಪಾಳಂ ಚಿಂತಾಮಹಾಬ್ಧಿಯೊಳ್ ಮುಳುಗಿರ್ದಂ ೬೬೮

ವ॥ ತಚ್ಚಿಂತೆಯಿಂ (ಯಿಂ?) ರಾಜವಾಹಕನಾದ ಮಂದುರಿಗಂ ತಾನುಂ (ಚಿಂತೆಯಿಂ?) ಮಂದುರಕ್ಕೆ ವಂದಿರ್ದುದಂ ಬಾಹುಕಂ ಕಂಡು

ಸಾಹಣಿಯಮುಖಂ ಚಿಂತಾ
ವ್ಯೂಹವನಾಂತಿರ್ಪುದೇಕೆನಲ್ಕೆಂದಂ ಕೇಳ್
ಬಾಹುಕ ಮನ್ನೃಪತಿಯ ಬೇ
ಳ್ವಾ ಹೃದಯದ ಚಿಂತೆಯೆನ್ನ ಚಿಂತೆಯುದಲ್ತೇ ೬೬೯

ವ॥ ಅದೆಂತೆನೆ

ಅತುಳಪ್ರೀತಿಪುನಸ್ಸ್ವಯಂವರ ಮಹೋತ್ಸಾಹಂ ಗಡಂ ನಾಳೆ ಭೀ
ಮತನೂಜಾತೆಗೆ ಮದ್ಧರಾಧಿಪತಿ ತಾಂ ಪೋಪುದವೆಂತೆಂಬುದಂ
ಸ್ಥಿತಚಿಂತಾಪರನಾಗಿ ಶೀಘ್ರಗತಿಯಿಂ ಸಾರಥ್ಯಮಂ ಮಾಳ್ಪ ಸ
ಮ್ಮತಿಯುಂಟಾದೊಡೆ ಬೇಳ್ಪ ರಾಜ್ಯಪದಮಂ ಕೂರ್ತೀವೆನೆಂದಿರ್ದಪಂ ೬೭೦

ವ॥ ಅದನ್ನು ಋತುಪರ್ಣನು ಕೇಳಿ, ೬೬೮. 'ಸಾವಿರ ಯೋಜನ ಮಾರ್ಗವನ್ನು (ದಾಟಿ) ನಾಳೆ ಮುಹೂರ್ತಕ್ಕೆ ಹೋಗಿ ಸೇರುವ ರುದ್ರನಾದರೂ ಯಾವನಿರುವನು ? ಕೇಳುವುದಕ್ಕೂ ಅಸಂಭವವಾದುದು' ಎಂದು ನೃಪಾಲನು ಚಿಂತೆಯೆಂಬ ಮಹಾಸಮುದ್ರದಲ್ಲಿ ಮುಳುಗಿದ್ದನು. ವ॥ ಅದೇ ಚಿಂತೆಯಿಂದ ರಾಜನ ಸಾರಥಿಯೂ, ಹಯಶಾಲೆಯ ಮೇಲ್ವಿಚಾರಕನೂ ಆದವನು ಹಯಶಾಲೆಗೆ ಬಂದಿದ್ದುದನ್ನು ಬಾಹುಕನು ನೋಡಿ, ೬೬೯. ಹಯಶಾಲೆಯ ಮೇಲ್ವಿಚಾರಕನ ಮುಖವು ಚಿಂತಾಗ್ರಸ್ತವಾಗಿರುವುದೇಕೆ ಎಂದು ಕೇಳಲು, (ಆತನು) "ಎಲೈ ಬಾಹುಕನೆ ಕೇಳು, ನನ್ನ ಮಹಾರಾಜನ ಕುದಿಯುವ ಆ ಎದೆಯ ಚಿಂತೆ ನನ್ನ ಚಿಂತೆಯೂ ಅಲ್ಲವೆ ?" ಎಂದನು. ವ॥ ಅದು ಹೇಗೆ ಎನ್ನಲು, ೬೭೦. ಭೀಮರಾಜನ ಮಗಳಿಗೆ ನಾಳೆ ಅಪಾರ ಪ್ರೀತಿಯುಕ್ತವಾದ ಪುನಃ ಸ್ವಯಂವರ ವಷ್ಟೆ ! ನಮ್ಮ ಮಹಾರಾಜನು ತಾನು ಹೋಗುವ ಬಗೆಯಾದರೂ ಹೇಗೆ ಎಂಬುದಾಗಿ ದೃಢಚಿಂತಾಮಗ್ನನಾಗಿ, ಅತ್ಯಂತ ವೇಗವಾಗಿ ಸಾರಥ್ಯವನ್ನು ಮಾಡಲು (ಯಾರಾದರೂ) ಒಪ್ಪಿದಲ್ಲಿ, (ಆತನು) ಬೇಡುವ ರಾಜ್ಯಪದವಿಯನ್ನಾದರೂ ಒಲಿದು ನೀಡುವೆನು

ವ|| ಆ ಮಾತಿಂಗೆ

ನಳನೃಪತಿಗೆ ಮುನ್ನಂ ಕಂ
ಗೊಳೆ ಸಾರಥಿಯಾದ ಹೊಲಬನಱಿವೆಂ ನವಮು
ಗಳಸಮಯಕ್ಕವನಿಪನಂ
ಘಳಿಲನೆ ಕೊಂಡೊಯ್ವೆನಶ್ವಮಂ ಕೊ(ಕು?)ಡಿಸೆಂದಂ ೬೭೧

ವ|| ಆ ಮಾತಂ ಕೇಳ್ದು ರಾಜವಾಹಕಂ ಋತುಪರ್ಣನ ಸಮೀಪಕ್ಕೆ ಪೋಗಿ

ಒಂದು ಶುಭವಾರ್ತೆಯುಂ ಕೇಳ್
ಮಂದುರದಾರೈಕೆಗಿರ್ದ ಬಾಹುಕನೆಂಬಂ
ಸ್ಯಂದನವನೆಸಗಿ ಮೆಚ್ಚಿಪೆ
ನೆಂದೆನ್ನೊಳ್ ಪೇಟ್ದು ಕುದುರೆಯುಂ ಕುಡಿಸೆಂದಂ ೬೭೨

ರಥವಂ ರತ್ನಪಿನದ್ಧ ಚಕ್ರಯುಗಳ ಶ್ರೀರಮ್ಯಚಂಚನ್ಮನೋ
ರಥವಂ ಚೋದಿಸಲುರ್ವರಾಧಿಪ ಮಹೋತ್ಸಾಹಂ ಮಿಗಲ್ ನಿನ್ನ ಸಾ
ರಥಿಯಪ್ಪಂ ಕಲೆ ಬಾಹುಕಂ ನಿಜಮಹೋದ್ವಾಹಪ್ರಯಾಣಕ್ಕೆ ಸ
ತ್ಪಥವಂ ಬಲ್ಲವನೆಂದು ಬಿನ್ನವಿಸಿದಂ ತನ್ಮಂದುರಾಧ್ಯಕ್ಷನಂ(?) ೬೭೩

ವ|| ಮತ್ತಂ

ಆತಂ ನಳನೃಪತಿಗೆ ಮು
ನ್ನೋತೆಸಗಿದನತುಳರಥವನೆಂದು ಮನಸ್ಸಂ

ಎಂಬುದಾಗಿ ಇರುವನು. ವ|| ಆ ಮಾತಿಗೆ. ೬೭೧. ನಳಮಹಾರಾಜನಿಗೆ ಈ ಮೊದಲೇ ತೋರಿಬರಲು, 'ಸಾರಥಿಯಾಗಬಲ್ಲ ಮಾರ್ಗವನ್ನು ತಿಳಿದಿರುತ್ತೇನೆ. ನೂತನ ಶುಭ ಸಮಯಕ್ಕೆ ಸರಿಯಾಗಿ ಮಹಾರಾಜನನ್ನು ಕೂಡಲೆ ಕೊಂಡೊಯ್ಯುತ್ತೇನೆ, ಕುದುರೆ ಯನ್ನು ಕೊಡಿಸು' ಎಂದನು. ವ|| ಆ ಮಾತನ್ನು ಕೇಳಿ ರಾಜನ ಸಾರಥಿ ಋತು ಪರ್ಣನ ಬಳಿಗೆ ತೆರಳಿ, ೬೭೨. ಒಂದು ಶುಭಸಂಗತಿಯನ್ನು ಕೇಳು, ಹಯಶಾಲೆಯ ಪಾಲನೆಯಲ್ಲಿರುವ ಬಾಹುಕನೆಂಬಾತನು ಸಾರಥ್ಯವನ್ನು ಮಾಡಿ (ನಿನ್ನನ್ನು) ಮೆಚ್ಚಿ ಸುವೆನು ಎಂಬುದಾಗಿ ನನ್ನೊಡನೆ ಹೇಳಿ, ಕುದುರೆಯನ್ನು ಕೊಡಿಸು' ಎಂದನು. ೬೭೩. 'ಎಲೈ ಮಹಾರಾಜನೆ ! ರತ್ನಘಟಿತವಾದ ಎರಡು ಚಕ್ರಗಳುಳ್ಳ ರಥವನ್ನೂ ಸಂಪದ್ಯುಕ್ತವೂ ಪ್ರಕಾಶಮಾನವೂ ಆದ ಮನೋರಥವನ್ನು ಉತ್ಸಾಹ ಮೇರೆಮೀರು ವಂತೆ ನಡೆಸಲು ಬಾಹುಕನು ನಿನ್ನ ಸಾರಥಿಯಾಗುವನು, (ಅವನನ್ನು) ಬರಮಾಡಿಕೋ. ನೈಜವೂ ಅತಿಶಯವೂ ಆದ ವಿವಾಹದ ಪ್ರಯಾಣಕ್ಕೆ ಸರಿಯಾದ ಮಾರ್ಗವನ್ನು ಬಲ್ಲನು' ಎಂದು ಆ ಹಯಶಾಲೆಯ ಒಡೆಯನು ವಿನಂತಿಮಾಡಿಕೊಂಡನು. ವ|| ಮತ್ತು, ೬೭೪. ಆತನು ಈ ಮೊದಲು ನಳಮಹಾರಾಜನಿಗೆ ಮನಮೆಚ್ಚಿ ಅಸದೃಶವಾದ ರಥವನ್ನು

ಪ್ರೀತಿಯನಾಗಿಸುತಿರ್ಪಂ
ಭೂತಳಪತಿ ಕರೆಸಿಕೊ(ಕು?)ಡು ತುರಂಗವನೆರಡಂ ೬೭೪

ವ॥ ಎಂಬುದುಂ ಬಾಹುಕನಂ ಕರೆಸಿ ತುರಂಗಮಂ ತೆಗೆಯೆನಲ್

ಮಂದುರದೊಳ್ ಬಡವಾಗಿ
ರ್ದೊಂದೆರಡಂ ತುರಂಗಮಂ ರಥಕೆಂದಾತಂ
ಮುಂದಿರಿಸಲ್ ಕಂಡವನಿಪ
ನೆಂದಂ ನಗೆಗೆಡೆಯಮಾಡಲೇಕಿಂತೆನ್ನಂ ೬೭೫

ಚಿತ್ತೈಸು ನೃಪತಿ ನಿನ್ನಯ
ಚಿತ್ತಕ್ಕಾಂ ಬರ್ಪತೆಱದೆ ನಾಳೆ ಮುಹೂರ್ತಾ
ಯತ್ತಂ ತಪ್ಪದವೊಲ್ ಪೇ
ೞುತ್ತಮ ಕುಂಡಿನಪುರಕ್ಕೆ ನಾಂ ತೆರಳಿಸುವೆಂ ೬೭೬

ವ॥ ಎಂದು

ಕಡುಬಡವಾದೆರಟ್ಟಿಕುದುರೆಯುಂಗವನೊಯ್ಯನೆ ತನ್ನ ಕೈಗಳಿಂ
ತೊಡೆಯುತೊಡಂ ಸಡಿಲ್ದ ತನು ಕೊರ್ಬಿ ಸಟಾಳಿ ನಿಮಿರ್ದು ಕಾಂತಿ ನೂ
ರ್ಮಡಿಸಿ ಕೊನರ್ತು ರೋಮತತಿ ಭೀಷಣ ಹೇಷಿತದಿಂ ಖುರಾಗ್ರದೊಳ್
ಗುಡಿಗುಡಿಗಟ್ಟಿ ಸಂತತಮನೋತ್ಸವಮಂ ತಳೆದಿರ್ದುದಾಕ್ಷಣಂ ೬೭೭

ನಡೆಸಿದವನು ಎಂಬುದಾಗಿ ಮನಸ್ಸಿಗೆ ಆನಂದವನ್ನು ಉಂಟುಮಾಡುತ್ತಿರುವನು. ಎಲೈ ಮಹಾರಾಜನೆ ! ಆತನನ್ನು ಕರೆಸಿ ಎರಡು ಕುದುರೆಗಳನ್ನು ಕೊಡು. ವ॥ ಹೀಗೆನ್ನಲು, ಬಾಹುಕನನ್ನು ಕರೆಸಿ ಕುದುರೆಗಳನ್ನು ಆರಿಸಿಕೋ ಎನ್ನಲು, ೬೭೫. ಅಶ್ವಶಾಲೆಯಲ್ಲಿ ಬಡವಾಗಿದ್ದ ಒಂದೆರಡು ಕುದುರೆಗಳನ್ನು ರಥಕ್ಕೆಂದು ಆತನು ಮುಂದೆ ಇಡಲು, ರಾಜನು ನೋಡಿ, ಹೀಗೆ ನನ್ನನ್ನು ನಗೆಗೆ ಈಡುಮಾಡುವುದೇಕೆ ಎಂದನು, ೬೭೬. ಎಲೈ ಮಹಾರಾಜನೆ ಕೇಳು, ನಿನ್ನ ಮನಸ್ಸಿಗೆ ಒಪ್ಪುವ ರೀತಿಯಲ್ಲಿ ನಾನು ನಾಳೆಯ ಮುಹೂರ್ತವು ತಪ್ಪದಂತೆ ಉತ್ತಮವಾದ ಕುಂಡಿನಪುರಕ್ಕೆ ಕರೆದೊಯ್ಯುವೆನು. ವ॥ ಎಂದು ಹೇಳಿ ೬೭೭. ಬಹಳ ಬಡವಾಗಿದ್ದ ಎರಡು ಕುದುರೆಗಳ ಶರೀರವನ್ನು ಒಂದೇಸಮನೆ ತನ್ನ ಕೈಗಳಿಂದ ಸವರಿದೊಡನೆಯೇ, ಸಡಿಲವಾಗಿದ್ದ ಶರೀರ ಹಿಗ್ಗಿ, ಕೇಸರಗಳು ನಿಮಿರಿ, ಕಾಂತಿ ನೂರುಮಡಿಯಾಗಿ, ಕೂದಲುಗಳ ಸಮೂಹವು ಪುಟವೆದ್ದು, ಭಯಂಕರವಾದ ಕೆನೆಯುವಿಕೆಯಿಂದ ಗೊರಸಿನ ತುದಿಗಳಿಂದ ಉದ್ರೇಕಗೊಂಡು (ನೆಲ

ವ॥ ಅದಂ ಕಂಡು ಕುತೂಹಳಚಿತ್ತನಾಗಿ ಋತುಪರ್ಣಂ ರಥವಂ ತರಿಸಿ

ಸಂಕುಳರತ್ನದಿಂ ಪೊಳೆವ ಛತ್ರವೊ ಭೂವಧುವಿಟ್ಟ ಕರ್ಣತಾ
ಟಂಕವೊ ಹೇಮದಿಂ ಸಮೆದ ನೇಮಿಯೊ ಬಲ್ಪಿನಸೀಮೆಯೋ ಮಹಾ
ಲಂಕೃತಿವೆತ್ತು ನುಣ್ಪೆಸೆವ ಕುಂಭಗಳೆಂದವೊ ವಜ್ರದಂಡವೋ
ಶಂಕೆಗಳುಂಬಮಾಯ್ತು ರಥವಭ್ಯುದಯಾವಸಥಂ ಮನೋರಥಂ ೬೭೮

ಉದಿತರವಿಪ್ರಭಾಸದೃಶ ನಿರ್ಮಳನೂತನರತ್ನಬದ್ಧ ಸಂ
ಪದರಥ ಸನ್ನಿವಿಷ್ಟ ತಪನೀಯ [ಕನಧ್ವ] ಜ ವೈಜಯಂತಿಕಾ
ಭ್ಯುದಯವಳಂಕಿವೆತ್ತು ದಸೆಯಂ ಬೆಳಗಲ್ಕೆ ಚಕಚ್ಚಕಾಯಮಾ
ನದಿನೆಸೆದತ್ತು ತನ್ನೃಪವರೂಥವಯೋಧ್ಯಪುರಾಗ್ರವೀಥಿಯೊಳ್ ೬೭೯

ದನುಜಾರಿಯಾಂತ ಚಕ್ರಮು
ನಿನರಥದೊಂದುಳ್ಳ ಚಕ್ರಮುಂ ವಿಕ್ರಮದಿಂ
ಮುನಿದಿಟ್ಟುಳಿಗೊಂಡಂದದಿ
ನನುಪಮಕಾಂತಿಯಿಸದೇಂ ಮನಂಗೊಳಿಸಿದುದೋ ೬೮೦

ವ॥ ಅಂತಿರ್ದ ರಥವಂ ಬಾಹುಕಂ ಕಂಡು
ಪಾಡಱಿದು ಕುದುರೆಯೆರಡಂ
ಹೂಡಿ ಬಟಿಕ್ಕವನಿಪತಿಯನೇಱಿಸಿ ರಥವಂ

ವನ್ನು ಒದೆದು ?) ಆ ಕೂಡಲೆ ಎಡೆಬಿಡದೆ ಚಿತ್ತೋತ್ಸಾಹವನ್ನು ತಾಳಿತ್ತು. ವ॥ ಅದನ್ನು ನೋಡಿ, ಉತ್ಸುಕಯುಕ್ತನಾಗಿ ಋತುಪರ್ಣನು ರಥವನ್ನು ತರಿಸಿ, ೬೭೮. ರತ್ನಗಳ ಸಮೂಹದಿಂದ ಹೊಳೆಯುವ ಛತ್ರಿಯೋ, ಭೂದೇವಿಯಿಟ್ಟುಕೊಂಡಿರುವ ಕಿವಿಯ ಆಭರಣವೋ, ಚಿನ್ನದಿಂದ ಮಾಡಿದ ಚಕ್ರವೋ, ಸಾಮರ್ಥ್ಯದ ಗಡಿಯೋ, ವಿಶೇಷವಾದ ಅಲಂಕಾರದಿಂದ ಕೂಡಿ ನುಣ್ಣಗೆ ತೋರಿಬರುವ ಕಂಬಗಳಂತಹ ವಜ್ರದಂಡವೋ (ಎಂಬಂತೆ) ಏಳಿಗೆಯ ನೆಲೆಯೂ ಮನೋರಥವೂ ಆದ ರಥವು ಸಂದೇಹಕ್ಕೂ ಅತಿಶಯವೆನ್ನಿಸಿತ್ತು. ೬೭೯. ಉದಿಸಿದ ಸೂರ್ಯಕಾಂತಿಸಮಾನವೂ ಪರಿಶುದ್ಧ ನೂತನ ರತ್ನಯುಕ್ತವೂ ಆದ ಸಂಪತ್ತಿನ ರಥಸಾನಿಧ್ಯವುಳ್ಳ ಬಂಗಾರದ ತೇಜೋಧ್ವಜ ವೆಂಬ ವೈಜಯಂತಿಕೆಯ ಉನ್ನತಿಯು ಹೊಂದಿಕೊಂಡು ದಿಕ್ಕುಗಳನ್ನು ಬೆಳಗಲು ಆ ರಾಜನ ರಥವು ಅಯೋಧ್ಯಾಪಟ್ಟಣದ ಮುಖ್ಯಮಾರ್ಗದಲ್ಲಿ ಝಗಝಗಿಸಿ ತೋರಿ ಬಂದಿತು. ೬೮೦. ವಿಷ್ಣುವು ಹಿಡಿದ ಚಕ್ರವನ್ನೂ, ಸೂರ್ಯನರಥದ ಏಕೈಕ ಚಕ್ರವನ್ನೂ ಪರಾಕ್ರಮದಿಂದ ಕೋಪಗೊಂಡು ` ಕಡೆಗಣಿಸಿದಂತೆ ಅಸದೃಶವಾದ ಕಾಂತಿಯಿಂದ ಅದೆಷ್ಟು ಚಿತ್ತಾಕರ್ಷಕವಾಯಿತೋ ! ವ॥ ಹಾಗಿದ್ದ ರಥವನ್ನು ಬಾಹುಕನು ನೋಡಿ, ೬೮೧. ಸ್ಥಿತಿಗತಿಗಳನ್ನು ತಿಳಿದು, ಎರಡು ಕುದುರೆಗಳನ್ನು ಹೂಡಿ,

ಕ್ರೀಡಿಸುವಂದದಿನೆಸಗಲ್
ತೀಡುವ ಬಿಱುಗಾಳಿಯಂತೆ ಪರಿದತ್ತು ರಥಂ ೬೮೧

ಸರಭಸದಿಂದೆರಟ್ಕುದುರೆಯುಂ ರಥಿ ಪೂಡಲೊಡಂ ನಿರಂತರಂ
ಶರಧಿತರಂಗದಂತೆ ಮಱಿಮಿಂಚಿನ ಮಿಂಚುವ ಗೊಂಚಲಂತೆ ಸು
ಟ್ಟುರೆಯ ತೆರಳ್ಕೆಯಂತೆ ತೆರೆಗೊಂಡ ಮರೀಚಿ[ಕೆ]ಯಂತೆ ಕೂಡೆ ಸಂ
ಚರಿಸುವ ಮೇಘದಂತೆ ಕಡುಪಂ ಪಡೆದತ್ತು ರಥಪ್ರಕಂಪನಂ ೬೮೨

ಪಿಡಿದಿರೆ ವಾಘೆಯಂ ಮಿಸುವ ಚಮ್ಮಟಿಯಂ ದನಿಗೆಯ್ದು ಬಾಹುಕಂ
ತುಡುಕಿಡೊಡೆಚ್ಚ ಕೋಲ್ ಭರದಿನುಚ್ಚಳಿಸಿಟ್ಟೆಡೆ ದಾರಿಯಾದ ಪೇ
ರಡವಿಯ ಬೆಟ್ಟಗಳ್ ಜರಿದು ನುರ್ಗುವಿನಂ ಕಡುಕೆಯ್ದು ಪಾಯ್ದುದಿಂ
ಗಡಲ ತರಂಗದಂದದೆ ಮರುಜ್ಜವದಿಂ ರಥವಿಪ್ಪ ದಿಕ್ಪಥಂ ೬೮೩

ಸಾರಥಿಯಾಜ್ಞೆಯಿಂ ನೃಪತಿಯೇಱಲೊಡಂ ರಥಚಕ್ರ ಘೋರಚೀ
ತ್ಕಾರರವಂ ದಿಗಂತರವ ನಂದಿಸೆ ಹಿಂದುೞಿಯಲ್ ಮನೋಜವಂ
ನೀರದಮಾರ್ಗವಂ ಕವಿಯಲೆರ್ದ ರಜಂ ಪರಿದತ್ತು ವಿಸ್ಮಯಾ
ಕಾರದಿನಾರ್ಪುವೆತ್ತ ನವರತ್ನರಥಂ ಕಮನೀಯ ವೇಗದಿಂ ೬೮೪

ಅನಂತರ ರಾಜನನ್ನು ಮೇಲಕ್ಕೆ ಹತ್ತಿಸಿ, ರಥವನ್ನು ಆಟವಾಡಿಸುವವನಂತೆ ನಡೆಸಲು, ರಥವು ಬೀಸಿ ಬರುವ ಬಿರುಗಾಳಿಯಂತೆ ಚಲಿಸಿತ್ತು. ೬೮೨. ಸಡಗರದಿಂದ ಎರಡು ಕುದುರೆಗಳನ್ನು ರಥಿಕನು ಹೂಡಿದೊಡನೆಯೇ, ರಥದ ಕಂಪಿಸುವಿಕೆಯು, ಸರ್ವದಾ ಸಮುದ್ರದ ಅಲೆಯಂತೆ, ಮರಿಮಿಂಚಿನ ಗೊಂಚಲಿನಂತೆ, ಸುಂಟರಗಾಳಿಯ ಸುಳುವಿಕೆಯಂತೆ, ತೆರೆಯೆದ್ದ ಬಿಸಿಲುಗುದುರೆಯಂತೆ, ಒಡನೆಯೇ ಅಲೆದಾಡುವ ಮೋಡಗಳಂತೆ ಉತ್ಸಾಹಗೊಂಡಿತ್ತು. ೬೮೩. ಲಗಾಮನ್ನು ಹಿಡಿದಿರಲು, ಬಾಹುಕನು ಧ್ವನಿಮಾಡುತ್ತ ಹೊಳೆಯುವ ಚಾಟಿಯನ್ನು ತೆಗೆದುಕೊಳ್ಳಲು, ಬಿಟ್ಟಬಾಣವು ವೇಗವೇಗವಾಗಿ ಮುಂದು ಪರಿದು ತಾಗಿದೆಡೆಯಲ್ಲಿ ಮಾರ್ಗವೇರ್ಪಟ್ಟು ದೊಡ್ಡ ಅರಣ್ಯದ ಬೆಟ್ಟಗಳು ಜರಿದು ಪುಡಿಪುಡಿಯಾಗುವಂತೆ, ವಾಯುವೇಗದಿಂದ ರಥವು ಪ್ರವೇಶಿಸಿದ ದಿಕ್ಪಥವು ಕ್ಷೀರಸಾಗರದ ಅಲೆಗಳಂತೆ ಉತ್ಸಾಹದಿಂದ ಹಾದುಹೋಯಿತು. ೬೮೪. ಸಾರಥಿಯ ಅಪ್ಪಣೆಯಂತೆ ಮಹಾರಾಜನು ಹತ್ತಿಕೊಳ್ಳಲು, ರಥದ ಚಕ್ರಗಳ ಭಯಂಕರವಾದ ಚೀತ್ಕಾರ ಶಬ್ದವು ದಿಗ್ದಿಗಂತಗಳ ಅಂತರವನ್ನು ಕುಗ್ಗಿಸಲು, ಮನೋವೇಗವು ಹಿಂದುಳಿಯಲು, ಮೇಲೆದ್ದ ಧೂಳು ಮೋಡಗಳ ಮಾರ್ಗವಾದ ಅಂತರಿಕ್ಷವನ್ನು ವ್ಯಾಪಿಸಲು. ಆಶ್ಚರ್ಯವಾದ ಆಕಾರದಿಂದ ಶಕ್ತಿಶಾಲಿಯಾದ ನವರತ್ನರಥವು ಮನೋಹರ ವೇಗದಿಂದ ಮುಂದು

ಅತಿವೇಗಂ ಸೂರ್ಯನಿಂ ದೃಷ್ಟಿಯಗತಿ ಸತತಂ ಸೂರ್ಯನಿಂ ದೃಷ್ಟಿಯಿಂ ಮಾ
ರುತಮಾರ್ಗಂ ನಿತ್ಯತೀವ್ರಂ ವಿಮಳತರಲಸತ್ಸೂರ್ಯನಿಂ ದೃಷ್ಟಿಯಿಂ ಮಾ
ರುತನಿಂದಂ ಚಿತ್ತಗಮ್ಯಸ್ಥಿತಿ ಬಗೆಯೆ ಮಿಗಲ್ ಸೂರ್ಯನಿಂ ದೃಷ್ಟಿಯಿಂ ಮಾ
ರುತನಿಂ ತಚ್ಚಿತ್ತದಿಂ ಸ್ಯಂದನರಯಮಧಿಕಂ ಹೃದ್ಯಮತ್ಯಂತ ಚೋದ್ಯಂ ೬೮೫

ಜಯಶೀಲಲೋಲ ತನ್ನೃಪ
ತಿಯ ರಥದೊಡಗೂಡಿಯೋಡಲಾಱದೆ ಬೞಿಯಂ
ರಯದಿಂದೆ ವಾಯು ಸೋಲ್ತಪ
ಜಯದಿಂ ಮೆಯ್ಗುಂದಿ ಮಂದಮಾರುತನಾದಂ ೬೮೬

ಖುರಮಂ ಸಾಲಿಡುವಂತೀ
ಧರಣಿಯನಳೆವಂತೆ ಕಡಲ ಕಡೆಯಂ ಕಾಣ್ಬಂ
ತುರವಣೆಯಿಂದುಚ್ಚಳಿಸುವ
ತುರಂಗಮಂ ಕೊಂಡು ಪಾಯ್ದನೂರಿಂ ತೇರಂ ೬೮೭

ಮನದಿಂ ಮುಂದುಱಿವಾಯ್ತು ಮತ್ತೆ ಬಗೆಯಿಂದತ್ತತ್ತ ಪೋಪಂತು ಸೈ
ತನೆ ಚೆಂಬೊನ್ನರಥಂ ಜವಂ ಮಿಗುವಿನಂ ಪೋಗುತ್ತಿರಲ್ ತನ್ನರೇ
ಶನವೃಷ್ಣೀಶವಳಂಕೆಯಿಂ ಸಡಿಲ್ದು ಬೀೞಲ್ ನೋಡಿ ಕೈನೀಡಿ(ಡೆ?)ಯೋ
ಜನದಿನ್ನೂರನಡರ್ತು ಪಾಯ್ದುದು ರಥಂ ಮುಂದಣ್ಕೆ ಸಂರಂಭದಿಂ ೬೮೮

ವರಿದಿತ್ತು. ೬೮೫. ನೋಟದಗತಿ ಸೂರ್ಯನಿಗಿಂತಲೂ ಅತಿ ತ್ವರೆಯಾದುದು. ಸರ್ವದಾ ಸೂರ್ಯನಿಗಿಂತಲೂ ದೃಷ್ಟಿಗಿಂತಲೂ ವಾಯುವೇಗವು ನಿತ್ಯಶೀಘ್ರವಾದುದು. ಪವಿತ್ರವೂ ಪ್ರಕಾಶವೂ ಆದ ಸೂರ್ಯನಿಗಿಂತಲೂ ದೃಷ್ಟಿಗಿಂತಲೂ ಮಾರುತನಿಗಿಂತಲೂ ಮನೋವೇಗದ ಸ್ಥಿತಿ ಭಾವಿಸಲು ಮಿಗಿಲಾದುದು. ಸೂರ್ಯನಿಗಿಂತಲೂ ದೃಷ್ಟಿಗಿಂತಲೂ ವಾಯುವಿಗಿಂತಲೂ ಮನಸ್ಸಿಗಿಂತಲೂ ರಥದವೇಗವು ಹೆಚ್ಚಾದುದು, ಹೃದ್ಯವಾದುದು, ಅತ್ಯಂತ ಕುತೂಹಲಕಾರಿಯಾದುದು. ೬೮೬. ವಿಜಯಾಕಾಂಕ್ಷಿಯಾದ ಆ ರಾಜನ ರಥದೊಂದಿಗೆ ಓಡಲಾರದೆ, ಅನಂತರ ವೇಗದಲ್ಲಿ ವಾಯು ಸೋತು, ಅಪಜಯದಿಂದ ಮೈಗುಂದಿ ಮಂದಮಾರುತನಾಗಿ ಪರಿಣಮಿಸಿದನು. ೬೮೭. ಕುದುರೆಯ ಗೊರಸುಗಳು ಸಾಲಿಡುವಂತೆ, ಈ ಭೂಮಿಯನ್ನು ಅಳೆಯುವಂತೆ, ಸಮುದ್ರದ ಎಲ್ಲೆಯನ್ನು ನೋಡುವಂತೆ, ರಭಸದಿಂದ ಓಡುವ ಕುದುರೆಯನ್ನು ಓಡಿಸುತ್ತ ಊರಿನಿಂದ ತೇರನ್ನು ಹಾಯಿಸಿದನು. ೬೮೮. ಮನಸ್ಸಿಗಿಂತಲೂ ಮುಂಚೆ ಮುಂದುವರಿದು, ಬಳಿಕ ಚಿತ್ತದಿಂದ ಅತ್ತತ್ತ ಹೋಗುವಂತೆ ನೇರವಾಗಿ ಬಂಗಾರದ ರಥವು ವೇಗವು ಮೀರುವಂತೆ ಹೋಗುತ್ತಿರಲು, ಆ ರಾಜನ ಕಿರೀಟವು ಅಲ್ಲಾಡಿ ಸಡಿಲಗೊಂಡು ಬೀಳಲು, ನೋಡಿ ಕೈನೀಡುವಲ್ಲಿ, ಇನ್ನೂರು ಯೋಜನಗಳನ್ನು ಸಾರಿ ರಥವು ಮುಂದಕ್ಕೆ ಸಂಭ್ರಮದಿಂದ ಚಲಿಸಿತ್ತು.

ಇಂತು ಮನೋಜವಂಬೆರಸು ರತ್ನರಥಂ ಕಡುಪಿಂ ಬರುತ್ತಿರಲ್
ಮುಂತೆಸೆದಿರ್ದುದುಚ್ಚ ಕಲಿವೃಕ್ಷವದಂ ನಡೆನೋಡಿ ತತ್ಕುಜ
ಪ್ರಾಂತದೊಳೊಯ್ಯನೊಂದನಿಸು ನಿಂದಲೆಯಿರ್ದಪುವೆನಿತು ಲೆಕ್ಕದಿಂ
ದಂ ತೊದಳಿಲ್ಲೆನುತ್ತಮವನಿಪಂ ನಿಜಸಾರಥಿಗೊಲ್ದು ತೋಱಿದಂ ೬೮೯

ವ॥ ಅಂತು ತೋಱಿ

ಇಲ್ಲಿಗಯೋಧ್ಯಪಟ್ಟಣವೆನಿತ್ತೆನಲಷ್ಟಶತಾಧ್ವಯೋಜನಂ
ಮೆಲ್ಲನೆ ಬಂದೆವಲ್ತೆ ದಮಯಂತಿಯ ಕುಂಡಿನದಿಂ ಶತದ್ವಯಂ
ತಲ್ಲಣವೇಕೆ ನಿನ್ನೆ ಪೊಱಮಟ್ಟನಿತಂ ನಡೆತಂದೆವೀಗಳಿಂ
ತಲ್ಲಿಗೆ ಸಾರ್ವೆವೆಂದು ನರಪಂಗುಸಿರ್ದಂ ಭರದಿಂದ ಬಾಹುಕಂ ೬೯೦

ಈ ತೇರಿಂದೀ ಕುದುರೆಯಿ
ನೇತೆಱದಿಂ ಬಂದೆಯಷ್ಟಶತಯೋಜನಮಂ
ಭೀತಿಯದಿಲ್ಲದೆ ಪೇೞೆನ
ಲಾತಂ ಕೇಳಶ್ವಹೃದಯಮೆನಗುಂಟೆಂದಂ ೬೯೧

ವ॥ ಅನಂತರಂ

ಜನನಾಥಂ ಬಾಹುಕಂಗಾ ಕಲಿಕುಜದ ದಳಾನೀಕಮಂ ನೋಡಿ ಲೆಕ್ಕ
ಕ್ಕನಿತೆಂದಿರ್ದಂದು ಪೇೞಲ್ ಬೆಱಗುವಡೆದು ತದ್ಬಾಹುಕಂ ಸಂಖ್ಯೆಯಂ ಪೇ

೬೮೯. ಈ ರೀತಿ ಮನೋವೇಗದಿಂದ ಕೂಡಿ ರತ್ನರಥವು ಉತ್ಸಾಹದಿಂದ ಬರುತ್ತಿರಲು ಮುಂದೆ ಎತ್ತರವಾದ ಕಲಿವೃಕ್ಷವಿದ್ದಿತು. ಅದನ್ನು ನಿಟ್ಟಿಸಿನೋಡಿ ಆ ಮರದ ಎಡೆಯಲ್ಲಿ ಕೂಡಲೆ ಸ್ವಲ್ಪ ನಿಂತು, ಎಷ್ಟು ಎಲೆಯಿರುವುವು ? ಲೆಕ್ಕಮಾಡುವಲ್ಲಿ ತಪ್ಪಿರದು ಎನ್ನುತ್ತ ರಾಜನು ತನ್ನ ಸಾರಥಿಗೆ ಒಲಿದು ತೋರಿದನು. ವ॥ ಹಾಗೆ ತೋರಿಸಿ. ೬೯೦. ಇಲ್ಲಿಂದ ಅಯೋಧ್ಯಾಪಟ್ಟಣವು ಎಷ್ಟು ದೂರವಿದೆಯೆನ್ನಲು, ಎಂಟುನೂರು ಯೋಜನದ ದಾರಿಯನ್ನು ಮೆಲ್ಲಗೆ ಸಾಗಿ ಬಂದೆವಷ್ಟೆ. ದಮಯಂತಿಯ ಕುಂಡಿನ ನಗರವು ಇನ್ನೂರು ಯೋಜನೆಗಳಿವೆ. ತಲ್ಲಣವೇಕೆ ? ನಿನ್ನೆ ಹೊರಟು ಇಷ್ಟುದೂರ ಬಂದಿರುತ್ತೇವೆ. ಈಗ ಅಲ್ಲಿಗೆ ಹೋಗುವೆವೆಂದು ಮಹಾರಾಜನಿಗೆ ಬಾಹುಕನು ಉತ್ಸಾಹ ದಿಂದ ಹೇಳಿದನು. ೬೯೧. ಈ ತೇರಿಂದ. ಈ ಕುದುರೆಯು (ನೆರವಿನಿಂದ). ಎಂಟುನೂರು ಯೋಜನಗಳನ್ನು ಯಾವ ರೀತಿಯಾಗಿ (ಹಾದು) ಬಂದೆ ? ಭಯವಿಲ್ಲವೆ ತಿಳಿಸು ಎನ್ನಲು, ಆತನು (ಬಾಹುಕನು) 'ಕೇಳು, ನನಗೆ ಅಶ್ವಹೃದಯದ ಪರಿಚಯುವುಂಟು' ಎಂದು ಹೇಳಿ ದನು. ವ॥ ಬಳಿಕ, ೬೯೨. ರಾಜನು ಬಾಹುಕನಿಗೆ ಕಲಿವೃಕ್ಷದ ಎಲೆಗಳ ಸಮೂಹವನ್ನು ನೋಡಿ ಎಷ್ಟೆಂದು ಲೆಕ್ಕಮಾಡಿ ಇದ್ದುದನ್ನು ಹೇಳಲು, ಆ ಬಾಹುಕನು ಆಶ್ಚರ್ಯ

ಟ್ವ ನವೀನಂ ನಿನ್ಗೊಳೀತಾಯ್ತಿದಱ ಹೃದಯವೇನೆಂದೆನಲ್ ಕೂರ್ಮೆಯಿಂದಾ
ಯ್ತೆನಗಕ್ಷದ್ಯೂತಕೇಳೀಹೃದಯದ ಫಲವೇದಂ ಮನಃಪ್ರೀತಿಯಿಂದಂ ೬೯೨

ನೀನಶ್ವಹೃದಯಮಂ ತಿಳಿ
ಪಾನಕ್ಷದ್ಯೂತಹೃದಯಮಂ ತಿಳಿಪುವೆನೆಂ
ದಾ ನೃಪತಿಯಕ್ಷಹೃದಯುವ
ನಾನಂದದಿನಿತ್ತು ತುರಗಹೃದಯವನಱಿದಂ ೬೯೩

ಆ ಕಲಿ ವೃಕ್ಷದ ಕೆರ್ಚಿಂ
ಶ್ರೀಕರವೆನಿಪಕ್ಷಯುಗಳವಂ ಮಾಡಿ ಧರಿ
ತ್ರೀಕಾಂತಂ ಪರಸಿತ್ತಂ
ಸ್ವೀಕರಿಸಿವನೆಂದು ಬಾಹುಕಂಗನುನಯದಿಂ ೬೯೪

ವ॥ ಆ ಸಮಯದೊಳ್

ಋತುಪರ್ಣನಱಿಯದಂದದಿ
ನತಿಭೀಕರಕಲಿ ನಿಜಸ್ವರೂಪದಿನೆಲೆ ಭೂ
ಪತಿಯಾಂ ನಿನ್ನ ಕಾಡಿದೆ
ನಿತರರ್ ಸೈರಿಪರೆ ಮದ್ವಿಘಾತಿಯನೆಂದಂ ೬೯೫

ಘಾತಕಕೋಟಿ ತನ್ನವಯವಂ ವಿತಥಾದಿ ಸಮಸ್ತದುರ್ಗುಣಂ
ಧಾತುಗಳೆಲ್ಲರಂ ಬಿಡದೆ ಪೀಡಿಸಿ ಕಾಡುವ ಮೂಢವೃತ್ತಿ ತ

ಗೊಂಡು "ಸಂಖ್ಯೆಯನ್ನು ಹೇಳುವ ಈ ಹೊಸ (ಕಲೆಯು) ನಿನಗೆ ಹೇಗೆ ಲಭಿಸಿತು ? ಇದರ ಅಂತರಂಗವೇನು ?" ಎನ್ನಲು, ಪ್ರೀತಿಯಿಂದ "ಪಗಡೆಯ ಜೂಜಾಟದ ರಹಸ್ಯದ ಫಲವದು" ಎಂದು ಮನಃಪೂರ್ವಕವಾಗಿ ತಿಳಿಸಿದನು. ೬೯೩. "ನೀನು ಅಶ್ವಹೃದಯದ (ರಹಸ್ಯವನ್ನು) ತಿಳಿಸು, ನಾನು ಪಗಡೆಯ ಜೂಜಿನ ಅಂತರಂಗವನ್ನು ತಿಳಿಸುವೆನು" ಎಂದು ನುಡಿದು, ಆ ರಾಜನು ಜೂಜಿನ ರಹಸ್ಯವನ್ನು ಆನಂದದಿಂದ ತಿಳಿಸಿ, (ತಾನು) ಅಶ್ವ ಹೃದಯವನ್ನು ಅರಿತನು. ೬೯೪. ಆ ಕಲಿವೃಕ್ಷದ ದಿಂಡಿನಿಂದ (ಚೇಗಿನಿಂದ) ಮಹಾ ರಾಜನು ಮಂಗಳಪ್ರದವಾದ ಎರಡು ದಾಳಗಳನ್ನು ಮಾಡಿ, ಇವುಗಳನ್ನು ಸ್ವೀಕರಿಸು ಎಂದು ಬಾಹುಕನಿಗೆ ಪ್ರೀತಿಯಿಂದ ಹರಸಿಕೊಟ್ಟನು. ವ॥ ಆ ಹೊತ್ತಿನಲ್ಲಿ, ೬೯೫. ಋತುಪರ್ಣನು ತಿಳಿಯದಂತೆ, ಅತ್ಯಂತ ಭಯಂಕರನಾದ ಕಲಿಪುರುಷನು ನಿಜ ಸ್ವರೂಪದಿಂದ (ನಳನಿಗೆ ತೋರಿಬಂದು) 'ಎಲೈ ಮಹಾರಾಜನೆ, ನಾನು ನಿನ್ನನ್ನು ಕಾಡಿದೆ, ನನ್ನ ಪೆಟ್ಟನ್ನು ಇತರರು ಸಹಿಸಿಕೊಳ್ಳಬಲ್ಲರೆ ?' ಎಂದನು. ೬೯೬. ಕೋಟಿ ಪಾತಕಗಳೇ ತನ್ನ ಅಂಗಗಳು, ಅಸತ್ಯವೇ ಮೊದಲಾದ ದುರ್ಗುಣಗಳು ಮೂಲಭೂತವಾದ ವಸ್ತು ಗಳು, ಎಲ್ಲರನ್ನೂ ತಪ್ಪದೆ ಪೀಡಿಸಿ ಕಾಡುವುದೇ ಮೂಢಸ್ವಭಾವ. ಈ ಎಲ್ಲವೂ ಚೇತನ

ಚ್ಚೇತನವಾಗಿ ಮೆಯ್ವಡೆದು ಲೋಕಭಯಂಕರಮೂರ್ತಿವೆತ್ತು ಧಾ
ತ್ರೀತಳನಾಥನಿಂ ಕಲಿ ತೊಲಂಗಿ ಸಮಗ್ಗದೊಳಿರ್ದನಾಕ್ಷಣಂ ೬೬

ನಿನ್ನಯ ಧೈರ್ಯಮಂ ಬಹಳ ಸತ್ತ್ವಮನೀತೆಱದಿಂ ವಿಭಾವಿಸ
ಲ್ಕಿನ್ನೆವರಂ ನಿಜಾಕೃತಿಯನಾವರಿಸಿರ್ದನಿದೊಂದು ದೋಷಮಂ
ಮನ್ನಿಸು ಪೂರ್ವರಾಜ್ಯಸುಖಸಿದ್ಧಿ ಮನೋರಮೆಯಂಗಸಂಗವ
ತ್ಯುನ್ನತಿವೊಂದುಗೆಂದು ನಳನಂ ಕಲಿ ನೆಟ್ಟನೆ ಬಿಟ್ಟನಾಕ್ಷಣಂ ೬೭

ವ॥ ಒಟಕಲ್ಲಿಂ ತೆರಳ್ದು

ದಿನಕರ ಸೋಮವೀಥಿಗಳಿನಂಬರಮಂ ಕಮನೀಯ ಭೋಗಿಜೀ
ವನದಿನದಬ್ಧಿಯಂ ವಿಪುಳಭಾಸುರವಾಸದಿನಿಂದ್ರಶೈಲಮಂ
ಘನತರಶೋಭೆಯಿಂ ಪಡೆದು ಪೋಲ್ತು ಜಗನ್ನುತಿವೆತ್ತ ಚೆಲ್ವ ಕುಂ
ಡಿನನಗರಕ್ಕೆ ಬಂದನನುರಾಗದಿನಾ ಋತುಪರ್ಣಭೂಭುಜಂ ೬೮

ಜನಿತ ಪುನಸ್ಸ್ವಯಂವರದ ವಾರ್ತೆಯನಾಗಳೆ ಕೇಳ್ದು ದೈವದಿಂ
ದೆನಗನುಕೂಲವಾಯ್ತೆನುತ ಬಾಹುಕಚೋದಕನಿಂ ಸಹಸ್ರಯೋ

ಸ್ವರೂಪವಾಗಿ ಮೈಗೊಂಡು ಲೋಕಭಯಂಕರವಾದ ರೂಪದಿಂದ ಕಲಿಪುರುಷನು ಮಹಾರಾಜನಿಂದ ದೂರ ತೆರಳಿ ಆ ಕ್ಷಣ ಪಕ್ಕದಲ್ಲಿದ್ದನು. ೬೭. ‘‘ನಿನ್ನ ಧೈರ್ಯವನ್ನೂ ಅಮಿತ ಸಾಮರ್ಥ್ಯವನ್ನೂ ಈ ರೀತಿಯಾಗಿ ಪರಿಶೀಲಿಸಲು ಈವರೆಗೆ ಸಹಜವಾದ ಸ್ವರೂಪದಿಂದ ಆವರಿಸಿಕೊಂಡಿದ್ದೆ. ಈ ಲೋಪವನ್ನು ಕ್ಷಮಿಸಬೇಕು. ಪೂರ್ವರಾಜ್ಯ ಸುಖಲಾಭವನ್ನೂ, ನಿನ್ನ ಪ್ರಿಯೆಯ ಸಮಾಗಮವನ್ನೂ, ಅತ್ಯುನ್ನತಿಯನ್ನೂ ಪಡೆಯುವಂತಾಗು’’ ಎಂದು ಹೇಳಿ ನಳನನ್ನು ಕಲಿಪುರುಷನು ಆ ಕೂಡಲೆ ಬಿಟ್ಟು (ತೆರಳಿದನು)⁝ ವ॥ ಅನಂತರ, ಅಲ್ಲಿಂದ ಹೊರಟು ೬೮. ಸೂರ್ಯಚಂದ್ರ ಬೀದಿಗಳಿಂದ ಆಕಾಶವನ್ನೂ ಮನೋಜ್ಞವಾದ ಸುಖಜೀವನದಿಂದ (ಇಲ್ಲಿ ‘ಜೀವನ’ ಎಂಬ ಶಬ್ದಕ್ಕೆ ‘ನೀರು’ ಎಂಬ ಅರ್ಥವನ್ನು ಅನ್ವಯಿಸಿಕೊಳ್ಳಬೇಕು,) ಅದು ಸಮುದ್ರವನ್ನೂ, ಅಪಾರವಾಗಿ ಪ್ರಕಾಶಿಸುವ ನಿಲಯಗಳಿಂದ ಇಂದ್ರಶೈಲವನ್ನೂ ಶ್ರೇಷ್ಠವಾದ ಕಾಂತಿಯಿಂದೊಡಗೂಡಿ ಹೋಲುತ್ತ, ಪ್ರಪಂಚದಲ್ಲಿಯೇ ಹೆಸರುವಾಸಿಯಾಗಿದ್ದ ಸುಂದರವಾದ ಕುಂಡಿನನಗರಕ್ಕೆ ಆ ಋತುಪರ್ಣಮಹಾರಾಜನು ಪ್ರೀತಿಯಿಂದ ಬಂದನು. ೬೯. ಜನಜನಿತವಾದ ಪುನಃಸ್ವಯಂವರದ ವರ್ತಮಾನವನ್ನು ಆಗಲೇ ಕೇಳಿ, ಸಾರಥಿಯಾದ ಬಾಹುಕನಿಂದ ದೈವವು ಇಂದು ನನಗೆ ಅನುಕೂಲವಾಯಿತು ಎಂಬುದಾಗಿ ಋತುಪರ್ಣನ ಮನೋರಥ

ಜನವನದೊದಿರುಳ್ ಪರಿದು ಬಂದುದು ಶೀಘ್ರತೆಯಿಂದೆ ಚೆಲ್ವ ಕುಂ
ಡಿನನಗರಾಲಯಕ್ಕೆ ಋತುಪರ್ಣನ ಪೊನ್ನರಥಂ ಮನೋರಥಂ ೬೯

ವ॥ ಆಗಳ್

ಆಕಸ್ಮಿಕಮೊರ್ವ ಧರಿ
ತ್ರೀಕಾಂತಂ ನಿನ್ನೆ ತನ್ನ ಪಟ್ಟಣದಿಂ ನಿ
ನ್ನಾಕಾಂಕ್ಷೆಯಿನಿಲ್ಲಿಗೆ ಚಿ
ಲ್ವಾಕೃತಿಯಿಂ ಬಂದನೊರ್ವ ಸಾರಥಿಸಹಿತಂ ೭೦೦

ವ॥ ಎಂದೊರ್ವ ಕೆಳದಿ ಪೇಟ್ದಳದಲ್ಲದೆಯುಂ

ಕೆನ್ನಂ ಸಹಸ್ರಯೋಜನ
ವೆನ್ನಂ ಸಾರಥಿಯದೆನ್ನವಶ್ವಂ ನೃಪನಿ
ನ್ನೆನ್ನಂ ರಥವೆನ್ನದೆನು
ತ್ತಂ ನಗರಜನೋಕ್ತಿ ಪರೆದುದೆಲ್ಲಾ ದೆಸೆಯೊಳ್ ೭೦೧

ರಯದಿಂ ಭೀಮಜೆಯ ಪುನ
ಸ್ಸ್ವಯಂವರಕ್ಕೆಂದು ಬಾಹುಕಂ ರಥಮಂ ವಿ
ಸ್ಮಯದಿಂ ಚೋದಿಸೆ ಕಾಂತಾ
ಪ್ರಿಯದಿಂ ಮತ್ಪುರವನೆಯ್ದಿದಂ ಋತುಪರ್ಣಂ ೭೦೨

ವ॥ ಅದಂ ದಮಯಂತಿ ಕೇಳ್ದು

ಬಿಡುದಾಣವನೀಯಲ್ ನೃಪ
ನೊಡನೆಯದಾರ್ ಬಂದರೆಂದು ನೋಡಲ್ ನಡವು

ದಾತಿದ್ದ ಹೊನ್ನಿನರಥವು ಒಂದುಸಾವಿರ ಯೋಜನವನ್ನು ಒಂದು ರಾತ್ರಿಯಲ್ಲಿಯೇ ಸವೆಸಿ, ಬಹಳ ವೇಗವಾಗಿ ಸುಂದರವಾದ ಕುಂಡಿನಪಟ್ಟಣದ ಆಲಯಕ್ಕೆ ಬಂದಿತು. ವ॥ ಆಗ, ೭೦೦. ಹಠಾತ್ತನೆ. ಒಬ್ಬ ಮಹಾರಾಜನು ನಿನ್ನೆ ತನ್ನ ಪಟ್ಟಣದಿಂದ ನಿನ್ನನ್ನೇ ಬಯಸಿ ಸ್ಫುರದ್ರೂಪವುಳ್ಳವನಾಗಿ ಒಬ್ಬ ಸಾರಥಿಯೊಂದಿಗೆ ಇಲ್ಲಿಗೆ ಬಂದನು. ವ॥ ಎಂಬುದಾಗಿ ಒಬ್ಬ ಗೆಳತಿ ಹೇಳಿದಳು. ಅಷ್ಟೇ ಅಲ್ಲದೆ, ೭೦೧. 'ಒಂದು ಸಾವಿರ ಯೋಜನವು ಅತಿಶಯವಾದುದಲ್ಲವೆ? (ಒಂದು ಸಾವಿರ ಯೋಜನವೇನು ಸಾಮಾನ್ಯವೆ?) ಸಾರಥಿ ಎಂಥವನು ? ಕುದುರೆಗಳು ಎಂಥವು ? ಇನ್ನು ಮಹಾರಾಜನು ಎಂಥವನು ? ರಥವೆಂಥದು?' ಎಂಬುದಾಗಿ ಊರಿನ ಜನರ ಮಾತು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿತು. ೭೦೨. ಭೀಮರಾಜನ ಮಗಳು ಪುನಃಸ್ವಯಂವರಕ್ಕೆಂದು ಬಾಹುಕನು ರಥವನ್ನು ಆಶ್ಚರ್ಯವಾಗುವಂತೆ ವೇಗವಾಗಿ ನಡೆಸಲು. ಋತುಪರ್ಣನು ಸ್ತ್ರೀಅಭಿಲಾಷೆಯಿಂದ ನಮ್ಮ ಊರಿಗೆ ಬಂದನು, ವ॥ ಅದನ್ನು ದಮಯಂತಿ ಕೇಳಿ, ೭೦೩. ತಂಗುವ ಸ್ಥಳವನ್ನು ಅಣಿ

ತ್ತಿಡೆಗೆಯ್ದೆಡೆಯುಂ ಕೇಳಲ್
ಪಡೆವಳನಂ ಕಳುಪಿದಳ್ ನಿತಂಬಿನಿ ಕಡುಪಿಂ ೭೦೩

ವ॥ ಅದೆಲ್ಲವಂ ಮಾಡಿ ಪಡೆವಳಂ ಮಗುಟ್ದು ಬಂದು
ನಿನ್ನೆ ಪೊಱಮಟ್ಟಯೋಧ್ಯಿಯಿಂ
ನಿನ್ನೆವರಂ ಬಂದೆವಿಲ್ಲಿಗೆಡೆಗೆಯ್ಯದೆಯುಂ
ದೆನ್ನಂ ನೋಡಿಯುಸುರ್ದಂ
ಮುನ್ನಾಂ ಕಂಡಂದವಲ್ಲದತಿವಿದ್ರೂಪಂ ೭೦೪

ವ॥ ಅದಲ್ಲದೆಯುಂ
ಶುಭತರ ಪುನಸ್ಸ್ವಯಂವರ
ವಿಭವ ಮುಹೂರ್ತಕ್ಕೆ ನಾಳೆ ಬರ್ಪುದು ಬೇಗಂ
ಪ್ರಭುಗಳೆನಲ್ ಮಱುದಿವಸಂ
ರಭಸದಿನೆಯ್ತಂದನೊಲ್ದು ಋತುಪರ್ಣನೃಪಂ ೭೦೫

ವ॥ ಎಂದು ಪೇೞಲನಂತರಂ
ವಿಕಸಿತ ಪದ್ಮನೇತ್ರೆ ದಮಯಂತಿ ಸಮಂತು ಬೞಲ್ದು ಬಂದ ಬಾ
ಹುಕ ಋತುಪರ್ಣರೆಂಬವರ್ಗೆ ಭೋಜನವೀಕ್ಷಣವಾಗಲೆಂದು ಮುಂ
ಸಕಲ ಪದಾರ್ಥಮಂ ಶಿಖಿಜಲಂ ಪೊಱಗಾಗಿ ಲಸದ್ವಿಳಾಸಿನೀ
ನಿಕರದೆ ಕಯ್ಯೊಳಟ್ಟಿದಳದೇಂ ಮತಿವಂತೆಯೊ ದೀರ್ಘದರ್ಶಿಯೋ ೭೦೬

ಮಾಡಲು ರಾಜನೊಡನೆ ಯಾರು ಬಂದಿರುವರೆಂದು ನೋಡುವ ಸಲುವಾಗಿ ತೆರಳಿ, ಸ್ಥಳವನ್ನು ಏರ್ಪಡಿಸಿ, ಕೇಳಿಕೊಂಡು ಬರಲೆಂದು ತರುಣಿ ಉತ್ಸಾಹದಿಂದ ಸೇನಾಧಿಪತಿಯನ್ನು ಕಳುಹಿಸಿದರು. ವ॥ ಅದೆಲ್ಲವನ್ನೂ ವ್ಯವಸ್ಥೆಮಾಡಿ, ಸೇನಾಧಿಪತಿ ಹಿಂತಿರುಗಿಬಂದು, ೭೦೪. 'ಅಯೋಧ್ಯೆಯಿಂದ ನಿನ್ನೆ ಹೊರಟು, ಎಡೆವಿಡದೆ ಈವರೆಗೆ ಇಲ್ಲಿಗೆ ಬಂದೆವು" ಎಂದು ನನ್ನನ್ನು ನೋಡಿ ಹೇಳಿದನು. ಈ ಮೊದಲು ಅಂತಹ ಅತಿ ವಿಕಾರಸ್ವರೂಪವನ್ನು ನಾನು ಕಂಡಂತಿಲ್ಲ. (ಈ ಮೊದಲು ನಾನು ಕಾಣದಂತಹ ಅತಿ ವಿಕಾರಸ್ವರೂಪವದು.) ವ॥ ಅಷ್ಟೇ ಅಲ್ಲದೆ, ೭೦೫. ಮಂಗಳಪ್ರದವಾದ ಪುನಃ ಸ್ವಯಂವರದ ವೈಭವಮೂಹೂರ್ತಕ್ಕೆ ಪ್ರಭುಗಳು ನಾಳೆ ಬೇಗಬರತಕ್ಕುದೆಂಬುದಾಗಿ ಹೇಳಲು, ಮಾರನೆಯದಿನ ಋತುಪರ್ಣನು ಒಲಿದು ತ್ವರೆಯಿಂದ ಬಂದನು. ವ॥ ಎಂದು ಹೇಳಲು, ಆ ಬಳಿಕ, ೭೦೬. ಅರಳಿದ ಕಮಲಾಕ್ಷಿಯಾದ ದಮಯಂತಿ, ಚೆನ್ನಾಗಿ ಬಳಲಿ ಬಂದ ಬಾಹುಕ ಋತುಪರ್ಣರೆಂಬವರಿಗೆ ಈ ಕೂಡಲೆ ಊಟವು ಅಣಿಯಾಗಲೆಂದು, ಮೊದಲು ಬೆಂಕಿ ಮತ್ತು ನೀರುಗಳನ್ನು ಹೊರತು, ಎಲ್ಲ ಪದಾರ್ಥಗಳನ್ನೂ ಶೋಭಿಸುವ ವಿಲಾಸಿನಿಯರ ಸಮೂಹದ ಕೈಯಲ್ಲಿ ಅಟ್ಟಿದಳು. (ಆಕೆ) ಅದೇನು ಬುದ್ಧಿವಂತಳೋ,

ಅಡುಗೆಯುನೆಸಗುವತನವಂ
ಮಡಕೆಗಳಂ ತೊಳೆವನಾವ ನೀರಿಂ ಕಿಚ್ಚಾ
ವೆಡೆಯಿಂ ಬಂದಪ್ಪುದೆಂಬುದ
ನಡಗಿರ್ದಱಿಯೆಂದದೊರ್ವಳಂ ನಿಯಮಿಸಿದಳ್ ೨೦೭

ವ॥ ಅಂತು ಕಳಿಪ[ಲ]ವಳದೆಲ್ಲವಂ ನೋಡಿವಂದು

ಯುವತೀ ಕೇಳ್ ಪೊಸತಂ ವಿಭಾವನೆ ಪದಂ ಬಂಧಂ ರಸಂ ರೀತಿ ಪಾ
ಕವಿಶೇಷಂ ನಯಮಾರ್ದವಂ ವಿಧುಲಸದ್ವರ್ಣಂ ಕ್ರಿಯಾಕೌಶಲಾ
ದಿವಿವೇಕಂ ಪುದಿದಿರ್ಪ ವಿಸ್ಮಯವನೀಗಳ್ ಕಂಡೆನಾಂ ಭಾವಿಸಲ್
ಕವಿತಾಪ್ರೌಢಿಯೊ ಪಾಕರೂಢಿಯೊ ದಿಟಂ ಪೇಟ್ವೆಂದೆನಾನಂದದಿಂ ೨೦೮

ವ॥ ಅದೆಂತೆನೆ

ಬೆಸಳಿಗೆಯೊಳ್ ತರಂಬಡೆಯೆ ಶಾಕಚಯಂಗಳನಿಕ್ಕಿ ಸೈಂಧವಂ
ಪೊಸಮೆಣಸಿಂಗು ಜೀರಗೆ ಪದಂಬಡೆಯಲ್ ತಳಿದೆಲ್ಲವಂ ನಿರೀ
ಕ್ಷಿಸಲಮೃತೋಪಮಾನ ನಳಪಾಕಮಪಾಕಮವಾಗಿಯಾ ಮಹಾ
ನಸಡೊಳಗನ್ನಮಾಯ್ತು ಶಿಖಿವಾರಿಯಂ ಪೊರ್ದುಗೆ ಪೊರ್ದದಾಕ್ಷಣಂ ೨೦೯

ವಾರೀಂಧನ ಶಿಖಿಯೆಂಬವ
ನಾರಾರುಂ ಕಂಡರಿಲ್ಲ ಸಕಲ ಪದಾರ್ಥಾ

ದೂರದೃಷ್ಟಿಯುಳ್ಳವಳೋ ! ೨೦೭. ಅಡುಗೆಯನ್ನು ಮಾಡುವಿಕೆಯನ್ನೂ (ಮಾಡುವವನು ?) ಮಡಕೆಗಳನ್ನು ಯಾವ ನೀರಿನಿಂದ ತೊಳೆಯುವನು, ಯಾವೆಡೆಯಿಂದ ಬೆಂಕಿ ಬರುವುದು ಎನ್ನುವುದನ್ನು ಬಚ್ಚಿಟ್ಟುಕೊಂಡು ತಿಳಿಯೆಂದು ಅವಳು ಒಬ್ಬಳನ್ನು ನೇಮಿಸಿದಳು. ವ॥ ಹಾಗೆ ಕಳುಹಿಸಲು, ಅವಳು ಅದೆಲ್ಲವನ್ನೂ ನೋಡಿ ಬಂದು, ೨೦೮. ಎಲೈ ತರುಣಿಯೇ ಕೇಳು, ಹೊಸತಾದ ಭಾವ, ಪದ, ಬಂಧ, ರಸ, ರೀತಿ, ಪಾಕ ವಿಶೇಷ, ಮೃದುತ್ವ, ಚಂದ್ರನಂತೆ ಪ್ರಭೆಯುಳ್ಳ ವರ್ಣ, ಕ್ರಿಯಾಕೌಶಲಗಳೇ ಮೊದಲಾದ ವಿವೇಕಯುತವಾದ ಆಶ್ಚರ್ಯವನ್ನು ನಾನು ಈಗ ಕಂಡೆನು. ವಿಚಾರಿಸಿ ನೋಡಲು, ಇದು ಕಾವ್ಯರಚನೆಯ ಕೌಶಲವೋ, ಅಡಿಗೆ ಮಾಡುವ ಕ್ರಮವೋ (ಹೇಳತೀರದು). ಸತ್ಯವನ್ನು ಹೇಳಲೇದು ಸಂತೋಷದಿಂದ ಬಂದೆನು, ವ॥ ಅದು ಹೇಗೆಂದರೆ, ೨೦೯. ಪಾತ್ರೆಯಲ್ಲಿ ಅಣಿಯಾಗಿ ತರಕಾರಿಗಳನ್ನಿಟ್ಟು, ಉಪ್ಪು, ಹೊಸ ಮೆಣಸು, ಇಂಗು, ಜೀರಿಗೆ ಮೊದಲಾದವು ಹದವಾಗುವಂತೆ ಹರಡಿ, ಎಲ್ಲವನ್ನೂ (ಕಣ್ಣಿಂದ) ನೋಡಲು ಬೇಯಿಸದೆ ಅವು ನಳಪಾಕವಾಗಿ ಪರಿಣಮಿಸಿತು ; ಬೆಂಕಿ ನೀರುಗಳ ಸೋಂಕಿಲ್ಲದೆ ಆ ಕೂಡಲೆ ದೊಡ್ಡಪಾತ್ರೆಯಲ್ಲಿ ಅನ್ನವೂ ಸಿದ್ಧವಾಯಿತು. ೨೧೦. ನೀರು, ಕಟ್ಟಿಗೆ, ಬೆಂಕಿ ಎಂಬವುಗಳನ್ನು ಯಾರೂ ನೋಡಿದವರಿಲ್ಲ. ಬಾಹುಕನು ಅಡುಗೆ ಮಾಡತೊಡಗಲು

ಕಾರಂ ಬಾಹುಕನಾಗಿಸ
ಲೋರಣದಿಂ ಪಾಕವಾದವತಿಶೀಘ್ರತೆಯಿಂ ೭೧೦

ಋತುಪರ್ಣಂ ಪಸಿದನೆನು
ತ್ತತಿಶೀಘ್ರದಿನೊಲ್ದು ಮಾಡಿದಂ ಪೆಱದಾ
ಯತವಾಗಲ್ ನಳಪಾಕವ
ನಿತರರ್ ಶಿಖಿವಾರಿಯಿಲ್ಲದಿಂತೆಸಗುವರೇ ೭೧೧

ವ॥ ಎಂದು ಪೇಟಲ್ಕಿವೆಲ್ಲಮಂ ತರಲ್ ಕಳಿಪೆ

ನಿನ್ನಯ ಹಸ್ತಕೌಶಲವನೀಕ್ಷಿಪಳಾ ದಮಯಂತಿ ಶಾಕಪಾ
ಕಾನ್ನವನೀವುದೆಂದೆಸೆವ ಬಾಹುಕನಿಂದವನೀಸಿಕೊಂಡು ತ
ತ್ಸನ್ನಿಧಿಗೆಯ್ದಿ ತೋಱಿಸಲದೊರ್ವ ವಿದಗ್ಧೆ ತದೀಯ ದಿವ್ಯಗಂ
ಧಂ ನೆಲಸಿತ್ತು ನಾಲ್ದಸೆಯೊಳೇನೊ[ಪೆ]ಗಟ್ವೆಂ ನಳಶಾಕಪಾಕಮಂ ೭೧೨

ಆ ಪಾಕವಿಶೇಷಂ ನಳ
ಭೂಪತಿಯಿಂದಾದುದಲ್ಲದಿತರರೊಳಿಲ್ಲೆಂ
ದಾ ಪದ್ಮನೇತ್ರೆ ಹೃತ್ಪರಿ
ತಾಪವನಿಱಿಕೆಯಬ್ದು ಪುತ್ರರಂ ಕರೆಯೆಂದಳ್ ೭೧೩

ನಳನೃಪತಿಯ ತದ್ರೂಪಂ
ತಳೆದಿರ್ದರ್ಸುತರನೊಲ್ದು ದಾದಿಯಱ ಬೆನ್ನೊಳ್

ಸಮಸ್ತ ಪದಾರ್ಥಗಳ ಸ್ವರೂಪವು ಅಚ್ಚುಕಟ್ಟಾಗಿ ಅತ್ಯಂತ ತ್ವರೆಯಿಂದ ಪರಿಪಕ್ವವಾದವು. ೭೧೧. ಋತುಪರ್ಣನು ಹಸಿದಿರುವನೆಂದು, ಅಗ್ಗಳಿಕೆಗೆ ತಕ್ಕಂತೆ ನಳಪಾಕವನ್ನು ಅತ್ಯಂತ ತ್ವರೆಯಿಂದ ಒಲಿದು ಸಿದ್ಧಪಡಿಸಿದನು. ಬೆಂಕಿ ನೀರುಗಳಿಲ್ಲದೆ ಇತರರು ಹೀಗೆ ಮಾಡಬಲ್ಲರೆ ? ವ॥ ಎಂದು ಹೇಳಲು, ಇವೆಲ್ಲವನ್ನೂ ತರಿಸಲು ಕಳುಹಿಸಲು, ೭೧೨. ನಿನ್ನ ಕೈಯ ಕೌಶಲವನ್ನು ಆ ದಮಯಂತಿ ನೋಡಬಯಸುವಳು. ತರಕಾರಿ, ಅನ್ನಗಳ ಅಡುಗೆಯನ್ನು ಕೊಡು ಎಂದು ತೋರಿಬಂದ ಬಾಹುಕನಿಂದ ಕೇಳಿ ಪಡೆದು ಕೊಂಡು, ಆಕೆಯ ಬಳಿಗೆ ಬಂದು, ಒಬ್ಬ ನಿಪುಣೆ ತೋರಿಸಲು, ಅದರ ಸುವಾಸನೆ ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿತ್ತು, ನಳಶಾಕಪಾಕವನ್ನು ಎಷ್ಟೆಂದು ಹೊಗಳಲಿ ! ೭೧೩. ಆ ವಿಶೇಷ ತೆರನಾದ ಅಡುಗೆಯು ನಳಮಹಾರಾಜನಿಂದ ಹೊರತು ಇತರರಿಂದ ಆಗದೆಂದು ಆ ಕಮಲಾಕ್ಷಿಯಾದ ದಮಯಂತಿ ತನ್ನ ಹೃದಯದ ಸಂಕಟವನ್ನು ಅದುಮಿಟ್ಟು, ಮಕ್ಕಳನ್ನು ಕರೆದುಕೊಂಡು ಬನ್ನಿ ಎಂದಳು. ೭೧೪. ತಾನಾಗಿಯೇ ಉಂಟಾಗುವ ಪುತ್ರವ್ಯಾಮೋಹದ ಸ್ಥಿತಿಯನ್ನು ತಿಳಿಯುವ ಸಲುವಾಗಿ ನಳಮಹಾರಾಜನ

ಕಳುಪಿದಳಲ್ಲಿಗೆ ಮಾನಿನಿ
ತಿಳಿವಂದದಿನಾತ್ಮಜಾತವೋಪಸ್ಥಿತಿಯಂ ೭೧೪

ವ॥ ಅಂತು ಕಳುಪಲ್

ಕನ್ನಡಿಯೊಳ್ ತನ್ನಯ ರೂ
ಪಂ ನೋಳ್ಪವೊಲಾತ್ಮಜಾತರಿರ್ವರನತ್ಯು
ತ್ಪನ್ನಮತಿ ಕಾಣ್ಬುದುಂ ಹ
ರ್ಷೋನ್ನತಿಯಿಂ ಮುಖವಿಕಾಸವಾದತ್ತಾಗಳ್ ೭೧೫

ಲೋಚನದೊಳ್ ಮುದಶ್ರು ತಲೆದೋಱೆ ಮನೋಮುದವಂ ಮುಖಾಂಬುಜಂ
ಸೂಚಿಸೆ ದೋರ್ಯುಗಂ ಸ್ಫುರಿಸೆ ತನ್ನಪರಾಧದಳುರ್ಕೆ ಚಿತ್ತಮಂ
ನಾಚಿಸೆ ಪೂರ್ವ ದುಸ್ಸ್ಥಿತಿ ನಿಜಾಂಗಮಲೀಮಸವೃತ್ತಿಯೊಯ್ದು ಸಂ
ಕೋಚಿಸೆ ನೋಡಿದಂ ನೃಪಕುಮಾರರನುತ್ಸವದಿಂದ ಬಾಹುಕಂ ೭೧೬

ವ॥ ಅಂತು ನೋಡಿ

ಅತಿಶಯ ಸೌಖ್ಯಮನಿಹದೊಳ್
ಗತಿಯುಂ ಪರಲೋಕದೊಳ್ ಸಮಂತೀವ ಮಹೋ
ನ್ನತಕುಲಸಂಭವರೆನಿಸುವ
ಸುತರನಗಲ್ದೆಂತು ನಿಲ್ವರೋ ಕಲ್ಲೆರ್ದೆಗಳ್ ೭೧೭

ಸ್ವರೂಪವನ್ನೇ ಪಡೆದಿದ್ದ ಇಬ್ಬರು ಪುತ್ರರನ್ನು (ಆ) ಹೆಂಗಸು (ದಮಯಂತಿ)ದಾದಿಯ ಬೆಂಗಾವಲಿನಲ್ಲಿ ಅಲ್ಲಿಗೆ ಕಳುಹಿಸಿದಳು. ವ॥ ಹಾಗೆ ಕಳುಹಿಸಲು, ೭೧೫. ಕನ್ನಡಿಯಲ್ಲಿ ತನ್ನ ಸ್ವರೂಪವನ್ನು ಕಂಡಂತೆ, ತನ್ನ ಇಬ್ಬರು ಮಕ್ಕಳನ್ನು ಸಮಯೋಚಿತವಾದ ಬುದ್ಧಿಯುಳ್ಳ ಆತನು ಕಾಣಲು, ಸಂತೋಷಾಧಿಕ್ಯದಿಂದ ಆಗ ಮುಖವು ಅರಳಿತ್ತು. ೭೧೬. ಕಣ್ಣಿನಲ್ಲಿ ಆನಂದಬಾಷ್ಪ ತಲೆದೋರಲು, ಮುಖಪದ್ಮವು ಮನಸ್ಸಂತೋಷವನ್ನು ಸೂಚಿಸಲು, ಎರಡು ತೋಳುಗಳೂ ಅದುರಲು, ತಾನು ಮಾಡಿದ ತಪ್ಪಿನ ಅಳುಕು ಮನಸ್ಸನ್ನು ನಾಚಿಕೆಗೆ ಈಡುಮಾಡಲು, ಪೂರ್ವದ ದುರ್ಗತಿಯೂ, (?) ತನ್ನ ಶಾರೀರಕ ಮಾಲಿನ್ಯವೃತ್ತಿಯೂ ಸಂಪೂರ್ಣವಾಗಿ ಸಂಕೋಚವನ್ನುಂಟುಮಾಡಲು, ಬಾಹುಕನು ರಾಜಕುಮಾರರನ್ನು ಉತ್ಸಾಹದಿಂದ ನೋಡಿದನು. ವ॥ ಹಾಗೆ ನೋಡಿ, ೭೧೭. ಈ ಲೋಕದಲ್ಲಿ ಅಪಾರವಾದ ಸೌಖ್ಯವನ್ನೂ, ಪರಲೋಕದಲ್ಲಿ ಸದ್ಗತಿಯನ್ನೂ ಚೆನ್ನಾಗಿ ನೀಡುವ ಶ್ರೇಷ್ಠ ಕುಲಜಾತರೆನ್ನಿಸುವ ಪುತ್ರರನ್ನು ಅಗಲಿ ಕಲ್ಲೆದೆಯುಳ್ಳವರು ಹೇಗೆ ಉಳಿದಿರುವರೋ

ವ|| ಎಂದು ಮಗುೞ್ದುಸುರದಿರಲ್ ಕುಮಾರಕರ್ವೆರಸು ದಾದಿ ಬಂದು

ಕಂಡಱಿವಂತೆ ಮುನ್ನಱಿವರುಂ ನಲಿದೀಕ್ಷಿಸುವಂತೆ ಕಣ್ಣನೀರ್
ಮಂಡಲಿಪಂತೆ ತನ್ನ ಸುತರಂ ನೆನೆವಂತೆ ನೊಸಲ್ ನೊಸಲ್ಗಳೊಳ್
ಮುಂಡಿಡುವಂತೆ ನುಣ್ದೊಡೆಯನೇಱಿಸುವಂತಮರ್ದಪ್ಪುವಂತೆ ಮೆ
ಯ್ಯಂ ಘಗೆ ಪತ್ತಿದಂತಡರೆ ನೋಡಿದನಿರ್ವರನಾತನಟ್ಟಿಯಿಂ ೭೧೮

ವ|| ಅನಂತರಂ

ಈ ತೆಱದ ಕುಮಾರರ ಸಂ
ಪ್ರೀತಿಯನುೞಿದಿರ್ಪನಾವ ಕಲ್ಲೆರ್ದೆಯೋ ಎಂ
ದಾತಂ ಸುಯ್ಯನೆಸುಯ್ದಂ
ಮಾತಂ ಮತ್ತೇನನಾಡದಿರಲಾಂ ಬಂದೆಂ ೭೧೯

ವ|| ಎಂದು ದಾದಿ ಪೇೞ್ವುದುಂ

ಎನಗಾಯ್ತಿಂದುಮಭೀಷ್ಟದೈವದವರಂ ಹೃತ್ಸಂಶಯಂ ಪಿಂಗಿದ
ತ್ತನುಕೂಲಗ್ರಹವೊಂದುಗೂಡಿದುವೆನುತ್ತುತ್ಸಾಹದಿಂ ಸಂತತಂ
ಮನದೊಳ್ ಬಲ್ಗಡಿಗಟ್ಟಿ ತನ್ನ ಪತಿಯಂ ನಿಶ್ಚೈಸಿ ತದ್ಭೀಮನಂ
ದನೆ ಪೊಂಪಿಂದೆ ಬೞಿಕ್ಕಲಂಕರಿಸಿದಳ್ ಸ್ವರ್ಣಪ್ರಭಾಪೀಠಮಂ ೭೨೦

ವ|| ಎಂದು ಪುನಃ ಮಾತಾಡದಿರಲು, ಬಾಲಕರೊಡನೆ ದಾದಿ ಹಿಂತಿರುಗಿ ಬಂದು, ೭೧೮. ಈ ಮೊದಲು ಬಲ್ಲವರನ್ನು ನೋಡಿ ತಿಳಿಯುವಂತೆ, ಸಂತೋಷಪಟ್ಟು ನೋಡುವಂತೆ, ಕಣ್ಣೀರು ಸುತ್ತುಗಟ್ಟುವಂತೆ, ತನ್ನ ಮಕ್ಕಳನ್ನು ನೆನೆಯುವಂತೆ, ಹಣೆ ಹಣೆಯಲ್ಲಿಟ್ಟು ಮುದ್ದಾಡುವಂತೆ, ಮೃದುವಾದ ತೊಡೆಗಳ ಮೇಲೆ ಹತ್ತಿಸಿಕೊಳ್ಳುವಂತೆ, ಬಲವಾಗಿ ತಬ್ಬಿಕೊಳ್ಳುವಂತೆ, ಮೆಯ್ಯನ್ನು ಬೇಗೆ ಹತ್ತಿದಂತೆ ಆವರಿಸಿರಲು, ಆತನು ಇಬ್ಬರನ್ನೂ ಪ್ರೀತಿಯಿಂದ ನೋಡಿದನು. ವ|| ಆ ಬಳಿಕ, ೭೧೯. ಈ ಬಗೆಯಾದ ಕುಮಾರರ ಒಲವನ್ನು ತೊರೆದಿರುವವನು ಅದೆಂತಹ ಕಲ್ಲೆದೆಯುಳ್ಳವನೋ ಎಂಬುದಾಗಿ ಆತನು ಸುಯ್ಯನೆ ನಿಟ್ಟುಸಿರನ್ನು ಬಿಟ್ಟನು. ಪುನಃ ಯಾವ ಮಾತನ್ನೂ ಆಡದಿರಲು ನಾನು ಬಂದೆನು. ವ|| ಎಂದು ದಾದಿ ಹೇಳಲು, ೭೨೦. 'ಇಂದು ನನ್ನ ಇಷ್ಟದೇವತೆಯ ವರವು ನನಗೆ ಒದಗಿಬಂದಿತು. ನನ್ನ ಎದೆಯ ಸಂದೇಹ ನಿವಾರಣೆಯಾಯಿತು. ಅನುಕೂಲವಾದ ಗ್ರಹಗಳು ಒಂದಾಗಿ ಸೇರಿದುವು' ಎನ್ನುತ್ತ ಆ ಭೀಮರಾಜನ ಕುಮಾರಿ (ದಮಯಂತಿ) ಉತ್ಸಾಹದಿಂದ ಸರ್ವದಾ ಮನಸ್ಸಿನಲ್ಲಿ ಹಿರಿ ಹಿರಿ ಹಿಗ್ಗಿ ತನ್ನ ಗಂಡನೆಂಬುದನ್ನು ನಿಶ್ಚಯಿಸಿ, ಆ ಬಳಿಕ, ಚಿನ್ನದ ಕಾಂತಿಯಿಂದ ಶೋಭಿಸುತ್ತಿದ್ದ

ಕಾಣಲ್ವೇಟ್ಪುದು ತನ್ನನೆನ್ನ ಮನದಿಷ್ಟಂ ಶಾಕಪಾಕಂ ಮದು
ಪ್ರಾಣಂಬೆತ್ತುದು ಮದ್ಗೃಹಕ್ಕೆ ಭರದಿಂದೆಟ್ಟುಪ್ಪುದೇದಾಕೆ ಗೀ
ರ್ವಾಣಸ್ತ್ರೀಸಮ ವಾರನಾರಿಯರನಾತಂಗಟ್ಟಿದಳ್ ಸಂತತಂ
ಕ್ಷೋಣೀಪ್ರಸ್ತುತರೂಪವಂತೆ ದಮಯಂತೀಕಾಂತೆ ಸಂತೋಷದಿಂ ೭೨೧

ತೆಱಪಱಿದಾ ಋತುಪರ್ಣಂ
ಗಱಿಪದೆ ವಾರಾಂಗನಾನಿವೇದಿತನಾಗಲ್(ಳ್?)
ಪೊಱಮಟ್ಟು ಬಂದನೆಲ್ಲ
ರ್ಚೆಱಗಾಗಲ್ ಸತಿಯಮನೆಗೆ ಬಾಹುಕನೊಲವಿಂ ೭೨೨

ಮುಸಕಂಗುಂದಿದ ನೋಟವಿರ್ಪಱಿದ ವಸ್ತ್ರಂ ಶೀರ್ಣಕೇಶಂ ಮಲೀ
ಮಸದೇಹಂ ಕಿಱುಗಂಟುಗಟ್ಟಿದ ಬೆರಲ್ ಕೊಂಕಿರ್ದ ಕರ್ಣದ್ವಯಂ
ಕುಸಿದುರ್ಬಿರ್ದ ಪೆಗಲ್ ಪಿಸುಳ್ದ ಚರಣಂ ಸಂಭಿನ್ನ ಪಾರ್ಷ್ಣಿಸ್ಥಳಂ
ವಸುಧಾಧೀಶನೊಳೊಂದಿರಲ್ ಸುದತಿ ಕಂಡಳ್ ಬಾಷ್ಪನೇತ್ರಂಗಳಿಂ ೭೨೩

ಹರನ ಲಲಾಟಲೋಚನದ ಕರ್ಬೊಗೆ ಪರ್ಬಿದ ಶಂಬರಾರಿಯೋ
ಸುರರಮೃತಾಬ್ಧಿಯಂ ಮಥಿಸಲೆರ್ದ ವಿಷಾರ್ಚಿಯನಾಂತ ರುದ್ರನೋ

ಆಸನವನ್ನು ಹೆಮ್ಮೆಯಿಂದ ಅಲಂಕರಿಸಿದಳು. ೭೨೧. 'ತನ್ನನ್ನು ನೋಡುವಂತೆ ಹೇಳುವುದು. ಅದು ನನ್ನ ಮನೋಭಿಲಾಷೆ. ತರಕಾರಿಯ ಅಡುಗೆ ತನಗೆ ಪ್ರಾಣವನ್ನಿತ್ತುದು, ನನ್ನ ಮನೆಗೆ ಬೇಗನೆ ಬರತಕ್ಕುದು' ಎಂದು ಸದಾ ಭೂಲೋಕಸ್ತುತಿಗೆ ತಕ್ಕ ರೂಪವತಿಯಾದ ದಮಯಂತೀಕಾಂತೆ ಸಂತೋಷದಿಂದ ಅಪ್ಸರೆಯರಂತಿದ್ದ ವಾರಾಂಗನೆಯರನ್ನು ಆತನ ಬಳಿಗೆ ಕಳುಹಿಸಿದಳು. ೭೨೨. ವಾರಾಂಗನೆಯರಿಂದ ವಿಷಯ ಪರಿತ ಬಾಹುಕನು ಆಗ ಸಮಯ ನೋಡಿ, ಋತುಪರ್ಣನಿಗೆ ತಿಳಿಸದೆ ಹೊರಟು, ಎಲ್ಲರೂ ಆಶ್ಚರ್ಯಚಕಿತರಾಗುವಂತೆ ಸ್ತ್ರೀಯ ಮನೆಗೆ ಬಂದನು. ೭೨೩. ಉತ್ಸಾಹ ಗುಂದಿದ ನೋಟ, ಶಿಥಿಲವಾದ ಬಟ್ಟೆ, ಛಿದ್ರವಾದ ಕೂದಲು, ಮಾಸಿದ ಶರೀರ, ಚಿಕ್ಕದಾಗಿ ಗಂಟುಗಟ್ಟಿದ ಬೆರಳು, ಸುರುಟಿದ್ದ ಎರಡು ಕಿವಿಗಳು, ಕುಗ್ಗಿ ಉಬ್ಬಿದ ಹೆಗಲು, ಕಿಸುಗಾಲು, ಬಿರಿದ ಹಿಮ್ಮಡಿಗಳು ಮಹಾರಾಜನಿಗೆ ಪ್ರಾಪ್ತವಾಗಿರಲು ನೀರು ತುಂಬಿದ ಕಣ್ಣುಗಳಿಂದ ಆ ತರುಣಿ ನೋಡಿದಳು. ೭೨೪. ಈಶ್ವರನ ಹಣೆಗಣ್ಣಿನ ಕಪ್ಪಾದ ಹೊಗೆ ಹಬ್ಬಿದ ಪ್ರದ್ಯುಮ್ನನೋ, (ಶಿವಭಕ್ತನಾದ ಶಂಬರಾಸುರನ ಪರವಾಗಿ ಈಶ್ವರ ಯುದ್ಧದಲ್ಲಿ ಭಾಗವಹಿಸಿ ಪ್ರದ್ಯುಮ್ನನೊಂದಿಗೆ ಹೋರಾಡುವ ಸಂದರ್ಭ) ದೇವತೆಗಳು ಕ್ಷೀರಸಮುದ್ರವನ್ನು ಕಡೆಯುಲು ಮೇಲೆದ್ದ ವಿಷಾಗ್ನಿಯ ಜ್ವಾಲೆಗಳನ್ನು ತಾಳಿದ ರುದ್ರನೋ, ಯಮನೊಂದಿಗೆ ಯುದ್ಧ ಹೂಡಿ ಮುಷ್ಟಿಯ ಪೆಟ್ಟನ್ನು ತಿಂದ

ತರಣಿತನೂಜನೊಳ್ ಪೊಣರ್ದು ಮುಷ್ಟಿಯ ಘಟ್ಟಣೆಯಾಂತ ಕೃಷ್ಣನೋ
ಪರಿಕಿಪನಾವನಾರ್ತು ಕಲಿ ಪೊರ್ದಿದ ನೈಷಧಚಕ್ರವರ್ತಿಯಂ ೭೨೪

ಬಾಹುಕನೆಂಬುದ ತೋಜದೆ
ಮೋಹರಸಂ ಮೇರೆದಪ್ಪಿ ಪರಿವುತ್ತಿರಲಿ
ನ್ನೇ ಹರಿಯಲ್ ನಟಿಸುವೆ ನೃಪ
ಸಾಹಸವಂ ಬಿಟ್ಟು ಮುಳಿಯದುಬಿಹುವುದೆನ್ನಂ ೭೨೫

ವ॥ ಎಂಬುದುಂ

ಫಣಿಪತಿಯಿತ್ತಂಬರಮಂ
ಕ್ಷಣದಿಂ ತೆಗೆದುಟ್ಟು ಪೊದ್ದು ಕುಳ್ಳಿರ್ದ ನೃಪಾ
ಗ್ರಣಿ ಮುದದಿಂ ಪೋಲ್ತಂ ಮೂ
ಡಣಗಿರಿಯೊಳ್ ಮೂಡುವುದಯಕಾಲದ ರವಿಯಂ ೭೨೬

ಮೋಡವ ಗೆಲ್ದ ಚಂಡಕರನಂತುಪರಾಗವಗಲ್ದು ಕಾಂತಿಯಿಂ
ಮೂಡಿದ ಚಂದ್ರನಂತೆ ಹಿಮಕಾಲವಗಲ್ದ ವಸಂತನಂತೆ ಹೃ
ತ್ಪೀಡೆಯುಗಲ್ದ ಯೋಗಿವರನಂತೆ ವಿರೂಪವಗಲ್ದು ಕೂರ್ಮೆ ಕೈ
ಗೂಡಿ ಮನೋಹರಾಕೃತಿಯೊಳಿರ್ದನತಿದ್ಯುತಿಯಿಂದಿಳಾಧಿಪಂ ೭೨೭

ಕೃಷ್ಣನೋ (ಶ್ರೀಕೃಷ್ಣನು ತನ್ನ ಗುರುಗಳಾದ ಸಾಂದೀಪಿನೀಮುನಿಗಳ ಮಗನನ್ನು ಕರೆತರಲು ಯಮಲೋಕಕ್ಕೆ ತೆರಳಿ ಹೋರಾಡುವ ಪ್ರಸಂಗ) ಎನ್ನುವಂತೆ ಕಲಿಪುರುಷನು ಮೇಲೆಬಿದ್ದು ವಶಪಡಿಸಿಕೊಂಡಿದ್ದ ನಿಷಧದೇಶದ ಚಕ್ರವರ್ತಿಯಾದ ನಳನನ್ನು ಪರಿಶೀಲಿಸುವವರು ಯಾರು ? ೭೨೫. ಬಾಹುಕನೆಂಬುದನ್ನು ಲಕ್ಷಿಸದೆ, ಮೋಹರಸವು ಮೇರೆ ಮೀರಿ ಹರಿಯುತ್ತಿರಲು 'ಎಲೈ ರಾಜನೆ, ಇನ್ನು ಏನೆಂದು ನುಣುಚಿಕೊಳ್ಳಲು (?) ನಟಿಸುವೆ ? ಸಾಹಸವನ್ನು ಬಿಟ್ಟು ಕೋಪಿಸದೆ ನನ್ನನ್ನು ರಕ್ಷಿಸುವುದು. ವ॥ ಎನ್ನಲು, ೭೨೬. ಕಾರ್ಕೋಟಕನು ಕೊಟ್ಟ ಬಟ್ಟೆಯನ್ನು ಆ ಕ್ಷಣವೆ ಹೊರತೆಗೆದು ಉಟ್ಟುಕೊಂಡು ಹೊದ್ದುಕೊಂಡು ಕುಳಿತಿದ್ದ ನೃಪವರ್ಯನು ಪೂರ್ವಾಚಲದಲ್ಲಿ ಮೂಡುವ ಉದಯ ಸೂರ್ಯನನ್ನು ಸಂತೋಷದಿಂದ ಹೋಲುತ್ತಿದ್ದನು. ೭೨೭. ಮೋಡ ಚೆದರಿದ ಸೂರ್ಯನಂತೆಯೂ, ಗ್ರಹಣ ಕಳೆದು ಕಾಂತಿಯಿಂದ ಉದಿಸಿದ ಚಂದ್ರನಂತೆಯೂ, ಶಿಶಿರಋತು ಮುಗಿದ ಚೈತ್ರಋತುವಿನಂತೆಯೂ, ಹೃದಯದ ಸಂತಾಪವಳಿದ ಯೋಗಿವರ್ಯನಂತೆಯೂ ಕುರೂಪ ಹೋಗಿ ಪ್ರೇಮವುಂಟಾಗಿ ಮಹಾರಾಜನು ಅತ್ಯಂತ

ಧೂಮಂ ಪಿಂಗಿದ ಶಿಖಿಯಂ
ತಾಮಯದಿಂ ಪಿಂಗಿದಿಂದುಕಳೆಯಂತಖಿಳ
ವ್ಯಾಮೋಹಂ ಪಿಂಗಿದ ಯೋ
ಗಾಮೃತನಿಧಿಯಂತೆ ತೊಳಗಿದಂ ಭೂಪಾಲಂ ೭೨೮

ನಯನಯುಗಂ ತಳತ್ತಳಿಸೆ ದಂತಮರೀಚಿ ಲಸತ್ಕಪೋಳಭಿ
ತ್ತಿಯನವಲಂಬಿಸಲ್ ತನುಶಲಾಕೆ ರವಿಪ್ರಭೆಯಂ ನಿವಾರಿಸಲ್
ಪ್ರಿಯರಸವಂ ತುಳುಂಕೆ ಮುಖಮುಜ್ಜ್ವಲಿಸಲ್ ಸಮುದಾಯಶೋಭೆ ಮೂ
ರ್ತಿಯನನುರಾಗದಿಂ ತಳೆದು ರಂಜಿಸಿದಂ ನಿಷಧಾಧಿನಾಯಕಂ ೭೨೯

ಭೋಂಕೆನೆ ಕಂಡು ಕಾಂತೆ ನಳಭೂಪತಿಯಂಘ್ರಿಯಮೇಲೆ ಬಿರ್ದು ತ
ನ್ನಂಕದೊಳಿಟ್ಟು ನಂದನರನೀತೆಱದಿಂ ಮಱೆದಿರ್ಪರೇ ಮನ
ಶ್ಶಂಕೆಯಿನಿಂತು ಪೇಟ್ ಭುವನವಲ್ಲಭ ವಲ್ಲಭೆಯೆಂದು ಸಂತತಂ
ಪಂಕಜನೇತ್ರೆ ಕಣ್ಬನಿಗಳಿಂ ತೊಳೆದಳ್ ಪತಿಪಾದಪದ್ಮಮಂ ೭೩೦

ನಯನಾಂಬುಜ ಮಧುಕಣರಾ
ಜಿಯೆಂಬ ತೆಱನಾದ ತೋರಕಣ್ಬನಿಯಿಂ ಕಾಂ
ತೆಯ ಚಿಂತಾಕರ್ದಮವದು
ಮಯತ್ನದಿಂ ಪೋದುದೆಂಬುದೊಂದಚ್ಚರಿಯೇ ೭೩೧

ತೇಜೋಮಯನಾಗಿ ಮನೋಹರವಾದ ರೂಪದಿಂದಿದ್ದನು ೭೨೮. ಹೊಗೆಯಿಲ್ಲದ ಬೆಂಕಿಯಂತೆಯೂ ರೋಗವಿಮುಕ್ತವಾದ ಚಂದ್ರಕಳೆಯಂತೆಯೂ ಎಲ್ಲ ವ್ಯಾಮೋಹಗಳೂ ಉಡುಗಿದ ಯೋಗಾಮೃತನಿಧಿಯಂತೆಯೂ ಮಹಾರಾಜನು ಪ್ರಕಾಶಿಸಿದನು. ೭೨೯. ಕಣ್ಣುಗಳೆರಡೂ ಹೊಳೆಹೊಳೆಯಲು, ಹಲ್ಲಿನ ಕಾಂತಿ ಶೋಭಿಸುವ ಕೆನ್ನೆಗಳ ಗೋಡೆಯನ್ನು ಅವಲಂಬಿಸಲು, ಅಲಗಿನಂತಹ ದೇಹ ರವಿಕಾಂತಿಯನ್ನು ಮೀರಿಸಲು, ಅಭಿಮಾನರಸವು ತುಂಬಿ ತುಳುಕಲು, ಮುಖವು ಪ್ರಕಾಶಿಸಲು, ಸಮಷ್ಟಿ ಕಾಂತಿಯುಕ್ತವಾದ ಮೂರ್ತಿ ಸ್ವರೂಪವನ್ನು ಪ್ರಿಯದಿಂದ ತಾಳಿದವನಾಗಿ ನಿಷಧದೇಶದ ದೊರೆ ಶೋಭಿಸಿದನು. ೭೩೦. ತರುಣಿ ಕೂಡಲೆ ಕಂಡು, ನಳಮಹಾರಾಜನ ಕಾಲುಗಳ ಮೇಲೆ ಬಿದ್ದಳು. "ಮಕ್ಕಳನ್ನು ನನ್ನ ತೊಡೆಯ ಮೇಲಿಟ್ಟು, ಈ ರೀತಿ ಮನಶ್ಶಂಕೆಯಿಂದ ಮರೆತು ಇರುವರೆ ? ಲೋಕೈಕನಾಥನೆ, ಒಡೆಯನೆ, ಹೇಳು" ಎಂಬುದಾಗಿ ಕಣ್ಣೀರಿನಿಂದ ಪಾದಪದ್ಮವನ್ನು ಒಂದೇ ಸಮನೆ ತೊಳೆದಳು. ೭೩೧. ಕಣ್ದಾವರೆಯ ಬಂಡಿನ ಕಣದ ಸಮೂಹವೋ ಎಂಬ ರೀತಿಯಲ್ಲಿ ಉಂಟಾದ ದೊಡ್ಡ ದೊಡ್ಡ ಕಂಬನಿಗಳಿಂದ ತರುಣಿಯ ಚಿಂತೆಯೆಂಬ ಕೆಸರು ಅನಾಯಾಸವಾಗಿ ಹೋಯಿತೆಂಬುದೊಂದು ಆಶ್ಚರ್ಯವೇ ?

ನಿರವಧಿಯ ಬಾಷ್ಪಜಲವಂ
ನಿರಂತರಂ ಸುರಿದು ಕೆಂಕಮಾದುದಱಿಂ ತ
ತ್ತರುಣಿಯ ನಯನಂ ರಕ್ತಾಂ
ಬುರಹಕ್ಕೆಣೆಯಾದುದೆಂಬುದೇಂ ಸಂದೆಯಮೇ ೭೩೨

ವ॥ ಅನಂತರಂ

ವಾರಿಜಪತ್ರನೇತ್ರೆ ದಮಯಂತಿಯ ಪೂರ್ಣಕಟಾಕ್ಷವಾಕ್ಸುಧಾ
ಸಾರದಿನಾತ್ಮವಲ್ಲಭನ ದೇಹವನಾವರಿಸಿರ್ದ ದುರ್ವಿಷಂ
ಗಾರುಡಮಂತ್ರದಿಂ ಪರಿದವೊಲ್ ಪರಿಯಲ್ ತನುಕಾಂತಿಯಿಂ ನಿಜಾ
ಕಾರವದೇಂ ಬೆಡಂಗುವಡೆದಿರ್ದುದೊ ತತ್ಕ್ಷಣದೊಳ್ ನೃಪಾಲನಾ ೭೩೩

ವ॥ ಅಂತಿರ್ದ ನಳಚಕ್ರವರ್ತಿ ತನ್ನ ಮನೋರಮೆಯಂ ನೋೞ್ಪಾಗಳ್

ಮೊದಲೊಳ್ ಕಟ್ಟಿದ ಮುಂಡೆಯುಟ್ಟುಡಿಗೆಯಿಟ್ಟಿರ್ದೋಲೆ ಮೆಯ್ಗಿಂಪನಿ
ಕ್ಕಿದ ಗಂಧಂ ತೊಡೆದಿರ್ದಲಕ್ತಕರಸಂ ಮಿಂಚಿಟ್ಟ ದಂತಾಳಿ ತಿ
ರ್ದಿದ ನುಣ್ಪಯ್ತಲೆ ಲೀಲೆಯಿಂ ಸವಿದ ತಾಂಬೂಲಂ ಜಲಂ ಮಿಂದುದ
ಲ್ಲದೆ ಮತ್ತೇನುವನೊಲ್ಲದಿರ್ದಬಲೆ ಚಿತ್ರಾಕಾರದಿಂ ತೋಱಿದಳ್ ೭೩೪

ಮಾಸಿದ ಸೀರೆಯೋಸರಿಸಿದಾಭರಣಂ ನಿಸದಂ ಬೆಳರ್ತ ಬಾಯ್
ಸೂಸಿದ ಕುಂತಳಾಳಿ ಜಡೆಗಟ್ಟಿದ ವೇಣಿ ಮನೋವಿಷಾದದಿಂ

೭೩೨. ಏಕಪ್ರಕಾರವಾಗಿ ಕಂಬನಿಯನ್ನು ಸಂತತವಾಗಿ ಸುರಿದು ಕೆಂಪಾಗಿದ್ದುದರಿಂದ (ಆ) ತರಳೆಯ ಕಣ್ಣುಗಳು ಕೆಂದಾವರೆಗೆ ಸಮಾನವಾದುವೆಂಬುದೇನು ಸಂಶಯವೆ ? ವ॥ ಆ ತರುವಾಯ, ೭೩೩. ಆಕೆಯ ಗಂಡನ ಶರೀರವನ್ನು ಆವರಿಸಿದ್ದ ಕೆಟ್ಟ ವಿಷವು ಕಮಲ ಪತ್ರದಂತೆ ಕಣ್ಣುಳ್ಳ ದಮಯಂತಿಯ ಸಂಪೂರ್ಣವಾದ ನೋಟ, ನುಡಿಗಳ ಅಮೃತಸಾರ ಗಳಿಂದ, ಗಾರುಡಮಂತ್ರದಿಂದ ನಿವಾರಿಸುವಂತೆ ಪರಿಹಾರವಾಗಲು, ಶರೀರಪ್ರಭೆಯಿಂದ ಒಡನೆಯೇ ಮಹಾರಾಜನ ಆ ಸ್ವಸ್ವರೂಪವು ಎಷ್ಟು ಆಶ್ಚರ್ಯವಾಗಿದ್ದಿತೋ ! ವ॥ ನಳಚಕ್ರವರ್ತಿ ತನ್ನ ಮನದನ್ನೆಯನ್ನು ನೋಡುವಲ್ಲಿ ೭೩೪. ಸ್ನಾನವೊಂದನ್ನು ಬಿಟ್ಟು, ಈ ಮೊದಲು ಕಟ್ಟಿದ ಜಡೆಗಂಟು, ಉಟ್ಟಬಟ್ಟೆ, ತೊಟ್ಟಿದ್ದ ಓಲೆ, ಶರೀರಕ್ಕೆ ಕಂಪನ್ನು ನೀಡುವ ಗಂಧ, ಲೇಪಿಸಿಕೊಂಡಿದ್ದ ಅಲಕ್ತಕರಸ, ಹೊಳೆಹೊಳೆಯುವ ಹಲ್ಲುಗಳ ಪಂಕ್ತಿ, ತಿದ್ದಿ ತೀಡಿದ ನುಣುಪಾದ ಬೈತಲೆ, ವಿಲಾಸದಿಂದ ಸವಿದ ತಾಂಬೂಲ ಮೊದಲಾದುವುಗಳನ್ನೇನೂ ಒಲ್ಲದಂತಿದ್ದ ತರಳೆ ಆಶ್ಚರ್ಯಕರವಾದ ರೂಪದಿಂದ ತೋರಿಬಂದಳು. ೭೩೫. ಮಾಸಿದ ಸೀರೆ, ನಿರಾಕರಿಸಿದ ಒಡವೆಗಳು, ವಾಸ್ತವಿಕವಾಗಿ ಬಿಳಿಚಿಕೊಂಡಿದ್ದ ಬಾಯಿ, ಚೆಲ್ಲಾಪಿಲ್ಲಿಯಾದ ಕೂದಲ ಸಮೂಹ, ಜಡೆಗಟ್ಟಿದ ಹರಳು, ಮನಃಕ್ಲೇಶದಿಂದ ಮಲಿನವಾದ ತನ್ನ ದೇಹ, ಬಾಡಿದ ಮುಖ, ಈ ಎಲ್ಲವೂ ಚಿತ್ರಚಿಂತಾ

ದೂಸರವಾದ ತನ್ನ ತನು ಬಾಡಿದ ವಕ್ತ್ರವಿನಿತ್ತು ಚಿತ್ತಚಿಂ
ತಾಪ(ಸ?)ತಿ ಮಾಣಿಕಂಬಡೆದ ಚಂದವೊ ಮೇಣ್ ದಮಯಂತಿಯಂದವೋ ೭೩೫

ವ॥ ಅನಂತರಂ

ದಿನಕರನುನ್ನತದ್ಯುತಿಗೆ ಪದ್ಮಿನಿ ಚೈತ್ರಮಹೋತ್ಸವಕ್ಕೆ ನಂ
ದನವನಲಕ್ಷ್ಮಿ ನಿರ್ಮಲಶರತ್ಸಮಯಕ್ಕೆ ಮರಾಳಿ ನೀರದ
ಧ್ವನಿಗೆ ಮಯೂರಿ ಸಂತತ ಮಹೋತ್ಸವದಿಂ ಪೊರೆಯೇಱುವಂತೆ ತ
ನ್ನಿನಿಯನ ಕಾಣ್ಕೆಯಿಂ ಸುದತಿ ನೂತನಕಾಂತಿಯನಾಂತುದೊಪ್ಪದೇ ೭೩೬

ಬಿಡದೆಡರಾದ ದಂಪತಿಗೆ ದುಸ್ಸ್ಥಿತಿಯಾದೊಡವನ್ಯಚಿತ್ತವಾ
ದೊಡಮಳಿಪಾದೊಡಂ ನಿಜಮತಿಭ್ರಮೆಯಾದೊಡಮುಗ್ರಪೀಡೆಯಾ
ದೊಡಮಟಲಾದೊಡಂ ಮಹಿಮೆ ಕುಂದಿದೊಡಂ ಸಲೆ ಕಾಂತಭಕ್ತಿಯಂ
ಬಿಡುವರೆ ಸತ್ಕುಲೀನಸತಿಯರ್ ದಮಯಂತಿ ಪರೀಕ್ಷ್ಯಳಲ್ಲವೇ ೭೩೭

ವ॥ ಎಂದು ಜನಮನಃಪರಿಣಾಮಂ ತನಿವೆರ್ಚಲ್ ಬೞಿಯಂ

ಪ್ರಿಯೆಯ ಮನೋಹರೋಜ್ಜ್ವಲವಿಲೋಚನ ಚಂಪಕಮಾಲೆ ದಂತಕಾಂ
ತಿಯ ನವಕುಂದಮಾಲೆ ನಖರಾಂಶುಸಿತೋತ್ಪಲಮಾಲೆ ದೇಪದೀ

ಸತಿಯು ಮಾಣಿಕ್ಯವನ್ನು ಪಡೆದ ಚೆಂದವೋ ಅಥವಾ ದಮಯಂತಿಯ ಅಂದವೋ (ಸ್ಥಿತಿಯೋ ?) ಎಂಬಂತಿದ್ದುವು. (ದಮಯಂತಿಯ ಇರುವಿಕೆಯು ಚಿಂತೆಯ ಮೇಲುಗೈಯನ್ನೊ, ಇಲ್ಲವೇ ಆಕೆಯ ಪಾಡನ್ನೋ ಸೂಚಿಸುವಂತಿದ್ದಿತು ಎಂಬುದು ಮುಖ್ಯ ಭಾವ.) ವ॥ ಆ ತರುವಾಯ ೭೩೬. ಸೂರ್ಯನ ಶ್ರೇಷ್ಠವಾದ ಕಾಂತಿಗೆ ಕಮಲ, ವಸಂತಋತುವಿನ ಮಹೋತ್ಸವಕ್ಕೆ ನಂದನವನಲಕ್ಷ್ಮಿ, ಪರಿಶುದ್ಧವಾದ ಶರದೃತುವಿಗೆ ಹಂಸಸಮೂಹ, ಮೋಡದ ಧ್ವನಿಗೆ ನವಿಲುಗಳು ಸಂತತವಾದ ಸಂತೋಷದಿಂದ ಹುರುಪೇರುವಂತೆ ತನ್ನ ಗಂಡನನ್ನು ಕಂಡುದರಿಂದ ತರುಣಿ ಹೊಸಕಾಂತಿಯನ್ನು ಪಡೆದುದು ಒಪ್ಪದೆ ಇರುವುದೆ ? ೭೩೭. ತಪ್ಪದೆ ಆಪತ್ತು ಸಂಭವಿಸಿದ ದಂಪತಿಗಳಿಗೆ ದುಃಸ್ಥಿತಿಯುಂಟಾದರೂ ಅನ್ಯಮನಸ್ಕವಾದರೂ, ಸಲ್ಲದ ಅಪೇಕ್ಷೆ ಉಂಟಾದರೂ, ಬುದ್ಧಿ ಪಲ್ಲಟಿಸಿದರೂ, ಭಯಂಕರವಾದ ರೋಗ ಬಂದರೂ, ದುಃಖ ಪ್ರಾಪ್ತವಾದರೂ, ಮಹಿಮೆ ಕಡಮೆಯಾದರೂ, ಒಳ್ಳೆಯ ವಂಶದಲ್ಲಿ ಹುಟ್ಟಿದ ಪತ್ನಿಯರು ಪತಿಭಕ್ತಿಯನ್ನು ಕೈಬಿಡುವರೆ ? ದಮಯಂತಿ ಆ ಪರೀಕ್ಷೆಗೆ ಪಾತ್ರಳಾಗಿರುವವಳಲ್ಲವೆ ? (ದಮಯಂತಿಯೇ ಅದಕ್ಕೆ ಪ್ರಮಾಣಳಲ್ಲವೆ ?) ವ॥ ಎಂಬುದಾಗಿ ಜನರ ಮನೋಭಿಪ್ರಾಯವು (?) ವಿಶೇಷವಾಗಿ ವರ್ಧಿಸಲು, ತರುವಾಯ ೭೩೮. ಇನಿಯಳ ಚಿತ್ತಾಕರ್ಷಕವೂ, ಶೋಭಾಯಮಾನವೂ ಆದ ಕಣ್ಣುಗಳೆಂಬ ಸಂಪಿಗೆಯ ಸರವೂ, ಹಲ್ಲುಗಳ ಬೆಳಕಿನ ಹೊಸಬಗೆಯಾದ ಮಲ್ಲಿಗೆಯ

ಪ್ರಿಯ ವಿಲಸಚ್ಛಿರೀಷವನಮಾಲೆ ನೃಪಾಲನ ಹೃನ್ಮಧುವ್ರತ
ಪ್ರಿಯುವನೊಡರ್ಚೆ ಮುನ್ನಿನದಱಿಂ ಮಿಗಿಲಾಯ್ತು ಪುನಸ್ಸ್ವಯಂವರಂ ೭೩೮

ಹರಿಪೀಠಂ ಪಸೆ ಶುದ್ಧಬುದ್ಧಿ ಜನಕಂ ಕಲ್ಯಾಣಗೇಹಂ ಮನಂ
ತರಳಾಪಾಂಗಮರೀಚಿಮಾಲೆ ಸಖಿಸಂದೋಹಂ ಸಮಸ್ತೇಂದ್ರಿಯಂ
ಪರಿಣಾಮಂ ನವರತ್ನಭೂಷಣಚಯಂ ಮೌಹೂರ್ತಿಕಂ ಚಿತ್ತವಾ
ಗಿರಲೊಪ್ಪಿತ್ತು ಪುನಸ್ಸ್ವಯಂವರಮಹೋತ್ಸಾಹಂ ಸರೋಜಾಕ್ಷಿಯಾ ೭೩೯

ತನುಕಾರ್ಶ್ಯಂ ತನುಮಧ್ಯಮಂ ವಿಪುಳಹೃಚ್ಚಿಂತಾಭರಂ ಕರ್ಕಶ
ಸ್ತನಮಂ ಲೋಚನಮಾಂದ್ಯಮಂಘ್ರಿಗತಿಯಂ ಚಂಚದ್ವಪುಃಕಾಳಿಮಂ
ಘನನೀಳಾಳಕಮಂ ಸಮಂತು ಕೆಳೆಗೊಂಡೊಪ್ಪಿಪ್ಪಿನಂ ಪಂಕಜಾ
ನನೆಯಂ ಕಾಂತಿಯನಾಂತು ರಂಜಿಸಿದಳೋ ವೈದರ್ಭೆ ಸಂರಂಭದಿಂ ೭೪೦

ದಯೆ ಧರ್ಮಂ ಧೃತಿ ವಿಕ್ರಮಂ ಕಳೆ ಗುಣಂ ಸದ್ವಿದ್ಯ(ದ್ಯೆ?) ಸೌಜನ್ಯವ
ನ್ವಯಮಾಚಾರ ಪರೀಕ್ಷೆ ಶಾಂತಿ ತಪಮುದ್ಯೋಗಂ ಸಮಸ್ತಾಗಮಂ
ಕ್ರಿಯೆ ಪೆಂಪಿಂದೊಡಗೂಡುವಂತೆ ನಳಪೃಥ್ವೀವಲ್ಲಭಂ ತನ್ಮನಃ
ಪ್ರಿಯೆಯೊಳ್ ಕೂಡಿದನಾತ್ಮಪುಣ್ಯಫಲದಿಂ ಲೋಕತ್ರಯಂ ಬಣ್ಣಿಸಲ್ ೭೪೧

ಮಾಲೆಯೂ, ಉಗುರಿನ ಕಾಂತಿಯ ಬಿಳುಪಾದ ಕನ್ನೈದಿಲೆಯ ಹಾರವೂ, ಶರೀರದ ಪ್ರಭೆಯು ಕಾಂತಿಯುತವಾದ ಶಿರೀಷಪುಷ್ಪದ ವನಮಾಲೆಯೂ ರಾಜನ ಎದೆದುಂಬಿಗೆ ಸಂತೋಷವನ್ನು ನೀಡಿ, ಪುನರ್ವಿವಾಹವೆಂಬುದು ಮೊದಲಿಗಿಂತಲೂ ಅತಿಶಯ ವೆನ್ನಿಸಿತು. ೭೩೯. ಸಿಂಹಾಸನವೇ ಹಸೆಮಣೆ, ಪರಿಶುದ್ಧವಾದ ಬುದ್ಧಿಯೇ ತಂದೆ, ಮನಸ್ಸೇ ಮದುವೆಯ ಮಂಟಪ, ತರುಣಿಯ ಕಡೆಗಣ್ಣಿನ ನೋಟದ ಅಲೆಗಳು ಗೆಳತಿಯರ ಸಮೂಹ, ಪರಿಣಾಮಕರವಾದ ಸರ್ವೇಂದ್ರಿಯಗಳೂ ನವರತ್ನ ಖಚಿತವಾದ ಆಭರಣಗಳ ಸಮೂಹ, ಮನಸ್ಸೇ ಜೊಯಿಸನಂತಿರಲು ಕಮಲಾಕ್ಷಿಯ ಪುನಃ ಸ್ವಯಂವರದ ವೈಭವವು (ಅನುವಾಗಿ) ಒಪ್ಪಿತು. ೭೪೦. ಕೃಶವಾದ ಶರೀರವು ನಡುವನ್ನೂ, ಅಧಿಕವಾದ ಹೃತ್ತಾಪದ ಹೊರೆಯು ಕಠಿನವಾದ ಮೊಲೆಗಳನ್ನೂ, ಆಲಸ್ಯಯುತವಾದ ಕಣ್ಣುಗಳು ಕಾಲಿನ ಚಲನವನ್ನೂ, ಮಿರುಗುವ ಶರೀರದ ಕಪ್ಪು ಶ್ರೇಷ್ಠವಾದ ಕರಿಗೂದಲನ್ನೂ ಚೆನ್ನಾಗಿ ಜೊತೆಗೂಡಿ ಒಪ್ಪಿರಲು ವಿದರ್ಭದೇಶದ ರಾಜನ ಮಗಳಾದ ಪದ್ಮಮುಖಿ ಯಾದ ದಮಯಂತಿ ಕಾಂತಿಗೂಡಿ ಸಂಭ್ರಮದಿಂದ ಪ್ರಕಾಶಿಸುವಳೋ (ಎಂಬಂತಿದ್ದಳು). ೭೪೧. ದಯೆ, ಧರ್ಮ, ಧೈರ್ಯ, ಪರಾಕ್ರಮ, ಕಾಂತಿ, ಗುಣ, ಸದ್ವಿದ್ಯೆ, ಸೌಜನ್ಯ, ವಂಶ, ನಡೆ, ಪರೀಕ್ಷೆ, ಶಾಂತಿ, ತಪೋನುಷ್ಠಾನ, ಸಕಲ ಶಾಸ್ತ್ರಗಳು, ಕ್ರಿಯೆಗಳು ಹೆಮ್ಮೆ ಯಿಂದ ಮೇಳವಿಸಿರುವಂತೆ ಮೂರು ಲೋಕಗಳೂ ವರ್ಣಿಸುತ್ತಿರಲು ನಳಮಹಾರಾಜನು

ಸತತಂ ದುಗ್ಧಾಬ್ಧಿವೀಚೀನಿಚಯದ ತೆಱದಿಂ ಮೇಲೆಮೇಲೆಯ್ದಿ ಭೀಮ
ಕ್ಷಿತಿಪಂಗುತ್ಸಾಹವಾರ್ತಾಸರಣಿಯನರೆಬರ್ ವಾರನಾರೀಜನಂ ಶೀ
ಘ್ರತೆಯಿಂ ಪೇೞಲ್ ಮನೋರಾಗದ ಬೆಳವಿಗೆಯುಂ ಸಂತತಂ ಪ್ರೀತಿಯಿಂ ತ
ತ್ಸುತೆಯುದ್ಯದ್ಬುದ್ಧಿಯುಂ ವರ್ಣಸುತನುಸಯದಿಂ ಬಂದನಾ ಭೂತಳೇಶಂ ೭೪೨

ವಿಮಳಾಚ್ಛಾದನಮುಂ ಲಸನ್ಮಣಿಮಯಾಲಂಕಾರಮುಂ ಯುಕ್ಷಕ
ರ್ದಮಮುಂ ದಿವ್ಯಸುಗಂಧಮಾಲ್ಯಚಯಮುಂ ತಾಂಬೂಲಮುಂ ಪಾತ್ರದಿಂ
ರಮಣೀಸಂತತಿಯಾಂತು ತನ್ನೊಡವರಲ್ ಬಂದಂ ಕರಂ ನೋೞ್ಪ ಸಂ
ಭ್ರಮದಿಂ ನೈಷಧಭೂಪನಂ ತನುಜೆಯುಂ ವೈದರ್ಭಭೂಪಾಲಕಂ ೭೪೩

ವ॥ ಅಂತು ವಿದರ್ಭರಾಜಂ ಬಂದು ಜಾಮಾತೃವನಲಂಕರಿಸಿ ತದ್ವೃತ್ತಾಂತಮಂ ಕೇಳ್ವಾಗಳ್

ಮೃಗಮದಪಂಕದಿಂ ತಿಲಕಮಂಜರಿ ಚಿತ್ರಿತಮಾಲಪತ್ರವ
ಲ್ಲಿಗಳನಳಂಕೆವೆತ್ತ ಮಯಮಂಗಳೊಳಾಂತು ನವಪ್ರಸೂನಮುಂ
ಮುಗಮುಗಿಪಂದದಿಂ ತುಱುಬಿ ಬಂದಳಿವಲ್ತೆ ಸಮಸ್ತವಸ್ತುವ
ಸ್ತುಗಳೆನಗಾದುವೆಂದು ನಿಜವಲ್ಲಭನಂ ತಲೆವಾಗಿಪಂದದಿಂ ೭೪೪

ಆತ್ಮಪುಣ್ಯಫಲದಿಂದ ತನ್ನ ಮನದನ್ನೆಯ ಸಮಾಗಮವನ್ನು ಪಡೆದನು. ೭೪೨. ಸರ್ವದಾ ಕ್ಷೀರಸಮುದ್ರದ ಅಲೆಗಳ ಸಮೂಹದ ರೀತಿಯಲ್ಲಿ ಮೇಲೆ ಮೇಲೆ ಬಂದು ಭೀಮ ಮಹಾರಾಜನಿಗೆ ಉತ್ಸಾಹ ವೃತ್ತಾಂತದ ಸರಣಿಯನ್ನು ಕೆಲವು ವೇಶ್ಯಾಂಗನೆಯರು ಕೂಡಲೆ ತಿಳಿಸಲು, ಮನಃಪ್ರೇಮದ ಬೆಳವಣಿಗೆಯನ್ನೂ ಎಡೆವಿಡದೆ ಪ್ರೀತಿಯಿಂದ ಆ ಮಗಳ ಉನ್ನತವಾದ ಬುದ್ಧಿಯನ್ನೂ ವರ್ಣಿಸುತ್ತ ಅಭಿಮಾನದಿಂದ ಆ ಮಹಾರಾಜನು ಬಂದನು. ೭೪೩. ಪವಿತ್ರವಾದ ಮೇಲುಹೊದಿಕೆಯನ್ನೂ ಹೊಳೆಯುವ ಮಣಿಮಯವಾದ ಆಭರಣಾದಿಗಳನ್ನೂ ಶ್ರೇಷ್ಠವಾದ ಸುವಾಸನಾಯುಕ್ತವಾದ ಹೂವಿನ ಮಾಲೆಗಳನ್ನೂ ತಾಂಬೂಲವನ್ನೂ ತಟ್ಟೆಯೇ ಮೊದಲಾದುವುಗಳಲ್ಲಿ ಸಖಿಯರ ಸಮೂಹವು ತಳೆದು ತನ್ನೊಂದಿಗೆ ಬರಲು, ನಿಷಧದೇಶದ ರಾಜನಾದ ನಳನನ್ನೂ ಮಗಳನ್ನೂ ವಿಶೇಷವಾಗಿ ನೋಡುವ ಸಂಭ್ರಮದಿಂದ ವಿದರ್ಭದೇಶದ ರಾಜನಾದ ಭೀಮರಾಜನು ಬಂದನು. ವ॥ ಹಾಗೆ ವಿದರ್ಭರಾಜನು ಬಂದು ಅಳಿಯನಿಗೆ ಅಲಂಕಾರಮಾಡಿ, ಆ ಸಂಗತಿಯನ್ನು ಕೇಳುವಲ್ಲಿ, ೭೪೪. ಕಸ್ತೂರಿಯಿಂದ ತಿಲಕದ ಗೊಂಚಲು, ಹಣೆಯ ಮೇಲೆ ಹಚ್ಚಿದ ಬೊಟ್ಟುಗಳ ಅತಿಶಯವಾದ ಬಳ್ಳಿಗಳನ್ನು ಹೊಂದಿಕೊಂಡಂತೆ ಶರೀರದಲ್ಲಿ ತಳೆದು, ಹೊಸತಾದ ಹೂವುಗಳನ್ನು ಘಮಘಮಿಸುವಂತೆ ಮುಡಿದುಕೊಂಡು, ಸಕಲ ವಸ್ತು ಪದಾರ್ಥಗಳೂ ನನಗಾದುವು ಇವು ಅಲ್ಲವೆ ಎಂದು

ವ॥ ಬಳಿಯಂ

ಸುರತರು ಸತ್ಫಲಂಗಳನುದಂಚಿತ ಕಲ್ಪಲತಾಸಮನ್ವಿತಂ
ಧರಿಸಿ ವನಸ್ಥವಾದ ತೆಱದಿಂ ನಿಜನಂದನರಿಂ ಕಳತ್ರದಿಂ
ಪರಿವಡೆದಂ ಸಮಸ್ತ ವಿಬುಧಪ್ರಿಯನುನ್ನತಮೂರ್ತಿ [ಬಂದು] ಬಂ
ಧುರತರ ವೀರಸೇನನೃಪನಂದನನುನ್ನತ ಹೇಮಪೀಠದೊಳ್ ೭೪೫

ಲಲಿತಮುಖೇಂದುಮೂರ್ತಿ ರತಿ ಯೌವನಲಕ್ಷ್ಮಿ ತನುಪ್ರಕಾಶನಿ
ರ್ಮಳಸುಧೆ ಕೋಮಳಾಧರಮರುನ್ಮಣಿ ಪೂರ್ಣಕಟಾಕ್ಷ ಕಾಮದೋ
ಜ್ಜ್ವಲಸುರಧೇನು ಭೀಮತನಯಾರ್ಣವದೊಳ್ ನಿಷಧೇಂದ್ರಮಂದರಾ
ಚಲ ನಿಜಸಂಗದಿಂ ಪ್ರಕಟವಪ್ಪುದು ನೋಟ್ಪೊಡಿದಾವ ವಿಸ್ಮಯಂ ೭೪೬

ಓಪಳ ಪುಣ್ಯವಲ್ತೆ ಋತುಪರ್ಣನ ಸಾರಥಿಯಾಗಿ ಬಂದ ವಿ
ದ್ರೂಪಿ ವಿಚಾರಿಸಲ್ ನಳನೃಪಾಲಕನಾದನಸಂಕೆಯಿಂ ಪಿಕಾ
ಳಾಪೆ ಕಟಾಕ್ಷಕಾಂತಿವನಮಾಲೆಯನಿಕ್ಕೆ ಪುನಸ್ಸ್ವಯಂವರ
ಶ್ರೀ ಪರಮೋತ್ಸವಂಬಡೆದನೆಂದುದು ಪೌರಜನಂ ಮಹಾಜನಂ ೭೪೭

ತನ್ನ ಕಾಂತನ ತಲೆದೂಗಿಸುವಂತೆ ಬಂದಳು. ವ॥ ಅನಂತರ, ೭೪೫. ಮೇಲ್ಮುಖವಾದ ಕಲ್ಪಲತೆಯಿಂದ ಒಡಗೂಡಿ ಕಲ್ಪವೃಕ್ಷವು ಶ್ರೇಷ್ಠವಾದ ಫಲಗಳನ್ನು ಧರಿಸಿ ವನದಲ್ಲಿ ಬೆಳೆದಂತೆ, ಎಲ್ಲಾ ವಿದ್ವಾಂಸರಿಗೂ ಪ್ರಿಯನೂ, ಅತ್ಯಂತ ಮನೋಜ್ಞನಾದ ವೀರಸೇನ ಮಹಾರಾಜನೂ, ಎತ್ತರವಾದ ಆಕಾರವುಳ್ಳವನೂ ಆದ ನಳಮಹಾರಾಜನು ಬಂದು, ಉನ್ನತವಾದ ಚಿನ್ನದ ಪೀಠದಲ್ಲಿ ತನ್ನ ಮಕ್ಕಳಿಂದಲೂ, ಹೆಂಡತಿಯಿಂದಲೂ ಅಣಿಯಾಗಿ ಕಂಡನು. ೭೪೬. ಭೀಮತನೂಜೆಯಾದ ದಮಯಂತಿಯೆಂಬ ಸಮುದ್ರದಲ್ಲಿ ನಿಷಾಧಾಧಿಪತಿಯಾದ ನಳವೆಂಬ ಮಂದರಾಚಲದ ಸಂಪರ್ಕದಿಂದ, ಮನೋಹರವಾದ ಮುಖವೆಂಬ ಚಂದ್ರನಾಕೃತಿ, ರತಿ, ಯೌವನಲಕ್ಷ್ಮಿ, ಶರೀರಕಾಂತಿಯೆಂಬ ಪವಿತ್ರವಾದ ಅಮೃತ, ಕೋಮಲವಾದ ತುಟಿಯೆಂಬ ಮರುನ್ಮಣಿ (?), ಇಷ್ಟಾರ್ಥದಾಯಕವಾದ ಪೂರ್ಣ ಕಟಾಕ್ಷವೆಂಬ ಉಜ್ವಲವಾದ ಕಾಮಧೇನುಗಳು ಸುವ್ಯಕ್ತವಾಗುತ್ತವೆ. ಪರಿಶೀಲಿಸುವಲ್ಲಿ ಇದೇನು ಆಶ್ಚರ್ಯ! ೭೪೭. ಇದು ಇನಿಯಳ ಪುಣ್ಯವಲ್ಲವೆ ? ಋತುಪರ್ಣನ ಸಾರಥಿಯಾಗಿ ಬಂದ ಕುರೂಪಿ ವಿಚಾರಿಸಲು ನಿಸ್ಸಂದೇಹವಾಗಿ ನಳಮಹಾರಾಜನೆನ್ನಿಸಿದನು. ಕೋಗಿಲೆಯ ದನಿಯುಳ್ಳ (ದಮಯಂತಿ) ಕಡೆಗಣ್ಣ ನೋಟದ ಕಾಂತಿಯೆಂಬ ವನಮಾಲೆಯನ್ನು ಹಾಕಲು ಪುನಃಸ್ವಯಂವರ ಲಕ್ಷ್ಮಿಯ ಪರಮೋತ್ಸವವನ್ನು ಪಡೆದನು ಎಂದು

ವ॥ ಅದಂ ಕೇಳ್ದು

ದಾವತಿವೆತ್ತುವೇದ ಋತುಪರ್ಣನೃಪಂ ಪುರದೊಳ್ ನಿರಂತರಂ
ತೀವಿದ ವಾರ್ತೆಯುಂ ಪಲಬಱಿಂ ತಿಳಿವಂತಿರೆ ಕೇಳ್ದು ಪಾವೆಯುಂ
ಪಾವಡರ್ವಂತೆ ಮೆಯ್ಮಱೆದು ಸೈವೆಱಗಾಗಿ ಪುನಸ್ಸ್ವಯಂವರಂ
ದೇವಿಗೆ ಚೆಲ್ವನಾಯ್ತು ಸತಿಬುದ್ಧಿ ಚತುರ್ಗುಣವಲ್ತೆ ಭಾವಿಸಲ್ ೭೪೮

ವ॥ ಎಂದು

ಏತೆಱದಿಂ ಬಾಹುಕವೆಸ
ರೀತಂಗಾಯ್ತೀಗಳದೆಂತು ಪೋಯ್ತು ನಳಪ್ರ
ಖ್ಯಾತಿಯದೆಂತಾಯ್ತೆಂದಿವ
ನಾತುರದಿಂ ನೋಡಲೆಯ್ದಿದಂ ಋತುಪರ್ಣಂ ೭೪೯

ವ॥ ಅಂತು ಋತುಪರ್ಣಂ ಬಂದು ವಿನಯಪುರಸ್ಸರಂ ಕೇಳ್ವುದುಂ

ಕಲಿ ಪೊರ್ದಲ್ ಪೊಱಮಟ್ಟು ಪೋದನಿದಿರೊಳ್ ಕರ್ಕೋಟಕಂ ಕಂಡು ತ
ನ್ನೊಲವಿಂ ಕರ್ಚಿದೊಡಾಯ್ತು ಬಾಹುಕವೆಸರ್ ವಿದ್ರೂಪದಿಂದೀಗಳಾ
ಕಲಿ ಪಿಂಗಲ್ ಫಣಿಯಿತ್ತ ವಸ್ತ್ರವೆರಡುಂ ಸರ್ವಾಂಗದೊಳ್ ತಾಳ್ದಿರಲ್
ನಳನಾದಂ ಋತುಪರ್ಣ ಕೇಳ್ ನಿಜಪುರಕ್ಕೆಯ್ದಶ್ವಹೃದ್ವಿದ್ಯೆಯಿಂ ೭೫೦

ಊರಜನರೂ ಮಹಾಜನರೂ ಆಡಿಕೊಂಡರು: ವ॥ ಅದನ್ನು ಕೇಳಿ, ೭೪೮. ಅತ್ಯಂತ ಪ್ರಯಾಸದಿಂದ ಬಂದ ಋತುಪರ್ಣರಾಜನು ಪಟ್ಟಣದಲ್ಲಿ ಎಡೆಬಿಡದೆ ವ್ಯಾಪಿಸಿದ್ದ ವೃತ್ತಾಂತವನ್ನು ಹಲವರಿಂದ ತಿಳಿದುಬಂದಂತೆ ಕೇಳಿ, ಅಂಜುಕುಳಿಯ ಮೇಲೆ ಹಾವು ಬಿದ್ದಂತೆ ಮೈಮರೆತು ಚಕಿತನಾಗಿ ಪುನಃಸ್ವಯಂವರವು ದೇವಿಗೆ ಒಳ್ಳೆಯದೇ ಆಯಿತು. ಪರಿಶೀಲಿಸಿದಲ್ಲಿ ಹೆಂಗಸಿನ ಬುದ್ಧಿ ನಾಲ್ವಡಿಯಾದುದಲ್ಲವೆ ?' ವ॥ ಎಂದು, ೭೪೯. 'ಯಾವ ರೀತಿ ಈತನಿಗೆ ಬಾಹುಕನೆಂಬ ಹೆಸರಾಯಿತು ? ಈಗ ಅದು ಹೇಗೆ ನಿವಾರಣೆಯಾಯಿತು ? ನಳಪ್ರಖ್ಯಾತಿ ಹೇಗೆ ಪ್ರಾಪ್ತವಾಯಿತು ?' ಎಂಬುದಾಗಿ ಇವುಗಳನ್ನು ಆತುರದಿಂದ ನೋಡಲೆಂದು ಋತುಪರ್ಣನು ಬಂದನು. ವ॥ ಹಾಗೆ ಋತುಪರ್ಣನು ಬಂದು ವಿನಯಪೂರ್ವಕವಾಗಿ ಕೇಳಲು, ೭೫೦. ಋತುಪರ್ಣನೆ ಕೇಳು, ಕಲಿಪುರುಷನು ಬಂದು ಅಡಸಲು ಹೊರಹೊರಟೆನು. ಎದುರಾಗಿ ಕರ್ಕೋಟಕನು ಕಂಡು ಬಂದು ತನಗಾದ ಪ್ರೀತಿಯಿಂದ ಕಚ್ಚಲು, ಕುರೂಪಿಯಾಗಿ ಬಾಹುಕನೆಂಬ ಹೆಸರಾಯಿತು ಕಲಿಪುರುಷನು ಬಿಟ್ಟು ತೆರಳಲು ಆ ಸರ್ಪ ಕೊಟ್ಟ ಎರಡು ಬಟ್ಟೆಗಳನ್ನು ಸರ್ವಾಂಗದಲ್ಲಿ ಧರಿಸಿ, ಅಶ್ವಹೃದಯದ ವಿದ್ಯೆಯನ್ನರಿತವನಾಗಿ ನನ್ನ ಊರಿಗೆ ಬಂದು ನಳನಾದೆನು.

ವ॥ ಎಂದೆಲ್ಲರಱಿವಂದದಿಂ ಋತುಪರ್ಣನಂ ಮನ್ನಿಸಿ ಕಳುಪಲಾತಂ

ಮತಿಯಂ ಲಜ್ಜೆಯನಾರ್ಜಿಸುತ್ತಮಿಕೆಯಂ ಸಾಮರ್ಥ್ಯಮಂ ಮುನ್ನಿನು
ನ್ನತಿಯುಂ ಸತ್ಯಮನೇಟಿಗೆ ವೆತ್ತ ಸುಖಮಂಮೆಯ್ಗಾಣ್ಕೆಯಂ ನೀತಿಯಂ
ಧೃತಿಯಂ ಧೈರ್ಯಮನುತ್ತಮಾಚರಣಮಂ ಗಾಂಭೀರ್ಯಮಂ [. . .]
ನುತಿಯಂ ಮತ್ತುಟಿದೆಲ್ಲಮಂ ಕಿಡಿಸುಗುಂ ಬೇದಾಸೆಯೆಂದು ನೃಪಂ ೭೫೧

ವ॥ ಎಂದಾತನತ್ತಲ್ ಪೋಗೆ

ಕಲಿಬಿಲದೊಳ್ ನಳೋರ್ವಿಪನಿದಾನ (ನಿಧಾನ?)ಮಹೀಂದ್ರ ವಿಷಾರ್ಚಿರಕ್ಷೆಯಿಂ
ಚಲಿಸದೆ ಪಾರ್ಥಿವಾಶ್ರಯದಿನಿರ್ದುದನುದ್ಧಮತಿ ಪ್ರಭಂಜನೋ
ಜ್ವಲಬಲದಿಂ ವಿದರ್ಭನೃಪನಂದನೆ ಸಾಧಕಿ ಕಂಡು ಸಾಧಿಸಲ್
ತೊಳಗುಗೆ(?)ಸಂತತಂ ನಿಳಯದೊಳ್ ನೆಲಸಿರ್ಪುದಿದೇಂ ವಿಚಿತ್ರಮೋ ೭೫೨

ವ॥ ಅಂತು ಕತಿಪಯದಿನಂಗಳಿರ್ದು

ಅಕ್ಷದ್ಯೂತದಿನೆನ್ನ ವಿ
ಪಕ್ಷಿಗೆ ಸೋಲ್ತೆಂ ಮದೀಯರಾಜ್ಯಮನಾತಂ
ಗಕ್ಷಯದುಃಖಮನೀವೆಂ
ಸ್ವಕ್ಷೇತ್ರಮನಾಡಿ ಗೆಲ್ವೆನಿದು ಸತ್ಯತರಂ ೭೫೩

ವ॥ ಎಂದು ಎಲ್ಲರೂ ತಿಳಿಯುವಂತೆ ಋತುಪರ್ಣನನ್ನು ಮನ್ನಿಸಿ ಕಳುಹಿಸಲು, ಆತನು ೭೫೧. ಹತಾಶೆಯು ಬುದ್ಧಿಯನ್ನೂ ನಾಚಿಕೆಯನ್ನೂ ಬಲಿಷ್ಠವಾದ ಶ್ರೇಷ್ಠತ್ವವನ್ನೂ ಶಕ್ತಿಯನ್ನೂ ಮೊದಲಿನ ಅಗ್ಗಳಿಕೆಯನ್ನೂ ಸತ್ಯವನ್ನೂ ಅಭಿವೃದ್ಧಿಗೊಂಡ ಸೌಖ್ಯವನ್ನೂ ಶರೀರದ ತೋರುವಿಕೆಯನ್ನೂ ನೀತಿಯನ್ನೂ ದಾರ್ಢ್ಯವನ್ನೂ ಧೈರ್ಯವನ್ನೂ ಶ್ರೇಷ್ಠವಾದ ನಡೆಯನ್ನೂ ಗಾಂಭಿರ್ಯವನ್ನೂ ಹೊಗಳಿಕೆಯನ್ನೂ ಮತ್ತು ಮಿಕ್ಕೆಲ್ಲವನ್ನೂ ನಾಶ ಮಾಡುತ್ತದೆಯೆಂಬುದಾಗಿ ನೃಪನು ಹೇಳಿದನು. ವ॥ ಎಂದು ಹೇಳಿ ಆತನು ಆ ಕಡೆ ತೆರಳಲು, ೭೫೨. ಕಲಿಪುರುಷನೆಂಬ ಬಿಲದಲ್ಲಿ ನಳಮಹಾರಾಜನೆಂಬ ನಿಧಿಯು (?) ಸರ್ಪೇಂದ್ರನ ವಿಷಜ್ವಾಲೆಯ ಆರೈಕೆಯಿಂದ ಅಲುಗಾಡದೆ ರಾಜನ ಆಶ್ರಯದಲ್ಲಿದ್ದುದನ್ನು ಅತ್ಯಂತ ಬುದ್ಧಿಶಾಲಿಯೂ ಸಾಧಕಿಯೂ ಆದ ವಿದರ್ಭರಾಜನ ಮಗಳಾದ ದಮಯಂತಿ ಪ್ರಬಲವಾದ ಬಿರುಗಾಳಿಯ ಬಲದಿಂದ ಅರಿತು (ಗಾಳಿಯ ವರ್ತಮಾನ ?) ಸಾಧಿಸಲು, ಮನೆಯಲ್ಲಿ ಸರ್ವದಾ ಕಾಂತಿ (ಹೊಳಪು) ನೆಲಸಿರುವುದೇನು ಆಶ್ಚರ್ಯವೇ ? ವ॥ ಹಾಗೆ ಕೆಲವು ದಿನಗಳಿದ್ದು ೭೫೩. ಪಗಡೆಯ ಆಟದಿಂದ ನನ್ನ ಎದುರಾಳಿಗೆ ನನ್ನ ರಾಜ್ಯವನ್ನು ಸೋತೆನು. ಆತನಿಗೆ ನಿರಂತರವಾದ ದುಃಖವನ್ನು ಉಂಟುಮಾಡುವೆನು. ನನ್ನ ರಾಜ್ಯ

ವ॥ ಎಂದು ವಿದರ್ಭರಾಜನಿಂ ಕಳುಹಿಸಿಕೊಂಡು

ಮಱುಜೂಜಂ ಕುಡಂವೇೞ್ಪುದಾಂ ರವಣಮಂ ಬೇೞ್ಪಂತುಟಂ ತಂದೆನೆಂ
ದಱಿಪಲ್ಕೊರ್ವ ಕಠೋರವಾಕ್ಯಮುಖನಂ ದೂತಟ್ಟೆ ತನ್ನೈಷಧಂ
ತಱಿಸಂದಂ ಕಲಿಪುಷ್ಕರಂಗೆ ಕಲಿಯಿಂ ಮುಂ ಸೋಲ್ತ ರಾಜ್ಯಕ್ಕೆ ಮೆ
ಯ್ಮಱುಕಂ ಪಿಂಗಿ ರಹಸ್ಯದಿಂ ಪುರಜನಂ ಕಂಡತ್ತು ಸೋತ್ಸಾಹದಿಂ ೭೫೪

ವ॥ ಅಂತು ವಿದರ್ಭನಿಂದಾದ ಸಕಲಸಂಭ್ರಮಮಂ ಬೆರಸು ನಳಂ ಬರ್ಪುದುಂ

ಬರವೇೞ್ ಪೋ ಮಱುಜೂಜನಾಡಿ ರವಣಂ ಪೋಗಿರ್ದ ತನ್ನಂಗನಾ
ಭರಣಂ ಪೋಗಿ ಸುಸಾಧ್ವಿಯುಂ ಸುದತಿಯುಂ ಸೋಲ್ವಂದಮುಂಟಾದೊಡಂ
ದರುಣಾಕ್ಷಂ ಸ್ಫುಟಕೋಪದಗ್ಧ ಹೃದಯಂ ದರ್ಪೋಷ್ಮನಂದಾಗಿ ಪು
ಷ್ಕರನಂ ತಾಂ ಮಗುೞ್ಚಿಟ್ಟದಂ ಕಡುಪಿನಿಂ ಬಂದಾತನಂ ದೂತನಂ ೭೫೫

ವ॥ ಅವನಾ ಮಾೞ್ಕೆಯಿಂ ಪೇೞ್ವುದುಂ ಪುಷ್ಕರನೆಡೆಗೆ ನೈಷಧಂ ಬಂದು

ಸರಿಸದ ಹೊನ್ನ ಬೆಳ್ಳಿಗಳ ಬಾರಿಯ ಸಾರಿಯನೈದು ನಾಲ್ಕು ನಾ
ಲ್ಕೆರಡುಮನೋರಣಂಬಡೆದು ಪೂಡಿ ಮದದ್ವಿಪ ದಂತದಕ್ಷಮಂ

ವನ್ನು ದ್ಯೂತವಾಡಿ ಗೆಲ್ಲುವೆನು. ಇದು ಸತ್ಯತರವಾದದ್ದು. ವ॥ ಎಂಬುದಾಗಿ ವಿದರ್ಭ ರಾಜನಿಂದ ಬೀಳ್ಕೊಂಡವನಾಗಿ, ೭೫೪. ಮರಳಿ ದ್ಯೂತವನ್ನಾಡಲು ಬರತಕ್ಕದು, ಬೇಡುವಷ್ಟು ದ್ರವ್ಯವನ್ನು ನಾನು ತಂದಿರುವೆನು ಎಂಬುದಾಗಿ ತಿಳಿಸಲು ಒಬ್ಬ ನಿಷ್ಠುರ ವಾದಿಯನ್ನು ಆ ನಳನು ದೂತನನ್ನಾಗಿ ಕಳುಹಿಸಲು ನಿರ್ಧರಿಸಿದನು. ಕಲಿಪುರುಷನಿಂದ ಕಲಿಪುಷ್ಕರನಿಗೆ ಸೋತ ರಾಜ್ಯಕ್ಕೆ ಮೈಯ ಕೊರಗು ಕುಗ್ಗಿ ಪುರಜನರು ಆಂತರಿಕವಾಗಿ ಉತ್ಸಾಹಯುತರಾಗಿ ತೋರಿಬಂದರು. ವ॥ ಅದೇ ರೀತಿಯಲ್ಲಿ ವಿದರ್ಭರಾಜನಿಂದ ಪಡೆದ ಸಮಸ್ತ ಸಂಭ್ರಮಸಮೇತನಾಗಿ ನಳನು ಬರಲು ೭೫೫. ಕೆಂಗಣ್ಣನೂ, ಸುವ್ಯಕ್ತವಾದ ಆಕ್ರೋಶದಿಂದ ಬೆಂದ ಹೃದಯವುಳ್ಳವನೂ ಔಡುಗಚ್ಚಿದವನೂ ಆದ ಪುಷ್ಕರನು "ಪುನಃ ದ್ಯೂತವಾಡಿ ದ್ರವ್ಯವನ್ನು ಕಳೆದುಕೊಂಡು, ಇದ್ದ ತನ್ನ ಹೆಂಡತಿಯ ಒಡವೆಗಳೂ ಹೋಗಿ, ಒಳ್ಳೆಯ ಸಾಧ್ವಿಯನ್ನೂ ತರುಣಿಯನ್ನೂ ಸೋಲಬೇಕೆಂದಿದ್ದರೆ, ಹೋಗಿ ಬರ ಹೇಳು" ಎಂದು ಬಂದಂತಹ ದೂತನನ್ನು ಉತ್ಸಾಹದಿಂದ ಪುನಃ ಕಳುಹಿಸಿಕೊಟ್ಟನು. ವ॥ ಅವನು ಅದೇರೀತಿ ಬಂದು ತಿಳಿಸಲು, ಪುಷ್ಕರನಿದ್ದಲ್ಲಿಗೆ ನಳನು ಬಂದು, ೭೫೬. ಸಮೀಪ ದಲ್ಲಿದ್ದ ಚಿನ್ನ ಬೆಳ್ಳಿಗಳ ದೊಡ್ಡ ಪಗಡೆಕಾಯಿಗಳನ್ನು ಐದು, ನಾಲ್ಕು, ನಾಲ್ಕು

ಪರಿಕಿಸಿ ನೋಡಿಯೊಡ್ಡವಿನಿತೆಂದು ಪಲರ್ ಕಿತವರ್ಗೆ ಕೋಪವಂ
ಕುರಿಸಲಿಳಾಧಿಪಂ ನಗುತ ಡಾಳಿಸಿದಂ ಬೆದಱಲ್ಕೆ ಪುಷ್ಕರಂ ೭೫೬

ಒಡ್ಡಿದ ಸಾರಿಯಿಂ ತಿವಿದ ಕಯ್ಯೊಡನಿಕ್ಕುವ ಕಟ್ಟಿ ಬಿಟ್ಟು ಮ
ತ್ತೊಡ್ಡುವ ಕೊಂಬನೆಬ್ಬಿಸುವ ಸಾರಿಗಳಂ ಸೆಱೆಗೆಯ್ವ ಜಾಣಿ(ಣ ?) ನಿಂ
ದೊಡ್ಡವನೊಯ್ಯನೇಱಿಸುವ ಡಾಳವನೊತ್ತುವ ತಿದ್ದಿಕೊಳ್ಳೆನಲ್
ಚಡ್ಡಿಸಿ ನಿಲ್ವ ನೂತನ ದುರೋದರಕೇಳಿ ಪಳಾಳವಲ್ಲವೇ ೭೫೭

ಏಱಿಸಿದೊಡ್ಡವಂ ಬಿಡದೆ ಗೆಲ್ವ ಕೆರಳ್ವತೆ ಲೆಕ್ಕದಾಯವಂ
ತೋಱಿದರೆಂಬ ಕೈಮಱೆಯದೊಂದೆರಡೆಂದೆಣಿಸುತ್ತ ರೇಖೆಯುಂ
ಕೀಱಿನ ದಾಯವಂ ಪಿಡಿವ ಕೋಪಿಸಿ ಗೆಲ್ವ ಪೆಱರ್ಗೆ ಡಾಳವಂ
ಮಾಱುವ ಬಿನ್ನಣಂಬಡೆದುದಂತವರಿರ್ವರೊಳಕ್ಷಖೇಳನಂ ೭೫೮

ದ್ವಿಗುಣಂ ಪೋದುದು ಪೋಗಲಿರ್ದಪುದದೊಚ್ಚತಂ ಬರಲ್ ಗೆದ್ದೆನಿ
ತ್ತಿಗನೊಂದೇ ಕಡು ಪೊಲ್ಲದುಂಟುಳಿದವೆಲ್ಲಂ ಕೊಂಬೆನೀಯರ್ಥವಂ
ತೆಗೆ ಕಯ್ಯಂ ಬಿಡು ಡಾಳಿಪೆಂ ತಡೆಯದಿರ್ ಹಾಸಂಗಿಯಂ ನಿನ್ನ ಬಾ
ಟ್ಕೆಗಿದೊಂದಾಟವೆನುತ್ತೆ ನೈಷಧನೃಪಂ ಗೆಲ್ದಂ ಸಮಸ್ತೋರ್ವಿಯಂ ೭೫೯

ಎರಡರಂತೆ ಅಣಿಯಾಗಿ ಹೂಡಿ, ಮದಿಸಿದ ಆನೆಯ ದಂತದ ದಾಳವನ್ನು ಪರೀಕ್ಷಿಸಿ ನೋಡಿ, ಕೆಲವು ಕಪಟಿಗಳಿಗೆ ಕೋಪವುಂಟಾಗಲು, ಪುಷ್ಕರನು ಹೆದರಲು, ಪಣವಿಷ್ಟೆಂದು ನಗುನಗುತ್ತ ರಾಜನು ಉರುಳಿಸಿದನು. ೭೫೭. ಮುಂದಿದ್ದ ಪಗಡೆಯ ಕಾಯಿಗಳಿಂದ ತಿವಿಯುವ, ಕಯ್ಯೊಂದಿಗೆ ಇಡುವ, ಕಟ್ಟಿ ಬಿಟ್ಟು ಮತ್ತೆ ಹಾಕುವ, ಕೊಂಬನೆಬ್ಬಿಸುವ (?) ಪಗಡೆಯ ಕಾಯಿಗಳನ್ನು ದೋಚಿಕೊಳ್ಳುವ, ಜಾಣ್ಮೆಯಿಂದ (?) ಪಣವನ್ನು ಕೂಡಲೆ ಹೆಚ್ಚಿಸುವ, ಠಕ್ಕನ್ನು ಮುಂದೊಡ್ಡುವ, ತಿದ್ದಿಕೋ ಎನ್ನಲು ಸರಿಪಡಿಸಿಕೊಂಡು ನಿಲ್ಲುವ ಹೊಸರೀತಿಯಾದ ಪಗಡೆಯ ಆಟ ಮೋಸವಲ್ಲವೆ ? ೭೫೮. ಆ ಗೀತಿ ಅವರಿಬ್ಬರಲ್ಲಿನ ಪಗಡೆಯ ಆಟವು ಏರಿಸಿದ ಪಣವನ್ನು ಬಿಡದೆ ಗೆಲ್ಲುವ, ಕೆರಳುವ, ಛೆ ! ಲೆಕ್ಕದ ಆದಾಯವನ್ನು ತೋರಿದರೆನ್ನುವ, ಕೈತಪ್ಪದೆ ಒಂದು ಎರಡು ಎಂದು ಎಣಿಸುತ್ತ ರೇಖೆಯನ್ನೂ(?), ಕೀರಿನ (ಗುರುತಿನ ?) ದಾಳವನ್ನೂ ಹಿಡಿವ, ಕೋಪಗೊಂಡು ಗೆಲ್ಲುವ, ಮತ್ತೊಬ್ಬರಿಗೆ ಠಕ್ಕನ್ನು ಬಗೆಯುವ (?) ಬುದ್ಧಿಯನ್ನು ಪಡೆಯಿತು. ೭೫೯. ದುಗ ಹೋಯಿತು; ಹೋಗಲಿದ್ದ ಅದು ಒಟ್ಟಾಗಿ ಕೂಡಿಬರಲು ಗೆದ್ದೆನು. ಇತ್ತಿಗವೊಂದೇ ಬಹಳ ಕೆಟ್ಟದ್ದು ; ಉಳಿದುವೆಲ್ಲವನ್ನೂ ತೆಗೆದುಕೊಳ್ಳುವೆನು. ಈ ಹಣ ಅತ್ತಿಡು ; ಕಯ್ಯನ್ನು ಬಿಡು ; ಡಾಳಿಸುವೆನು (ಕೈಚಳಕ ತೋರಿಸುತ್ತೇನೆ ?)' ಪಗಡೆಯಹಾಸನ್ನು ತೆಗೆಯದಿರು ; ನಿನ್ನ ಬದುಕಿಗೆ ಇದೊಂದು ಆಟ (ಆಡೋಣ) !·

ಬೇಡಿದ ದಾಯಂ ಬೀಟಲ್
ಪೂಡಿದ ಪಲಗೆಗಳನೆಲ್ಲಮಂ ಗೆಲ್ದಂ ಕೈ
ಗೂಡಿತ್ತು ಬಯಕೆ ನೃಪತಿಗೆ
ಗಾಡಿಯೊಳೇದಕ್ಷಹೃದಯಮೇಂ ಕೇವಳಮೋ ೭೬೦

ತುರಗ[ಮ]ನಿಭಮಂ ಕೋಶವ
ನರಮನೆಯೊಳಗುಳ್ಳುದೆಲ್ಲವ ರಾಜ್ಯವನೊಂ
ದರೆಜಾವದೊಳಾಡಿ ನರೇ
ಶ್ವರನನಿತಂ ಗೆಲ್ದು ನೂಂಕಿದಂ ಪುಷ್ಕರನಂ ೭೬೧

ವ॥ ಅಂತು ನೂಂಕಿ,

ವನಿತೆಯರೊಲ್ಮೆ ನೀಚರ ಸಖಿತ್ವ ಸಪತ್ನರ (ವಸತ್ಕರ) ಮಾತು ಕನ್ನಗ
ಳ್ಳರ (?) ವಿಭವಂ ನೃಪಾಲಕರ ಮನ್ನಣೆ ಬೂದಿಯ ಬೊಟ್ಟು ಯೌವನಂ
ಕನಸಿನರಾಜ್ಯಮುಕ್ಕಿವದ ರೂಪು ಬುಧರ್ಕಳ ಕೋಪದೇಟಿಗ್ಗೆ ಜೂ
ಜಿನ ಸಿರಿ ನಿತ್ಯವೆಂದು ಪರಿಣಾಮಿಸುವರ್ ಮರುಳೆನ್ನದಿರ್ಪರೇ ೭೬೨

ವ॥ ಆಗಳ್

ಮಿಗೆ ತಲೆಗುತ್ತಿ ಬಾಯೊಣಗಿದಂತಿನಿತಿಲ್ಲದೆ ಕಂಡ ಕಂಡರಂ
ನಗೆಗೆಡೆಯಾಗಿ ಕಯ್ಯ ಚಿಟಕಂ ಕಳೆವುತ್ತಿರದೊಯ್ಯನೆದ್ದು ಮಂ

ಎನ್ನುತ್ತ ನಳಮಹಾರಾಜನು ಅಖಿಲ ಭೂಮಂಡಲವನ್ನೂ ಗೆದ್ದನು. ೭೬೦. ಬೇಡಿದ ದಾಯವು ಬೀಳಲು ಹೂಡಿದ ಹಲಗೆ (ಆಡಿದ ಆಟ ; ಬಡ್ಡಿದ ಪಣ ?) ಗಳೆಲ್ಲವನ್ನೂ ಗೆದ್ದನು. ರಾಜನಿಗೆ ಅಂದು ಮನದಾಸೆಯು ಚೆನ್ನಾಗಿ ನೆರವೇರಿತು. ದ್ಯೂತದ ಅಂತರಂಗವೇನು ಕೇವಲವಾದುದೆ ? ೭೬೧. ಮಹಾರಾಜನು ಕುದುರೆಯನ್ನೂ ಆನೆಯನ್ನೂ, ಭಂಡಾರವನ್ನೂ, ಅರಮನೆಯಲ್ಲಿದ್ದ ಎಲ್ಲವನ್ನೂ, ರಾಜ್ಯವನ್ನೂ, ಸಮಸ್ತವನ್ನೂ ಒಂದು ಅರ್ಧಜಾವದಲ್ಲಿಯೇ ಜೂಜಾಡಿ ಜಯಿಸಿ, ಪುಷ್ಕರನನ್ನು ಅತ್ತ ಸರಿಸಿದನು. ವ॥ ಹಾಗೆ ಒತ್ತರಿಸಿ, ೭೬೨. ಹೆಂಗಸರ ಪ್ರೇಮ, ನೀಚರ ಸ್ನೇಹ, ದಾಯಾದಿಗಳ ಮಾತು (ಸುಳ್ಳುಗಾರರ ಮಾತು), ಕನ್ನಗಳ್ಳರ ವೈಭವ, ರಾಜರ ಮನ್ನಣೆ, ಬೂದಿಯ ಬೊಟ್ಟು, ಯೌವನ, ಕನಸಿನರಾಜ್ಯ, ಮೋಸದ ಸ್ವರೂಪ, ವಿದ್ವಾಂಸರ ಕೋಪಾತಿರೇಕ, ಜೂಜಿನಿಂದ ಗಳಿಸಿದ ಸಂಪತ್ತು ಶಾಶ್ವತವೆಂದು ಪರಿಭಾವಿಸುವವರು ಮರುಳರೆಂದು ಹೇಳದಿರುವರೆ ? ವ॥ ಆಗ, ೭೬೩. ತುಂಬ ತಲೆತಗ್ಗಿಸಿಕೊಂಡು, ಬಾಯಿ ಒಣಗಿ ಬಂದಂತೆ, ಸ್ವಲ್ಪವೂ ಬಿಡದೆ ನೋಡಿ, ನೋಡಿದವರ ನಗೆಗೆ ಗುರಿಯಾಗಿ, ಕೈಯ ನೆಟ್ಟಿಗೆಯನ್ನು ತೆಗೆಯುತ್ತ, ತಪ್ಪದೆ, ಕೂಡಲೆ ಎದ್ದು, ತಲೆಯ ಮೇಲೆ

ಡೆಗೆ ಮುಸುಗಿಕ್ಕಿ ಮಯ್ಮಱೆದು ಸುಱ್ರನೆ ಸುಯ್ದೆಡೆಗೆಟ್ಟು ಸೋಲ್ತ
ಪುಷ್ಕ(?)ರನಡಿಯಿಟ್ಟನೊಂದೆರಡನಂತದನೀಕ್ಷಿಸಿದಂ ನಳೋರ್ವೀಪಂ ೭೬೩

ನಿನ್ನಾಧೀನವೆ ಕಲಿ ಮುಳಿ
ದೆನ್ನಂ ಬೇಸಱಿಸಲೆಂದು ಜೂಜಿನ ನೆವದಿಂ
ಬೆನ್ನಟ್ಟಿ ಬಿಟ್ಟ (ಟ್ಟೆ?)ನಲ್ಲದೆ
ಮುನ್ನೆಂದುಂ ಸೋಲವೆಂಬುದಂ ಕೇಳ್ದಱಿಯಂ (ಯಾ?) ೭೬೪

ನಿನ್ನಯ ಮನೆವಾೞ್ತೆಗೆ ಮಿಗೆ
ಮುನ್ನೊಂದೆರಡೂರ್ಗಳುಂಟವಂ ಪಾಲಿಸಿಕೊಂ
ಡೆನ್ನಯ ರಾಜ್ಯದೊಳಿರು ಸುಖ
ದಿಂ ನೀನೆಂದಂದು ಕಳುಪಿದಂ ಪುಷ್ಕರನಂ ೭೬೫

ವ|| ಆಗಳ್

ರವಿ ತಲೆದೋಱಲಂಬುಜವರಲ್ದೊಡಗಿರ್ದಳಿ ಪಾಱುವಂತೆ ಮಾ
ಧವಋತುವೆಯ್ತರಲ್ ತರುಚಯಂ ಪಸುರೇಱೆ ಸುರುಳ್ದು ನೀಳ್ದ ಪಂ
ದೊವಲುದಿರ್ವಂತೆ ನೈಷಧನೃಪಂ ಬರಲಾ ನಿಷಧೋರ್ವಿ ಪೆರ್ಚಿಯು
ತ್ಸವದಿನಿರಲ್ಕೆ ಪೋದನುಸುರಿಕ್ಕದೆ ತಸ್ಕರನಂತೆ ಪುಷ್ಕರಂ ೭೬೬

ಮುಸುಕನ್ನು ಹೊದೆದು, ಮೈಮರೆತು, ಸುರ್ರನೆ ನಿಟ್ಟುಸಿರುಬಿಟ್ಟು, ಪರದೇಶಿಯಾಗಿ ಸೋತ ಪುಷ್ಕರನು ಒಂದೆರಡು ಹೆಜ್ಜೆಗಳನ್ನಿಟ್ಟನು. ನಳಮಹಾರಾಜನು ಅದನ್ನು ನೋಡಿದನು. ೭೬೪. ಕಲಿಪುರುಷನು ನಿನ್ನ ಆಧೀನವೆ ? ಕೋಪಿಸಿಕೊಂಡು ನನ್ನನ್ನು ಕಾಡಲೆಂದು (ಬೇಸರಿಕೆಯನ್ನುಂಟುಮಾಡುವುದು) ದ್ಯೂತದ ನೆವದಿಂದ ಬೆನ್ನಟ್ಟಲು ಬಿಟ್ಟೆನು. ಅಲ್ಲದೆ ಈ ಮೊದಲು ಸೋಲೆಂಬುದನ್ನು ಕೇಳಿಬಲ್ಲವನಲ್ಲ. ೭೬೫. ನಿನ ಜೀವನೋಪಾಯಕ್ಕೆ ಈ ಮೊದಲಿನ ಒಂದೆರಡು ಊರುಗಳಿವೆ. ಅವುಗಳನ್ನು ಆಳಿಕೊಂಡು ನೀನು ಸುಖವಾಗಿ ನನ್ನ ರಾಜ್ಯದಲ್ಲಿರೆಂದು ಪುಷ್ಕರನನ್ನು ಕಳುಹಿಸಿಕೊಟ್ಟನು. ವ|| ಆಗ, ೭೬೬. ಸೂರ್ಯನು ಉದಯಿಸಲು ತಾವರೆ ಅರಳಿ ಮಲಗಿದ್ದ ತುಂಬಿ ಹಾರುವಂತೆಯೂ, ವಸಂತಋತು ಆಗಮಿಸಲು ಗಿಡಗಳ ಸಮೂಹವು ಹಸುರೇರಿ, ಸುರುಟಿ ವ್ಯಾಪಿಸಿದ್ದ ಹಸಿಯ ತೊಗಟೆ ಉದುರುವಂತೆಯೂ, ನಳಮಹಾರಾಜನು ಬರಲು, ಆ ನಿಷಧದೇಶವು ಹಿಗ್ಗಿ ವೈಭವದಿಂದಿರಲು ಪುಷ್ಕರನು ಕಳ್ಳನಂತೆ ಉಸಿರಾಡದೆ ಹೊರಟುಹೋದನು.

ವ॥ ಆಗಳ್

ಸುರೆಯುಂ ಬಾಡವಧೂಮವುಂ [ಗರಳಮಂ] ಶೈವಾಳವಂ ಭಂಗದಂ
ನೊರೆಯುಂ ನೂಂಕಿ ಸುರದ್ರುವಿಂದಮೃತದಿಂ ಶ್ರೀಕಾಂತೆಯಿಂ ರತ್ನದಿಂ
ಹರಿಯಿಂ ನಿತ್ಯಮಹತ್ತ್ವಮಂ ಪಡೆದು ದುಗ್ಧಾಂಭೋಧಿಯೊಲ್ ಸಂತತಂ
ಪರಮಪ್ರೀತಿಯೊಳಿರ್ದ ನೈಷಧಪುರಂ ಚೆಲ್ವಾಯ್ತು ಸತ್ಸಂಗದಿಂ ೭೬೭

ವಿಮಲಪುರಕ್ಕಂದಾದುದು
ವಿಮಳತ್ವಂ ದುಷ್ಟಪುಷ್ಕರಂ ಪೋದಂ ವಿ
ಕ್ರಮಿ ಲೋಕಬಂಧು ಬಂದಂ
ದಮಯಂತೀವಲ್ಲಭಂ ಪರಾರ್ಥಚರಿತ್ರಂ ೭೬೮

ವ॥ಬಳಿಯುಂ

ಪರಮಪ್ರೀತಿಯನಪ್ಪುಕೆಯ್ದು ನಳಧಾತ್ರೀವಲ್ಲಭಂ ಸಿಂಹವಿ
ಷ್ಟರದೊಳ್ ಕುಳ್ಳಿರಲಚ್ಛವೊತ್ತಳಿಕೆಯಿಂ ಮಂತ್ರಿವ್ರಜಂ ರಾಜಪು
ತ್ರರನೇಕರ್ ನಿಜಪೌರರಾಪ್ತರೊಸೆದೆಯ್ತಂದೆಲ್ಲರುಂ ಕಾಣ್ಕೆಯುಂ
ಚರಣಕ್ಕಿತ್ತು ನಿರೀಕ್ಷಿಸುತ್ತೆ ಮುಖಮಂ ಕಯ್ಯೆತ್ತಿ ಮಯ್ಯಿಕ್ಕಿದರ್ ೭೬೯

ವಾರವಧೂಜನಂ ಕನಕಪಾತ್ರದೊಳೊಪ್ಪುವ ರತ್ನದೀಪದಿಂ
ದಾರತಿಯೆತ್ತಿ ತಮ್ಮ ನಯನಪ್ರಭೆಯಿಂ ಕುಸುಮೋಪಹಾರಮಿ

ವ॥ ಆಗ, ೭೬೭. ಮದ್ಯವನ್ನೂ ಮಾಂಸದ ಹೊಗೆಯನ್ನೂ [ವಿಷವನ್ನೂ], ಪಾಚಿಯನ್ನೂ ಭಗ್ನತೆಯನ್ನೂ ನೊರೆಯನ್ನೂ ಸರಿಸಿ, ಕಲ್ಪವೃಕ್ಷದಿಂದಲೂ ಅಮೃತದಿಂದಲೂ, ಲಕ್ಷ್ಮಿಯಿಂದಲೂ ರತ್ನದಿಂದಲೂ ವಿಷ್ಣುವಿನಿಂದಲೂ ನಿತ್ಯಮಹತ್ವವನ್ನು ಪಡೆದ ಕ್ಷೀರಸಮುದ್ರದಂತೆ ಸರ್ವದಾ ಪರಮಪ್ರೀತಿಪುರಸ್ಸರವಾಗಿದ್ದ ನಿಷಧದೇಶವು ಸತ್ಸಹವಾಸದಿಂದ ಸುಂದರವಾಯಿತು. ೭೬೮. ವಿಮಲಪಟ್ಟಣಕ್ಕೆ ಅಂದು ವಿಮಳತ್ವವುಂಟಾಯಿತು, ಕ್ರೂರಿಯಾದ ಪುಷ್ಕರನು ಹೊರಟುಹೋದನು. ಪರಾಕ್ರಮಿಯೂ, ಲೋಕಬಂಧುವೂ ಪರೋಪಕಾರನಿರತನೂ ಆದ ದಮಯಂತಿಯ ಒಡೆಯನು ಬಂದನು. ವ॥ ಅನಂತರ, ೭೬೯. ಶ್ರೇಷ್ಠವಾದ ಪ್ರೀತಿಯನ್ನು ತಾಳಿ ನಳಮಹಾರಾಜನು ಸಿಂಹಾಸನದಲ್ಲಿ ಕುಳಿತಿರಲು, ಸ್ವಚ್ಛವಾಗಿ ಒಟ್ಟುಗೂಡಿ (?), ಮಂತ್ರಿಸಮೂಹ, ಅನೇಕ ರಾಜಪುತ್ರರು, ನಿಜಪ್ರಜೆಗಳು, ಮಿತ್ರರು ಒಲಿದು ಎಲ್ಲರೂ ಬಂದು ಕಾಣಿಕೆಯನ್ನು ಪಾದಕ್ಕೆ ಒಪ್ಪಿಸಿ, ಮುಖವನ್ನು ನೋಡುತ್ತ, ಕೈಎತ್ತಿ ನಮಸ್ಕರಿಸಿದರು. ೭೭೦. ವಾರಾಂಗನೆಯರು ಚಿನ್ನದ ತಟ್ಟೆಯಲ್ಲಿ ಸೂಕ್ತವಾದ ರತ್ನದೀಪದಿಂದ ಆರತಿಯೆತ್ತಿ, ತಮ್ಮ ಕಣ್ಣುಗಳ ಕಾಂತಿಯಿಂದ ಕುಸು

ಸ್ಫಾರವನೊಲ್ದು ಮಾಡಿ ಮಣಿಕಂಕಣಝುಂಕೃತಿಯೊಪ್ಪೆ ಸಾರ್ದು ಕೊ
ಪಾರತರಂಗಸಾಮ್ಯ ಸಿತಚಾಮರಮಂ ನಲಿದಿಕ್ಕಿದರ್ ಕೆಲರ್ ೭೭೦

ಪುರದೊಳಗಷ್ಟಶೋಭೆ ಪರಿರಂಜಿಸಲೊಪ್ಪುವ ಕೇರಿಕೇರಿಯೊಳ್
ಪರಿಪರಿಯಾಡೆ ಪೌರಜನವೆಣ್ದೆಸೆಯಂ ಮಿಗೆ ವಾದ್ಯಘೋಷಮಂ
ಬರ ನವರತ್ನ ಹೇಮಕುಸುಮಂಗಳನಿಕ್ಕೆಲದೊಳ್ ನಿವಾರಿಸು
ತ್ತುರುಮುದದಿಂ ನಮಸ್ಕರಿಸಿ ಕಯ್ಮುಗಿದಿರ್ದುದು ಸೇವಕವ್ರಜಂ ೭೭೧

ವ॥ ಅಂತಿರ್ದು

ಮಱುಜೂಜನಾಡಿ ಗೆಲ್ದಂ
ಪೊಱಮಡಿಸಿದೆನೆನ್ನ ರಾಜ್ಯದಿಂ ಪುಷ್ಕರನಂ
ಕುಱುಪಿದು ತನಯರ್ಸಹಿತಂ
ಮಱುದಿವಸಂ ಮತ್ಪುರಕ್ಕೆ ಬಪ್ಪುದು ಬೇಗಂ ೭೭೨

ವ॥ ಅಂತು ದಮಯಂತಿಯಂ ಕರಸೆ

ವನಿತಾರತ್ನ ವಿದರ್ಭನಿಂದ ನೃಜಗತ್ಪ್ರಖ್ಯಾತನಿಂ ತಾತನಿಂ
ವಿನಯಂ ಕೈಮಿಗಲಂಘ್ರಿಗಳ್ಗೆಱಗಿ ತಾಂ ಬೀೞ್ಕೊಂಡು ಸಂತೋಷದಿಂ

ಮಾರ್ಜನೆಯನ್ನು ಬಹುವಾಗಿ ಮೆಚ್ಚಿ ಮಾಡಿ, ಮಣಿಖಚಿತವಾದ ಕೈಬಳೆಗಳ ಝೇಂಕೃತಿ ಒಪ್ಪಲು ಹತ್ತಿರ ಸಾರಲು, ಕೆಲವರು ಸಮುದ್ರದ ಅಲೆಗಳಂತಹ ಬಿಳಿಯ ಚಾಮರವನ್ನು ಸಂತೋಷದಿಂದ ಬೀಸಿದರು. ೭೭೧. ಪಟ್ಟಣದಲ್ಲಿ ಮಂಗಳಸೂಚಕವಾದ ಎಂಟು ಬಗೆಯ ಅಲಂಕಾರಗಳು (ಸುಣ್ಣ ಬಣ್ಣಗಳನ್ನು ಹಚ್ಚುವುದು, ಸುಗಂಧದ್ರವ್ಯಗಳಿಂದ ಸಾರಣೆ, ರಂಗವಲ್ಲಿ, ತಳಿರುತೋರಣ, ಧ್ವಜವನ್ನು ಏರಿಸುವುದು, ಪುಷ್ಪಗುಚ್ಛಗಳಿಂದ ಅಲಂಕರಿಸುವುದು, ಚಪ್ಪರಹಾಕುವುದು, ಮೇಲುಕಟ್ಟು ಕಟ್ಟುವುದು–ಶ್ರೀವತ್ಸ ನಿಘಂಟು, ಪುಟ ೪೫೭) ವಿರಾಜಿಸಲು, ಒಪ್ಪುವ ಬೀದಿಬೀದಿಗಳಲ್ಲಿ ಊರಜನರು ಓಡಾಡಲು, ವಾದ್ಯಗಳ ಮೊಳಗು ಎಂಟು ದಿಕ್ಕುಗಳಿಗೂ ವ್ಯಾಪಿಸಿರಲು, ವಸ್ತ್ರ, ನವರತ್ನ, ಚಿನ್ನದ ಹೂವುಗಳನ್ನು ಎರಡು ಕಡೆಗಳಲ್ಲಿಯೂ ಸುರಿಸುತ್ತ ತುಂಬಿದ ಸಂತೋಷದಿಂದ ಸೇವಕರ ಸಮೂಹ ನಮಸ್ಕರಿಸಿ, ಕೈಮುಗಿಯುತ್ತಿತ್ತು. ವ॥ ಹಾಗಿದ್ದು, ೭೭೨. ಪುನಃ ದ್ಯೂತವಾಡಿ ಗೆದ್ದು ನನ್ನ ರಾಜ್ಯದಿಂದ ಪುಷ್ಕರನನ್ನು ಹೊರಕ್ಕೆ ಅಟ್ಟಿದೆನು. ಇದೀಗ ಗುರುತು ! ಮಕ್ಕಳೊಡನೆ ಮರುದಿನವೇ ನನ್ನ ಪಟ್ಟಣಕ್ಕೆ ಬೇಗ ಬರತಕ್ಕುದು. ವ॥ ಹಾಗೆ ದಮಯಂತಿಯನ್ನು ಕರೆಸಲು. ೭೭೩. ವನಿತಾರತ್ನವನ್ನು (ಪಡೆದ) ವಿದರ್ಭರಾಜನಿಂದ, ಜನಪ್ರಪಂಚದಲ್ಲಿಯೇ ಪ್ರಖ್ಯಾತನಾದವನಿಂದ, ತಂದೆಯಿಂದ ತಾನು ಬೀಳ್ಕೊಂಡು ವಿನಯವು

ಜನಲೋಕಕ್ಕೆ ನವೀನಮೆಂದಜನ ಲೋಕಂ ಬಪ್ಪವೊಲ್ ಬಪ್ಪಳಂ (ಬಂದಳಂ?)
ಗನೆ ಪುತ್ರರ್ವೆರಸೊಲ್ದು ನೈಷಧಪುರಕ್ಕಾನಂದಸಂದೋಹದಿಂ ೭೭೩

ನಿರುಪಮ ಸಂಪದಂ ಸಕಳರಾಜ್ಯಸಮೃದ್ಧಸುಖಪ್ರವರ್ಧನಂ
ಪರಮಮಹೋತ್ಸವಂ ನಿಜಕಳತ್ರತನೂಭವ ಬಂಧುಸಂಗಮಂ
ಸ್ಥಿರತರಮಪ್ಪಿನಂ ತನಗನೇಕಯುಗಂ ವಿಜಯಪ್ರತಾಪದಿಂ
ನಿರವಧಿ ಕೀರ್ತಿಯುಂ ತಳೆದು ರಂಜಿಸುತಿರ್ದನುದಾರ ವಿಕ್ರಮಂ ೭೭೪

ಈ ಕೃತಿಯಂ ಮನಂ ಬಯಸಿ ಕೇಳ್ವ ಜನರ್ಗೆ ಸಮಸ್ತಶಾಶ್ವತ
ಶ್ರೀಕೃಪೆ ಪಿಂಗದಿರ್ಕೆ ಸತತಂ ಪರಮೋತ್ಸವ ನಿತ್ಯವೈಭವ
ಶ್ರೀಕೃತದೇಟ್ಗೆ ರಂಜಿಸುಗೆ ಕಲ್ಪಶತಂ ಕಲಿ ಪೊರ್ದದಿರ್ಕೆ ಶೋ
ಭಾಕೃತಿಯೊಂದಿ ನಿಲ್ಕೆ ಧರೆ ಮೇರು ಮಹೀಧರಮೊಪ್ಪುತಿರ್ಪಿನಂ ೭೭೫

ಬಾಣಾಸುರ ವಿಜಯಂ ಕ
ಲ್ಯಾಣನಳಖ್ಯಾತಿ ದಶಕುಮಾರಚರಿತ್ರಂ
ಕ್ಷೋಣೀಜನಕರ್ಣಮನಃ
ಪ್ರೀಣನಮಿವು ಚೌಂಡರಾಜ ವಿರಚಿತ ಕೃತಿಗಳ್ ೭೭೬

---

ತುಂಬಿ ತುಳುಕಲು ಪಾದಗಳಿಗೆ ನಮಸ್ಕರಿಸಿ, ಸಂತೋಷದಿಂದ ಜನಲೋಕಕ್ಕೇ ಹೊಸ ತೆಂಬುದಾಗಿ ಬ್ರಹ್ಮಲೋಕವೇ ಬರುವಂತೆ ತರಳೆಯಾದ ದಮಯಂತಿ ಮಕ್ಕಳೊಂದಿಗೆ ಅಮಿತವಾದ ಆನಂದದಿಂದ ಪ್ರೀತಿಯಿಂದ ನಿಷಧದೇಶಕ್ಕೆ ಬಂದಳು. ೭೭೪. ಅಸದೃಶವಾದ ಐಶ್ವರ್ಯ, ಸಮಸ್ತ ರಾಜ್ಯ, ಸಮೃದ್ಧ ಸುಖಸಂವರ್ಧನೆ, ಶ್ರೇಷ್ಠ ಮಹೋತ್ಸವ, ತನ್ನ ಹೆಂಡತಿ ಮಕ್ಕಳು ನಂಟರ ಒಡಗೂಡುವಿಕೆಗಳು ಶಾಶ್ವತವಾಗುವಂತೆ ತನಗಾದ ಅನೇಕ ಯುಗಗಳ ವಿಜಯಶೌರ್ಯದಿಂದ ಮೇರೆಯಿಲ್ಲದ ಯಶಸ್ಸನ್ನು ಗಳಿಸಿ, ಉದಾರ ಪರಾಕ್ರಮಶಾಲಿಯಾದ ನಳನು ವಿರಾಜಿಸುತ್ತಿದ್ದನು. ೭೭೫. ಈ ಕಾವ್ಯವನ್ನು ಆಸೆಪಟ್ಟು ಕೇಳುವ ಜನಕ್ಕೆ ಸಕಲ ಶಾಶ್ವತವಾದ ಲಕ್ಷ್ಮೀಕೃಪೆ ಹಿಂಗದಿರಲಿ; ಸರ್ವದಾ ಮಂಗಳೋತ್ಸವ, ನಿತ್ಯವಿಜೃಂಭಣೆ, ಲಕ್ಷ್ಮೀನಿಯಾಮಕವಾದ ಅಭಿವೃದ್ಧಿಗಳು ವಿರಾಜಿಸಲಿ; ನೂರಾರು ಕಲ್ಪಗಳವರೆಗೆ ಕಲಿಪುರುಷನು ಬಂದು ಆಡಸದಿರಲಿ; ಭೂಮಿ, ಮೇರು ಪರ್ವತಗಳು ತೋರಿಬರುತ್ತಿರುವವರೆಗೆ ಪ್ರಕಾಶಮಾನವಾದ ಮೂರ್ತಿಸ್ವರೂಪವನ್ನು ತಾಳಿ ನಿಲ್ಲಲಿ. ೭೭೬. ಭೂಮಂಡಲದ ಜನರ ಕಿವಿಗಳಿಗೂ ಮನಸ್ಸಿಗೂ ಪ್ರಿಯಕರವಾದ ಬಾಣಾಸುರ ವಿಜಯ, ಸುಪ್ರಸಿದ್ಧವಾದ ನಳಕಲ್ಯಾಣ, ದಶಕುಮಾರಚರಿತ್ರ ಎಂಬಿವು ಚೌಂಡರಾಜನಿಂದ ರಚಿತವಾದ ಕೃತಿಗಳು.

---

